ಪ್ರತಿಭಾವಂತ
ಸಂಸದೀಯ ಪಟು
ಪುಸ್ತಕ ಮಾಲಿಕೆ

# ಬಸವರಾಜೇಶ್ವರಿ

ಪ್ರಹ್ಲಾದ ಬೆಟಗೇರಿ

__ಪ್ರಕಟಣೆ__
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

# BASAVARAJESHVARI

Eminent Parlimentarian Series

Written by
**Prahalad Betageri**
Poet & Artist,
# Flat No. 202 GF Harsha Apartment,
Chikkalasandra,
Bangalore-61. Cell: 92431 02077

**Published** by
Karnataka Legislature Library Committee
Vidhana Soudha, Bangalore-560001.
Page: 215 + ix Price: 20-00 Rs.



First Edition: 2006 Copies: 2000
**Printed & Designed by**
Government Press, Bangalore.

ಬಸವರಾಜೇಶ್ವರಿ

ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

ಲೇಖಕರು:
ಪ್ರಹ್ಲಾದ ಬೆಟಗೇರಿ
ಕವಿ-ಕಲಾವಿದ
ನಂ. 202 ಹರ್ಷ ಅಪಾರ್ಟ್‌ಮೆಂಟ್, ಸ್ನೇಹಾ ಕಾಲೋನಿ, ಚಿಕ್ಕಲ್ಲಸಂದ್ರ,
ಬೆಂಗಳೂರು-61 ಮೊಬೈಲ್: 92431 02077

ಪ್ರಕಾಶನ
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 215 + ix ಬೆಲೆ: 20/- ರೂ.



ಮೊದಲ ಮುದ್ರಣ: 2006 ಪ್ರತಿಗಳು: 2,000
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2005-2006

*ಅಧ್ಯಕ್ಷರು*

ಸಚ್ಚಿದಾನಂದ ಲ.ಖೋತ

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

(ದಿನಾಂಕ 17.06.2006 ರಿಂದ)

*ಅಧ್ಯಕ್ಷರು*

ವಿ.ಆರ್. ಸುದರ್ಶನ್

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

(ದಿನಾಂಕ 17.06.2006 ರವರೆಗೆ)

*ಸದಸ್ಯರು*

ಕೃಷ್ಣ

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

ವಿಶ್ವನಾಥ್ ಪಾಟೀಲ್ ಹೆಬ್ಬಾಳ್

ವಿಧಾನಸಭಾ ಸದಸ್ಯರು ಹಾಗೂ

ಉಪ ಸಮಿತಿಯ ಅಧ್ಯಕ್ಷರು

ಜಿ.ಎಸ್. ಗಡ್ಡದೇವರ ಮಠ

ವಿಧಾನಸಭಾ ಸದಸ್ಯರು

ಆರ್. ಧ್ರುವನಾರಾಯಣ್

ವಿಧಾನಸಭಾ ಸದಸ್ಯರು

ಕಳಕಪ್ಪ ಜಿ. ಬಂಡಿ

ವಿಧಾನಸಭಾ ಸದಸ್ಯರು

ಡಾ|| ವೀರಬಸವಂತರೆಡ್ಡಿ ಮುದ್ನಾಳ್

ವಿಧಾನಸಭಾ ಸದಸ್ಯರು

ಡಾ. ಚಂದ್ರಶೇಖರ ಬಿ. ಕಂಬಾರ

ವಿಧಾನ ಪರಿಷತ್ ಸದಸ್ಯರು

ಮುಖ್ಯಮಂತ್ರಿ ಚಂದ್ರು

ವಿಧಾನ ಪರಿಷತ್ ಸದಸ್ಯರು

(ದಿನಾಂಕ 24.07.2006 ರವರೆಗೆ)

ಉಮಾಶ್ರೀ

ವಿಧಾನ ಪರಿಷತ್ ಸದಸ್ಯರು

(ದಿನಾಂಕ 24.07.2006 ರವರೆಗೆ)

ಶ್ರೀನಾಥ್

ವಿಧಾನ ಪರಿಷತ್ ಸದಸ್ಯರು

(ದಿನಾಂಕ: 24.7.2006 ರಿಂದ)

ವೈ.ಎ. ನಾರಾಯಣಸ್ವಾಮಿ

ವಿಧಾನ ಪರಿಷತ್ ಸದಸ್ಯರು

(ದಿನಾಂಕ: 24.7.2006 ರಿಂದ)

## ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

### ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

| | |
|---|---|
| ಡಿ'ಸೋಜ ರಾಬಿನ್‌ಸನ್ | ಪ್ರಧಾನ ಕಾರ್ಯದರ್ಶಿ |

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ |
| ಕೆ. ನೂರ್ ಮಹಮದ್ | ಅಧೀನ ಕಾರ್ಯದರ್ಶಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ |
| ವಿ. ಶ್ರೀಶ್ | ಅಪರ ಕಾರ್ಯದರ್ಶಿ |
| ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### <u>ಸಂಪಾದಕರು</u>

**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

12 ಮೇ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಪ್ರಹ್ಲಾದ ಬೆಟಗೇರಿ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀಮತಿ ಬಸವರಾಜೇಶ್ವರಿ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ಸಚ್ಚಿದಾನಂದ ಲ. ಖೋತ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೃಷ್ಣ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಸಂಸದೀಯ ಪಟು ಪುಸ್ತಕ ಮಾಲಿಕೆ ಅಡಿಯಲ್ಲಿ ಶ್ರೀಮತಿಬಸವರಾಜೇಶ್ವರಿಯವರ ಬಗ್ಗೆ ಕೃತಿ ರಚನೆಯ ಜವಾಬ್ದಾರಿ ಕಲ್ಪಿಸಿದ. ಗ್ರಂಥಾಲಯ ಸಮಿತಿ ಅಧ್ಯಕ್ಷರು ಹಾಗೂ ಗೌರವಾನ್ವಿತ ಸಭಾಪತಿಗಳಾದ ಶ್ರೀ ವಿ.ಆರ್. ಸುದರ್ಶನ್ ಅವರಿಗೂ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿ ಅಧ್ಯಕ್ಷರು ಮತ್ತು ಸದಸ್ಯರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಸ್ನೇಹಿತರೂ ವಿಧಾನ ಪರಿಷತ್ ಸದಸ್ಯರೂ ಆದ ಡಾ॥ ಎಲ್. ಹನುಮಂತಯ್ಯನವರನ್ನು ವಿಶೇಷವಾಗಿ ಸ್ಮರಿಸಬಯಸುತ್ತೇನೆ.

ತಜ್ಞರ ಅಭಿಪ್ರಾಯ ಸಂಗ್ರಹ ದಿಶೆಯಲ್ಲಿ ರಾಜಕೀಯ ಹಾಗೂ ನಾಡಿನ ಸಾಂಸ್ಕೃತಿಕ ಬದುಕಿನಲ್ಲಿ ಹಾಸುಹೊಕ್ಕಾದ ಶ್ರೀಮತಿ ಬಿ.ಟಿ. ಲಲಿತಾನಾಯಕ್, ಶ್ರೀಮತಿ ಲೀಲಾದೇವಿ ಆರ್ ಪ್ರಸಾದ್, ಮಾಜಿ ಸಚಿವೆಯರು ನೀಡಿದ ಅಭಿಪ್ರಾಯಗಳಿಗೆ, ತುಂಬು ಹೃದಯದ ಕೃತಜ್ಞತೆ, ಮತ್ತು ಬಳ್ಳಾರಿಯವರೇ ಆದ ಮಾಜಿ ಕರ್ನಾಟಕ ಪ್ರದೇಶ ಕಾಂಗ್ರೆಸ್ (ಐ) ಅಧ್ಯಕ್ಷರೂ ಮಾಜಿ ಸಚಿವರೂ ಆದ ಶ್ರೀಮಾನ್ ಅಲ್ಲಂ ವೀರಭದ್ರಪ್ಪನವರಿಗೆ ಅವರು ನೀಡಿದ ಅಭಿಪ್ರಾಯಗಳಿಗೆ ಕೃತಜ್ಞತೆಗಳು.

ಇನ್ನು ಸೃಜನೇತರ ಕೃತಿ ಕಾರ್ಯಕ್ಕೆ ಕೈ ಹಾಕಿ ಎಲ್ಲರೂ ಮೆಚ್ಚುವ ರೀತಿಯಲ್ಲಿ ಕೃತಿ ರಚನೆ ಅಸಾಧ್ಯವೆಂದು ಕೈಚೆಲ್ಲಿ ಕುಳಿತಾಗ ಗ್ರಂಥಾಲಯ ಸಮಿತಿಗೆ ಬಂದ ಗೆಳೆಯ ಎಲ್.ಎನ್. ಮುಕುಂದರಾಜ್‌ರವರ ಪ್ರೋತ್ಸಾಹ ಸಿಗದೇ ಇದ್ದಿದ್ದರೆ ಈ ಕೃತಿ ರಚನೆಯು ಆಗುತ್ತಿರಲಿಲ್ಲ. ಅವರಿಗೂ ಈ ಸಂದರ್ಭದಲ್ಲಿ ಪ್ರೀತಿಪೂರ್ವಕ ನೆನಕೆಗಳು.

ಹಸ್ತ ಪ್ರತಿ ಸಿದ್ಧಪಡಿಸುವಿಕೆ, ಮತ್ತು ಕನ್ನಡಾನುವಾದಕ್ಕೆ ಪತ್ನಿ ವಿಜಯ- ಮಗ ಅಂಕುರ ಅವರು ನೀಡಿದ ಸಹಕಾರಕ್ಕೆ ಋಣಿಯಾಗಿರುವೆ. ಬಳ್ಳಾರಿಯಲ್ಲಿದ್ದ ನಾದಿನಿ ಕುಮುದಾ ಬಸವರಾಜೇಶ್ವರಿಯವರೊಂದಿಗೆ ಮುಖಾಮುಖಿ ಚರ್ಚೆಗೆ ಅನುವು ಮಾಡಿಕೊಟ್ಟು - ನಮಗೆ ನೀಡಿದ ಆತಿಥ್ಯಕ್ಕೆ ನೆನಕೆಗಳು. ಇನ್ನು ಈ ಉತ್ತರ ಕರ್ನಾಟಕದ ಧೀಮಂತ ಮಹಿಳೆ ಶ್ರೀಮತಿ ಬಸವರಾಜೇಶ್ವರಿಯವರ ಇಡೀ ಕುಟುಂಬದವರು ನೀಡಿದ ಸಲಹೆ ಸೂಚನೆ, ಹೊಂದಿಸಿಕೊಟ್ಟ ಭಾವಚಿತ್ರ, ಮತ್ತವರ ಕುತೂಹಲಕ್ಕೆ ಋಣಿಯಾಗಿರುವೆ. ಎಲ್ಲರಿಗೂ ನನ್ನ ನೆನಕೆಗಳು.

ಈ ಕೃತಿ ರಚನೆಗೆ ಮೂಲ ಪ್ರೇರಣೆ ಚೇತನದಾಹಿ ತಾಯಿ ಶ್ರೀಮತಿ ಬಸವರಾಜೇಶ್ವರಿಯವರಿಗೆ ತುಂಬ ಹೃದಯದ ಕೃತಜ್ಞತೆಗಳು.

ಬೆಂಗಳೂರು — ಪ್ರಹ್ಲಾದ ಬೆಟಗೇರಿ

ದಿನಾಂಕ: 6.6.2006

# ಪರಿವಿಡಿ

## ಭಾಗ-3

## ಗಣ್ಯರ ಅಭಿಪ್ರಾಯಗಳು



## ಭಾಗ-4

ಉಂಕೆಯ ನಿಗುಚಿ ಸರಿಗೆಯ ಸಮಗೊಳಿಸಿ
ಸಮಗಾಲನಿಕ್ಕಿ ಅಣಿಯೇಳಮುದ್ವದೆ
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೇಯ್ದವ ನಾನೋ ನೀನೋ ರಾಮನಾಥ!

– ಜೇಡರ ದಾಸಿಮಯ್ಯ

# ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮಾತ್ರ ಇದು ಸಾಧ್ಯ

ಇಂಡಿಯಾ ದೇಶದ ಪ್ರಜಾಪ್ರಭತ್ವ ವ್ಯವಸ್ಥೆಯಲ್ಲಿ ಸಾಮಾನ್ಯರೊಬ್ಬರು ಉನ್ನತ ಹುದ್ದೆಗೆ ಏರುವುದು ಮತದಾನದ ಮೂಲಕ ಮಾತ್ರಸಾಧ್ಯ ಎಂಬುದನ್ನು ಸಾಬೀತುಪಡಿಸಿದವರು ಶ್ರೀ ಬಸವರಾಜೇಶ್ವರಿಯವರು. ದೇಶಕ್ಕೆ ಸ್ವಾತಂತ್ರ್ಯ ತಂದು ಕೊಟ್ಟ ಧೀಮಂತ ನಾಯಕರು ಮಹಾತ್ಮಾಗಾಂಧೀಯವರ ಮಹತ್ವಾಕಾಂಕ್ಷೆಯ ಕನಸುಗಳು ಬಾಬಾಸಾಹೇಬ್ ಅಮಬೇಡ್ಕರ್‌ರವರ ಸಂವಿಧಾನ ಜಾರಿಗೆ ತರುವ ದಿಶಿಯಲ್ಲಿ ಆಮೆ ಹೆಜ್ಜೆ ಇರಿಸಿದ ಉದಾಹರಣೆಳು ಸಾಕಷ್ಟಿವೆ.

ವಾಸ್ತವವಾಗಿ ಇಂದು ಓಬಿಸಿ ಮೀಸಲಾತಿಯನ್ನು ವಿರೋಧಿಸುತ್ತಿರುವವರು ಮೀಸಲಾತಿ ನೀತಿಯನ್ನು ವಿರೋಧಿಸುತ್ತಿಲ್ಲ. ರೈತನು ಹೊಲಗೆಲಸ ಮಾಡಬೇಕು, ಕುರುಬ ಕುರಿ ಕಾಯಬೇಕು, ಕುಂಬಾರ ಮಡಿಕೆ ಮಾಡಬೇಕು, ಹಜಾಮರು ಕ್ಷೌರ ಮಾಡಬೇಕು. ಹೊಲೆಮಾದಿಗರು ಚಾಕರಿ ಮಾಡಬೇಕು, ಕಕ್ಕಸ್ಸುತೊಳೆಯಬೇಕು. ಬ್ರಾಹ್ಮಣ ಮಾತ್ರ ವಿದ್ಯೆ ಕಲಿಯಬೇಕು. ಕ್ಷತ್ರಿಯ ರಾಜ್ಯಭಾರ ಮಾಡಬೇಕು, ವೈಶ್ಯನು ವ್ಯಾಪಾರ ಮಾಡಬೇಕು- ಕಳೆದ 2000 ವರ್ಷಗಳಿಗಿಂತ ಹೆಚ್ಚು ಕಾಲ ಈ ದೇಶದಲ್ಲಿ ಜಾರಿಯಲ್ಲಿದ್ದು ಮೀಸಲಾತಿ ನೀತಿಯಿದು. ಮನುಧರ್ಮ ಶಾಸ್ತ್ರದ ಪ್ರಕಾರ, ಯಾರೂ ಉಲ್ಲಂಘಿಸಬಾರದಂತಹ ಮಿಸಲಾತಿ ನಿಯಮ ಇದಾಗಿತ್ತು. ಈ ಮೀಸಲಾತಿ ನಿಯಮದ ಸಂಪೂರ್ಣ ಲಾಭವನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಪಡೆದರು. ಇವರ ಮರಿಮಕ್ಕಳೇ ಂದು ಬದಲಾಗಿರುವ ಮೀಸಲಾತಿ ನಿಯಮದಲ್ಲಿ ಹಿಂದುಳಿದ ವರ್ಗಗಳನ್ನು ವಿರೋಧಿಸುತ್ತಿದ್ದಾರೆ! ಅಂದರೆ ತಮಗೆ ಮಾತ್ರ ಲಾಭದಾಯಕಾಗಿರುವ ಮನುಧರ್ಮಶಾಸ್ತ್ರದ ಹಿಂದಿನ ಮೀಸಲಾತಿಯೇ ಇರಬೇಕೆನ್ನುವುದು ಈ ಮುಂದುವರಿದವರ ಆಗ್ರಹವಾಗಿದೆ.. ಮನುಧರ್ಮ ಶಾಸ್ತ್ರವು ವಿಧಿಸಿದ ಮೀಸಲಾತಿ ನಿಯಮದಿಂದಾಗಿ ಭಾರತ ದೇಶವು ಸಾವಿರಾರು ಜಾತಿಗಳಾಗಿ ಒಡೆದು ಹೋಯಿತು ಮತ್ತು ಸತತವಾಗಿ ಪರಕೀಯ ದಾಳಿಗೆ ತುತ್ತಾಗಿ ಗುಲಾಮ ದೇಶವಾಯಿತು. 1947ರಲ್ಲಿ ಭಾರತ ದೇಶವು ಸ್ವತಂತ್ರಗೊಂಡ ನಂತರ, ಮನುಧರ್ಮಶಾಸ್ತ್ರದಿಂದ ಆದ ದುಷ್ಪರಿಣಾಮಗಳನ್ನು ತೊಡದು ಹಾಕಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಲು ತಿರ್ಮಾನಿಸಲಾಯಿತು. ಅದರಂತೆಯೇ, ಬಾಬಾಸಾಹೇಬ್ ಅಂಬೇಡ್ಕರ್‌ರವರು ಸ್ವತಂತ್ರ ಭಾರತದ ಎಲ್ಲಾ ಪ್ರಜೆಗಳಿಗೂ ಶಿಕ್ಷಣ, ನೌಕರಿ, ಅಧಿಕಾರ ಮತ್ತು ಆಸ್ತಿ ಪಾಸ್ತಿಗಳಲ್ಲಿ ಸಮಾನ ಅವಕಾಶ ನೀಡುವಂತಹ ಕ್ರಮಗಳನ್ನು ಹೊಸ ಸಂವಿಧಾನದಲ್ಲಿ ಅಳವಡಿಸಿದರು. ಶಿಕ್ಷಣ ಮತ್ತು ನೌಕರಿಗಳಲ್ಲಿ ಸೂಕ್ತವಾದ ಪಾಲು ಪಡೆಯದಿರುವ ಯಾವುದೇ ಓಂದುಳಿದ ವರ್ಗಕ್ಕೆ ಮೀಸಲಾತಿ ಅಥವಾ ಇನ್ನಾವುದೇ ಕ್ರಮಗಳ ಮೂಲಕ ಸಮಾನ ಅವಕಾಶ ನೀಡಬೇಕು ಎಂಬ ನಿಯಮವನ್ನು ಅಳವಡಿಸಿದರು. (ಅನುಚ್ಛೇದದ 15-4 ಮತ್ತು 16-4) ಇದು ಹಿಂದುಳಿದ ವರ್ಗಗಳ ಮೂಲಭೂತ ಹಕ್ಕಾಗಿದೆ. ಇದನ್ನು ಅರ್ಥಮಾಡಿಕೊಂಡ ನಾಡಾಳಿದ ದೊರೆಗಳು ಸಾಮಾಜಿಕ ನ್ಯಾಯ ಒದಗಿಸಿದ ಉದಾಹರಣೆಗಳು ಅಲ್ಲಲ್ಲಿ ಇವೆ. ಈ

ದಿಶೆಯಲ್ಲಿ ಪ್ರಯತ್ನಿಸಿದ ಈ ರಾಷ್ಟ್ರಕಂಡ ರಾಜಕಾರಣಿಗಳು ತಮ್ಮ ತಮ್ಮೊಳಗೆ ಪಕ್ಷಕಟ್ಟುವ ಅಧಿಕಾರ ಗದ್ದುಗೆ ಏರುವ ದಿಶೆಯಲ್ಲಿ ಸ್ವಲ್ಪ ಏರುಪೇರು ಮಾಡಿದರೂ ಸಹ ಅಲ್ಲಲ್ಲಿ ಕೆಲವರು ಸಾರ್ಥಕ ಕೆಲಸ ಮಾಡಿ ಕೃತಾರ್ಥಗೊಂಡ ಬಗೆಯು ಹೊಸದೇನಲ್ಲ. ಎಲ್ಲ ತತ್ವಾದರ್ಶಗಳ ಕಾನೂನು ಪರಿಪಾಲನೆ ಪ್ರಜಾಹಿತದ ದೃಷ್ಟಿಯಿಂದ ಎಷ್ಟು ಮುಖ್ಯವೋ ಮಾನವ ಸಹಜ ಪ್ರೀತಿ ವಾತ್ಸಲ್ಯ ದುರ್ಬಲರ ಬಗ್ಗೆ ಅನುಕಂಪ ಅನ್ನ ನೀರು ವಸತಿ ಸಮಸ್ಯೆಯ ಬಗೆ ಹರಿಸುವಿಕೆ ಇವೇ ಮುಂತಾದ ಜನಪರ ಕೆಲಸಕಾರ್ಯಗಳಲ್ಲಿ ಸಂಪೂರ್ಣ ತೊಡಗಿಸಿಕೊಂಡು ಕೆಲಸ ಮಾಡಿದ ರಾಜಕಾರಣಿಗಳು ಮತ್ತು ಸಂಸದೀಯ ಪಟುಗಳ ದೀರ್ಘಪಟ್ಟಿಯು ನಮ್ಮೆದುರಿಗಿದೆ.

ಅಂತಹ ಧೀಮಂತ ರಾಜಕಾರಣಿಗಳ ಪಟ್ಟಿಯಲ್ಲಿನ ಒಂದು ಹೆಸರು ಶ್ರೀಮತಿ ಬಸವರಾಜೇಶ್ವರಿಯವರು. ಸಾಮಾನ್ಯ ಜನಜೀವನದ ಮಧ್ಯದಿಂದ ವಿಧಾನಸೌಧ ಲೋಕಸಭೆಗಳ ಮೆಟ್ಟಿಲೇರಿದ ಈ ಮಹಿಳೆಯು ನಾಲ್ಕು ದಶಕಗಳಿಗಿಂತಲೂ ಕಾಲ ಹೆಚ್ಚು ಜನಸೇವೆಯಲ್ಲಿ ತೊಡಗಿಸಿಕೊಂಡು ಜನಾನುರಾಗಿಯಾದ ಹೆಮ್ಮೆಯ ತಾಯಿ. ಶ್ರೀಮತಿ ಇಂದಿರಾಗಾಂಧಿಯವರ ಅಧಿಕಾರಾವಧಿಯಲ್ಲಿ ಕರ್ನಾಟಕದಿಂದ ಮಿಂಚಿದ ಆ ಕಾಲ ಘಟ್ಟದ ಏಕೈಕ ಮಹಿಳೆ ಇವರೆಂದರೆ ಅತಿಶಯೋಕ್ತಿಯಾಗಲಾರದು.

ತಮ್ಮ ಅಧಿಕಾರದ ಅವಧಿಯಲ್ಲಿ ಶ್ರೀಮತಿ ಬಸವರಾಜೇಶ್ವರಿಯವರು ಜವಳಿ ಉತ್ಪಾದನೆ ಕುರಿತಂತೆ ಮಾನವ ಸಂಪನ್ಮೂಲ ಸಚಿವೆಯಾಗಿ ದಿಟ್ಟತನದಿಂದ ಲೋಕಸಭೆಯಲ್ಲಿ ಪ್ರತಿಪಕ್ಷದವರನ್ನು ಎದುರಿಸಿದ ರೀತಿ, ವಿಷಯ ಮಂಡನೆ ವೈಖರಿ, ಭಾರತೀಯ ರೈಲು ಹೇಗಿರಬೇಕೆಂಬ ಕನಸುಗಳನ್ನು ಬಿತ್ತರಿಸಿ ನೀಡಿದ ಸಲಹೆ ಸೂಚನೆಗಳು, ಬೀಡಿ ಕಾರ್ಮಿಕರು ಮತ್ತವರ ಬವಣೆ, ಅನುಸರಿಸಬೇಕಾದ ಕ್ರಮಕುರಿತಂತೆ ನೀಡಿದ ಸಲಹೆಗಳು, ಸೂರು ರೊಟ್ಟಿ ಬಟ್ಟೆ ಪ್ರತಿಯೊಬ್ಬರಿಗೂ ಅವಶ್ಯಕ ಈ ನಿಟ್ಟಿನಲ್ಲಿ ರಾಷ್ಟ್ರೀಯ ವಸತಿ ನೀತಿ ಹೇಗಿರಬೇಕೆಂಬುದರ ಬಗ್ಗೆ ಇವರು ಮಂಡಿಸಿದ ಭಾಷಣ ಅತ್ಯಮೂಲ್ಯವಾದವು, ಬಹುತೇಕ ವಿಚಾರಗಳು ಸಾಮಾನ್ಯ ಜನಜೀವನದ ಮೇಲೆ ಬೆಳಕು ಚೆಲ್ಲಿ ಅವರ ಬದುಕನ್ನ ಹಸನುಗೊಳಿಸುವ ದಿಶೆಯಲ್ಲಿ ಮಹತ್ವದ ಪಾತ್ರವಹಿಸಿರುವುದನ್ನ ನಾವು ಕಾಣುತ್ತೇವೆ.

ದೀರ್ಘವಾಗಿ ಅವರು ಲೋಕಸಭೆಯಲ್ಲಿ ಮಂಡಿಸಿದ ಭಾಷಣಗಳ ಕನ್ನಡ ಅನುವಾದವನ್ನು ನೀಡಲಾಗಿದ್ದು ಶ್ರೀಮತಿ ಬಸವರಾಜೇಶ್ವರಿಯವರಿಗೆ ಕನ್ನಡ ಭಾಷೆಯ ಪ್ರೌಢಿಮೆ ಹೇಗಿತ್ತು ಎಂಬುದಕ್ಕೆ ಸಾಕ್ಷಿಯಾಗಿ ಅವರ ಮಾತುಗಳನ್ನು ಯಥಾವತ್ತಾಗಿ ದಾಖಲಿಸಲಾಗಿದೆ.

ಹಳ್ಳಿಗಾಡಿನ ಮಹಿಳೆಯೊಬ್ಬರು 'ಎತ್ತಿನ ಗಾಡಿಯಲ್ಲಿ ಬದುಕು ಕಟ್ಟಿ' ಇಡೀ ರಾಷ್ಟ್ರದ ಗಮನ ಸೆಳೆದು ಧೀಮಂತ ರಾಜಕಾರಣಿಯಾಗಿ ಬೆಳೆಯಲು ಅವರು ಪಟ್ಟಪಾಡು ಅವರ ನೆಲೆ ಬಾಲ್ಯ ವಿಧ್ಯಾಭ್ಯಾಸ ಮುಂತಾದವುಗಳನ್ನ ತಿಳಿದುಕೊಳ್ಳುವುದಕ್ಕೆ ಮುಂಚೆ ಕೆಲವು ವಿಚಾರಗಳನ್ನ ಸಂಕ್ಷಿಪ್ತವಾಗಿ ಅವಲೋಕಿಸೋಣ.

30 ಜುಲೈ 1985–ಲೋಕಸಭೆ 3ನೇ ಅಧಿವೇಶನ ಸಂದರ್ಭದಲ್ಲಿ

ಮಾನ್ಯರೇ,

ಜವಳಿ ಉತ್ಪಾದನೆಯು ರಾಷ್ಟ್ರದ ಆರ್ಥಿಕ ಅಭಿವೃದ್ಧಿ ದಿಸೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಅತ್ಯಂತ ಪುರಾತನವಾದ ಈ ವೃತ್ತಿಯನ್ನು ಅವಲಂಬೀಸಿದ ಕೊಟ್ಯಾಂತರ ಜನ ರಾಷ್ಟ್ರವ್ಯಾಪ್ತಿ ಇದ್ದಾರೆ ಕೇಂದ್ರಸರ್ಕಾರ ಕೈಮಗ್ಗ ನೇಕಾರರನ್ನು ಗಮನದಲ್ಲಿರಿಸಿಕೊಂಡು ಜವಳಿ ನೀತಿಯನ್ನುಬದಲಾಯಿಸಿ 6 ಜೂನ್ 1985 ರ ಅಧಿವೇಶನದಲ್ಲಿ ಪ್ರಕಟಪಡಿಸಿದೆ.

ಕರ್ನಾಟಕದಲ್ಲಿ ಹತ್ತಿ ಮತ್ತು ರೇಷ್ಮೆ ಬೆಳೆಗಾರರು ಎದುರಿಸಿದ ಸಮಸ್ಯೆಗಳ ಬಗ್ಗೆ ಮಾತ್ರ ಗಮನ ಸೆಳೆಯ ಬಯಸುತ್ತನೆಂದು ಸುಧೀರ್ಘವಾದ ವಿಷಯ ಮಂಡನೆ ಮಾಡುತ್ತಾರೆ ಶ್ರೀಮತಿ ಬಸವರಾಜೇಶ್ವರಿಯವರು

ಬಹುಸಂಖ್ಯಾತ ಹತ್ತಿಬೆಳೆಗಾರರು ಮತ್ತು ಹತ್ತಿನೂಲು ನೇಕಾರರ ಹಿತಗಮನದಲ್ಲಿರಿಸಿಕೊಂಡು ಸ್ಪರ್ಧಾತ್ಮಕವಾಗಿ ಅವರು ಮಾರಾಟ ಮತ್ತು ಉತ್ಪನ್ನಗಳಲ್ಲಿ ಅಭಿವೃದ್ಧಿ ಸಾಧಿಸಲು ಈಗ ಇರುವ ಜವಳಿ ನೀತಿಯು ತತ್‌ಕ್ಷಣ ಬದಲಾಗಬೇಕು. ಮಿಲ್‌ಮಾಲಿಕರಿಗೆ ಈ ಹಿಂದೆ ಇದ್ದ ಹತ್ತಿನೂಲು ಬಳಕೆ ಮತ್ತು ಕಚ್ಚಾಹತ್ತಿ ನೂಲು ಬಳಕೆಯ ಕಡ್ಡಾಯ ಪದ್ಧತಿಯಿಂದ ವಿನಾಯ್ತಿ ನೀಡಿ ಅವರು ಹೇರಳವಾಗಿ ಸೈಂಥಟಿಕ್ ನೂಲನ್ನ ಆಮದು ಮಾಡಿಕೊಳ್ಳಲು ಈಗ ಜಾರಿಗೆ ತಂದಿರುವ ಜವಳಿ ನೀತಿ ಆಸ್ಪದ ನೀಡುತ್ತಿದ್ದು ಇದು ಕೈಮಗ್ಗ ನೇಕಾರರಿಗೆ ಮಾರಕವಾಗಿದೆ.

ಇನ್ನು ರೇಷ್ಮೆ ಆಮದು ಕುರಿತಂತೆ ರೇಷ್ಮೆ ಬೆಳೆಯುವ ರಾಜ್ಯ ಪ್ರಭುತ್ವದೊಂದಿಗೆ ಚರ್ಚಿಸಿ ರೇಷ್ಮೆ ಆಮದು ನೀತಿ ರೂಪಿಸಬೇಕು ನಮ್ಮ ಕರ್ನಾಟಕದಲ್ಲಿಯೇ ರೇಷ್ಮೆ ಉತ್ಪನ್ನಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡುವ ದಿಶೆಯಲ್ಲಿ ಕೇಂದ್ರ ರೇಷ್ಮೆ ಮಂಡಳಿಯು ಕಾರ್ಯಕ್ರಮ ರೂಪಿಸಿ ರೇಷ್ಮೆ ಬೆಳೆ ಮಹತ್ವ ಆರ್ಥಿಕ ಸ್ವಾವಲಂಬನೆಯ ದಿಶೆಯಲ್ಲಿ ಆಗುವ ಅಭಿವೃದ್ಧಿ ಕುರಿತಂತೆ ರೇಷ್ಮೆ ಬೆಳೆಗಾರರಿಗೆ ತಿಳಿ ಹೇಳಿ ಪ್ರೇರೇಪಣೆ ನೀಡುವ ವ್ಯವಸ್ತೆ ಆಗಬೇಕು ರೇಷ್ಮೆ ಕೇಂದ್ರಗಳು ರಾಷ್ಟ್ರದ ವಿವಿಧ ಭಾಗಗಳಲ್ಲಿ ತಲೆ ಎತ್ತಿ ರೇಷ್ಮೆ ನೂಲು ಮಾರಾಟ, ಬಟ್ಟೆ, ಸೀರೆ, ಮಾರಾಟಕ್ಕೆ ವ್ಯವಸ್ಥೆ ಯಾದಲ್ಲಿ ರೇಷ್ಮೆ ನೂಲು ತಯಾರಿಕರು ನೇಕಾರರಿಗೆ ಹೆಚ್ಚಿನ ಪ್ರೋತ್ಸಾಹಸಿಗುತ್ತದೆ. ಹತ್ತಿನೂಲು ತಯ್ಯಾರ ಘಟಕ ಮತ್ತು ನೂಲು ಎಳೆ ಹುರಿಗೊಳಿಸುವ ದಿಶೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸದ ಬಳ್ಳಾರಿ-ರಾಯಚೂರ್ ಜಿಲ್ಲೆಗಳಲ್ಲಿ ಹತ್ತಿ ಬೆಳೆಯು ಸಾಕಷ್ಟು ಹೇರಳ ಪ್ರಮಾಣದಲ್ಲಿ ಬೆಳೆಯುತ್ತಲಿದ್ದು ಅದಕ್ಕೆ ಪೂರಕವಾಗಿ ಸೌಲಭ್ಯವನ್ನ 'ರಾಜ್ಯ ಹತ್ತಿನಿಗಮ' ರೂಪಿಸುವ ದಿಶೆಯಲ್ಲಿ ವಿಳಂಬ ನಿತಿ ಅನುಸರಿಸುತ್ತಲಿದೆ. ಹತ್ತಿಯ ಖರೀದಿಯು ಸಹ ಸುಗ್ಗಿಕಾಲದಲ್ಲಿ ಸುರಳೀತ ನಡೆಯದೇ ಹತ್ತಿಯು ಗೋಡೌನ್ಗಳಲ್ಲಿ ಕೊಳೆಯುವಂತಾಗುವುದು ಯಾಕೆ? ಇದರಿಂದ ರೈತರು ಕಂಗಾಲಾಗಿದ್ದಾರೆ ಬೆಲೆ ಕುಸಿತ ಮಧ್ಯಮರ್ತಿಗಳ ಹಾವಳಿಯಿಂದ ರೈತರನ್ನ ರಕ್ಷಿಸುವ ಸರ್ಕಾರವೇ ಹತ್ತಿಖರೀದಿಸಿ ಮಿಲ್‌ಗಳಿಗೆ

ಮಾರುವ ವ್ಯವಸ್ಥೆ ರೂಪುಗೊಳ್ಳ ಬೇಕು. ಕೇಂದ್ರ ಹತ್ತಿನಿಗಮವು ಕೂಡ ಹತ್ತಿ ಖರೀದಿ ವಿಷಯದಲ್ಲಿ ಹಿಂದೇಟು ಹಾಕುತ್ತಿರುವುದು ಸರಿ ಅಲ್ಲ ಇದರಿಂದ ಹತ್ತಿ ಬೆಳೆಗಾರರು ಚಿಂತಾಕ್ರಾಂತರಾಗಿದ್ದಾರೆ ಎಂದು ರೈತ ಪರ ಜನಪರವಾದ ವಿಷಯ ಮಂಡನೆಯನ್ನ ಶ್ರೀಮತಿ ಬಸವರಾಜೇಶ್ವರಿಯವರು ಮಾಡುತ್ತ ಹೋಗುತ್ತಾರೆ.

1994 9ನೇ ಅಧಿವೇಶನ 10ನೇ ಲೋಕಸಭೆಯಲ್ಲಿ ಅಂದಿನ The Minister of State in the Ministery of Human Resource Developmant ನ ಸಚಿವೆಯಾಗಿ ಸಂಸದರ ಸಲಹೆ ಮತ್ತು ಪ್ರಶ್ನೆಗಳಿಗೆ ಸಾಂತ್ವನದಿಂದ ಇಡೀ ಇಲಾಖೆಯ ನೀತಿರೀತಿಗಳನ್ನು ಲೋಕಸಭೆಯೊಳಗೆ ತೆರೆದಿಡುತ್ತಾ ವಿಷಯ ಮಂಡನೆ ಮಾಡುವ ಅವರ ವೈಖರಿಯನ್ನ ಅದರಸಾರವನ್ನ ಸವಿಯುವಾ.

ಮಕ್ಕಳು ಮತ್ತು ಮಹಿಳಾ ಅಭಿವೃದ್ಧಿ ದಿಶೆಯಲ್ಲಿ ಅನೇಕ ಹೊಸ ಯೋಜನೆಗಳನ್ನ SAARC ಶೃಂಗ ಸಭೆ ನಂತರ ಅಳವಡಿಸಿಕೊಡಿದ್ದು "ರಾಷ್ಟ್ರೀಯ ಮಹಿಳಾ ಕೋಶ ಬಾಲವಾಡಿ ನ್ಯೂಟ್ರಿಷಿಯನ್ ಪ್ರೋಗಾಂ" ಮಹಿಳಾ ಸಂಮೃದ್ಧಿ ಯೋಜನೆ ಕುರಿತಂತೆ ತ್ವರಿತಗತಿಯಲ್ಲಿ ರಾಷ್ಟ್ರದಾದ್ಯಂತ ಕ್ರಮ ಜರುಗಿಸಲಾಗಿದೆ"

ಮಹಿಳೆಯು ಸ್ವಾವಲಂಬಿಯಾಗಿ ಕುಟುಂಬದ ಆರ್ಥೈಕೆಯಲ್ಲಿ ತೊಡಗಲು ಮಹಿಳಾ ಸಬಲೀಕರಣ ತುರ್ತಾಗಿ ರಾಷ್ಟ್ರದಾದ್ಯಂತ ಆಗಬೇಕು. ಮಕ್ಕಳಿಗೆ ಪೌಷ್ಠಿಕ ಆಹಾರ ದೊರೆಯಬೇಕು ಎಂಬ ಸದುದ್ದೇಶದಿಂದ ಕೈಕೊಳ್ಳಲಾದ ಯೋಜನೆಗಳನ್ನ ಕುರಿತಂತೆ ರಾಷ್ಟ್ರವ್ಯಾಪಿ ಚರ್ಚೆಯಾಗುತ್ತಿರುವುದು ಸ್ವಾಗತಾರ್ಹ

ಮಾನ್ಯ ಸಂಸತ್ ಸದಸ್ಯರು ನೀಡಿರುವ ಸಲಹೆ ಸೂಚನೆಗಳನ್ನ ಪರಿಶೀಲನೆ ಮಾಡುವುದಲ್ಲದೆ ಶ್ರೇಷ್ಠ ಪರಿಹಾರ ಕಲ್ಪಿಸಲಾಗುವುದು. ಮಹಿಳೆಯ ಮೇಲೆ ಅದರಲ್ಲೂ ದಲಿತ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯ ಕುರಿತಂತೆ ಸರ್ಕಾರ ಕಠಿಣ ಕ್ರಮ ಜರುಗಿಸುವುದೇ ಆದಲ್ಲಿ ರಾಜೀ ಮನೋಭಾವನೆ ಇಲ್ಲವೇ ಇಲ್ಲ ಗ್ರಾಮೀಣ ಅನಕ್ಷರಸ್ಥ ಮಹಿಳೆಯರ ಮೇಲೆ ಇಂಥ ಅನಾಗರೀಕ ದೌರ್ಜನ್ಯಗಳು ನಡೆಯುತ್ತಿರುವುದು ಗಮನಕ್ಕೆ ಬಂದಿರುತ್ತದೆ ಇಂಥ ಅನಿಷ್ಠಗಳ ವಿರುದ್ಧ ದನಿ ಎತ್ತಲೂ ಮಹಿಳೆಯರನ್ನು ಜಾಗ್ರತಗೊಳಿಸಲು ಅರಿವು ಕಾರ್ಯಕ್ರಮ ಕೈಕೊಳ್ಳಲಾಗುವುದು. ಇಂಥ Awarness ಮೂಡಿಸಲು ಸ್ವಯಂ ಸೇವಾ ಸಂಘ ಸಂಸ್ಥೆಗಳ ನೆರವನ್ನು ಸರ್ಕಾರ ಪಡೆದುಕೊಂಡು ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಆರ್ಥಿಕವಾಗಿ ಮಹಿಳೆಯರನ್ನು ಮೇಲೆತ್ತುವ ಕಾರ್ಯಕ್ರಮವನ್ನು ಸರ್ಕಾರ ರೂಪಿಸುವುದು.

ರಾಜಕೀಯದಲ್ಲಿ ಮಹಿಳೆ ಪಾತ್ರ ಕುರಿತಂತೆ ಪಂಚಾಯತಿ ಮಟ್ಟದಿಂದ ಸಂಸತ್ ವರೆಗೆ ಮಹಿಳಾ ಮೀಸಲಾತಿಯನ್ನು ಜಾರಿಗೆ ತರಲಾಗುವುದು ಎಂದು ಅವರು ಎಲ್ಲಾ ಅಂಕಿ ಅಂಶಗಳೊಂದಿಗೆ ಲೋಕಸಬೆಯಲ್ಲಿ ವಿಷಯಮಂಡಿಸುತ್ತಾರೆ.

1987 8ನೇ ಅಧಿವೇಶನ 8ನೇ ಲೋಕಸಭೆಯಲ್ಲಿ ಶ್ರೀಮತಿ ಬಸವರಾಜೇಶ್ವರಿಯವರು ಸಾಮಾನ್ಯ ಜನರು ಪ್ರವಾಸ ಮಾಡುವ ಭಾರತೀಯ ರೈಲು ಕುರಿತಂತೆ ತಮ್ಮ ಅಮೂಲ್ಯ ಸಲಹೆಗಳ ಜತೆ ಜತೆಗೆ ಅನುಭವವನ್ನ ಲೋಕಸಭೆಯಲ್ಲಿ ಸಂಸದರು ಮೆಚ್ಚುವಂತೆ ಹಂಚಿಕೊಂಡಿದ್ದಾರೆ ಅದನ್ನೀಗ ನೋಡವಾ.

ವಿದ್ಯಾರ್ಥಿಗಳಿಗೆ ಘನಸರ್ಕಾರ ಟಿಕೇಟು ದರಗಳಲ್ಲಿ ನೀಡುತ್ತಿರುವ ಸೌಲಭ್ಯ ವಂಚಿಸುತ್ತಿರುವ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಬೇಕು ರೈಲ್ವೆ ಆಸ್ತಿ ರಕ್ಷಣೆಗೆ ಇರುವ ರೈಲ್ವೆ ಪ್ರೊಟೆಕ್ಷನ್ ಫ್ರೋರ್ಸ್-ಗೆ ಅತ್ಯಾಧುನಿಕ ಎಲೆಕ್ಟ್ರಾನಿಕ್ ಸಾಧನಗಳ ನೀಡಿ, ಬಾಂಬುಸ್ಪೋಟ, ಮತ್ತು ರೈಲ್ವೆ ಹಳಿ ಅದಕ್ಕೆ ಸಂಭಂದಿಸಿದಂತೆ ನಡೆಯುವ ದುಷ್ಕೃತ್ಯ ಪಡೆಯಲು ಪ್ರೇರೇಪಿಸಬೇಕು.

ಎರಡನೇ ದರ್ಜೆ ರಿಜರ್ವೇಷನ್‌ಗಳಲ್ಲಿ ಕಲೆಕ್ಟರ್‌ಗಳು ನಡೆಸುವ ಅಕ್ರಮ-ವ್ಯವಹಾರ ತಡೆಗಟ್ಟಿ ಮೂಲದಲ್ಲಿ ಆಸನಗಳನ್ನು ಗೊತ್ತುಪಡಿಸಿದವರಿಗೆ ಪ್ರವಾಸದಲ್ಲಿ ಅಡೆತಡೆ ಉಂಟಾಗದಂತೆ ಕ್ರಮ ಜರುಗಿಸುವುದು ತುರ್ತಿನ ಅಗತ್ಯಗಳಲ್ಲೊಂದು.

ರೈಲ್ವೆ ಹಳಿಗಳ ಎರಡೂ ಮಗ್ಗುಲಗಳಲ್ಲಿ ಇರುವ ಭೂಮಿ ಕುರಿತಂತೆ ಅಲ್ಲಲ್ಲಿ ರೈಲ್ವೆ ಇಲಾಖೆ ಅದನ್ನ ಲೀಜ್‌ಗೆ ಪಡೆದಿದ್ದಲ್ಲಿ ಇಡೀ ಭೂಮಿಯನ್ನ ವಶಪಡಿಸಿಕೊಂಡು ಸೂಕ್ತ ಪರಿಹಾರ ಕಲ್ಪಿಸುವ ಸ್ಪಷ್ಟವಾದ ನೀತಿ ರೂಪುಗೊಳ್ಳಬೇಕು. ಮಾಡೆಲ್ ಸ್ಟೇಷನ್‌ಗಳಂತಾ ಕೆಲವೊಂದು ಗುರುತಿಸಿ ಅಲ್ಲಿ ಎಲ್ಲಾ ರೀತಿಯ ಪ್ರವಾಸಿ ಸೌಲಭ್ಯಗಳನ್ನ ಒದಗಿಸಿ ರೈಲ್ವೆ ಪ್ರವಾಸದ ಮುದವನ್ನ ಉಣಬಡಿಸಬೇಕುಹೆಚ್ಚಾಗಿ ಹೆಂಗಸು ಮಕ್ಕಳು ಇಡೀ ಕುಟುಂಬದವರು ಪ್ರಮಾಣಿಸುವ ಭಾರತೀಯ ರೈಲು ರಾಷ್ಟ್ರದ ಹೆಮ್ಮೆಯ ಪ್ರತೀಕ ನಮ್ಮ ಕರ್ನಾಟಕದಲ್ಲಿ ಸಂಚರಿಸುತ್ತಿರುವ ರೈಲಿಗೆ "ಕಿತ್ತೂರು ರಾಣಿ ಚೆನ್ನಮ್ಮ" "ಟಿಪ್ಪು ಎಕ್ಸ್‌ಪ್ರೆಸ್" "ಹಂಪಿ ಎಕ್ಸ್‌ಪ್ರೆಸ್" ಎಂದು ನಾಮಕರಣ ಮಾಡಿ ರಾಜ್ಯದ ಜನತೆಯ ಅಭಿಮಾನಕ್ಕೆ ಪಾತ್ರರಾದ ರೈಲ್ವೆ ಸಚಿವರನ್ನ ಪ್ರಧಾನಮಂತ್ರಿಗಳನ್ನ ಈ ಸಂದರ್ಭದಲ್ಲಿ ಅಭಿನಂದಿಸಬಯಸುತ್ತೇವೆ.

## 1986 5ನೇ ಅಧಿವೇಶನ 8ನೇ ಲೋಕಸಭಾ

ಬೀಡಿ ಕಾರ್ಮಿಕರಿಗೆ ಸಿಗಬೇಕಾದ ಸೌಲಭ್ಯ ಮತ್ತು ಅವರ ಜೀವನ ಕ್ರಮ ಸುಧಾರಣೆಗೆ ಸರ್ಕಾರ ಅನುಸರಿಸಬೇಕಾದ ಹೊಸನೀತಿ ಕುರಿತಂತೆ 1986 5ನೇ ಅಧಿವೇಶನದಲ್ಲಿ ಶ್ರೀಮತಿ ಬಸವರಾಜೇಶ್ವರಿಯವರು ತಮ್ಮ ಅನುಭವವನ್ನು ಈ ರೀತಿ ಮಂಡಿಸುತ್ತಾರೆ.

ಸುರ್ಯೋದಯದಿಂದ ಸೂರ್ಯಾಸ್ತದವರೆಗೆ ಹೆಂಗಸು ಮಕ್ಕಳು ಬೀಡಿ ಕಾರ್ಖಾನೆಯಲ್ಲಿ ಕೆಲಸ ಮಾಡುವವರಿದ್ದು ತಂಬಾಕು ಅವರ ಮೇಲೆ ದುಷ್ಪರಿಣಾಮ ಬೀರಿ ಅವರ ಆರೋಗ್ಯ ದಿನೇ ದಿನೇ ಕ್ಷೀಣಿಸುತ್ತಿದ್ದು ಸರಿಯಾದ ವೈದ್ಯಕೀಯ ಸೌಲಭ್ಯ ಕೊರತೆಯಿಂದ ರಾಷ್ಟ್ರದಾದ್ಯಂತ

ಅಸಂಖ್ಯಾತ ಬೀಡಿ ಕಾರ್ಮಿಕರು ಬೀದಿಪಾಲಾಗಿದ್ದಾರೆ. ಕೇಂದ್ರ ಸರ್ಕಾರ ಎಲ್ಲಾ ರಾಜ್ಯಗಳಿಗೂ ಅನ್ವಯವಾಗುವಂತೆ ಮತ್ತು ಮಕ್ಕಳನ್ನ ಯಾವುದೇ ಕಾರಣಕ್ಕೆ ಬೀಡಿ ಕಟ್ಟುವ ಕೆಲಸಕ್ಕೆ ನೇಮಕಮಾಡಿಕೊಳ್ಳದಂತೆ ಕಟ್ಟಪ್ಪಣೆ ವಿಧಿಸಿ, ಹೊಸ ನೀತಿ ರೂಪಿಸಿ ಬೀಡಿ ಕಾರ್ಮಿಕರ ಕಷ್ಟ ಪರಿಹಾರಕ್ಕೆ ಸ್ಪರ್ಧಿಸಬೇಕು.

ತಂಬಾಕು ಬೆಳೆ ಇದ್ದಕಡೆ ವಿಷಪೂರಿತ ನಾಗರಹಾವು ಸಹ ಸುಳಿಯದು. ಅದು ಸಾಯುತ್ತದೆ ಅಂತಹ ತಂಬಾಕು ಜತೆಗೆ ಜೀವವನ್ನೇ ಪಣಕ್ಕಿಟ್ಟು ದಂಡಿಯುವ ಬೀಡಿ ಕಾರ್ಮಿಕರ ಆರೋಗ್ಯ ಸುಧಾರಣಾ ಕ್ರಮ ಜರುಗಿಸಬೇಕು.

ಜಾಗತಿಕ ಮಟ್ಟದಲ್ಲಿ "ಸಿಗರೇಟು ಬೀಡಿ ಸೇದುವುದು ಆರೋಗ್ಯಕ್ಕೆ ಹಾನಿಕರ" ಎಂತಿದ್ದರೂ ಜನಸಂಖ್ಯೆಯ ಬಹುಪಾಲು ಜನ ಧೂಮಪಾನಕ್ಕೆ ಮೊರೆ ಹೋಗಿರುವುದು ಬೀಡಿ ಸಿಗರೇಟು ಉದ್ಯಮ ಬೃಹದಾಕಾರವಾಗಿ ಬೆಳೆಯಲು ಪರೋಕ್ಷವಾಗಿ ನೆರವಾಗಿ ಇದು ಅತ್ಯಂತ ದುರದೃಷ್ಟಕರ ಸಂಗತಿ ಉದ್ಯಮದ ಲಾಭದಲ್ಲಿ ಕಾರ್ಮಿಕರ ಪಾಲೂ ಸಾಕಷ್ಟಿದ್ದರೂ ಸರ್ಕಾರದ ನೀತಿ ವೈಷ್ಯಮ್ಯದ ಕಾರಣ ಸೌಲಭ್ಯ ಆರೋಗ್ಯ ತಪಾಸಣೆ ಕುರಿತಂತೆ ಬೀಡಿ ಕಾರ್ಮಿಕರು ಇನ್ನು ಮುಂದಾರೂ ವಂಚನೆಗೆ ಒಳಗಾಗುವುದು ಬೇಡ ಸಮಗ್ರ ನೀತಿ ಜಾರಿಯಾಗಲಿ.

## 1987 9ನೇ ಅಧಿವೇಶನ 8ನೇ ಲೋಕಸಭಾ

National Housing Banks Bill ಕುರಿತಂತೆ

ರಾಷ್ಟ್ರೀಯ ವಸತಿ ನೀತಿಯ ಮಸೂದೆ ಅನುಮೋದಿಸಿ ಮಾತನಾಡಿದ ಶ್ರೀಮತಿ ಬಸವರಾಜೇಶ್ವರಿಯರು ಇಂದಿರಾಗಾಂಧಿಯವರ ಕನಸುನನಸಾಗುತ್ತಿದೆ ಎಂದು ಹೇಳುತ್ತ ಮನೆ ಕಟ್ಟಲು ಅನುಕೂಲ ಕಲ್ಪಿಸುವ ದೃಷ್ಟಿಯಿಂದ ಹೊಸ ಬ್ಯಾಂಕ್‌ನ ಆವಿಷ್ಕಾರ ಬಡವರಿಗೆ, ವಸತಿಹೀನರಿಗೆ ಆಶಾದಾಯಕವಾದುದು ಎಲ್ಲಾ ಕ್ಷೇತ್ರಗಳಲ್ಲಿಯೂ ಆದರದೇ ಬ್ಯಾಂಕ್‌ಗಳು ಇರುವಾಗ ಮನೆಕಟ್ಟುವ ಸೂರು ಕಲ್ಪಿಸುವ ದಿಶೆಯಲ್ಲಿ ಸರ್ಕಾರ ನೀತಿ ರೂಪಿಸುತ್ತಿರುವುದು ಸ್ವಾಗತಾರ್ಹ ಇದುವರೆಗೆ ಮನೆ ಕಟ್ಟಿದವ ಮೂರ್ಖ ಆದರೂ ವಾಸಿಸುವ ಜಾಣ ಎಂಬ ಗಾದೆ ಚಾಲ್ತಿಯಲ್ಲಿದ್ದು ಅದು ತಿರುವು ಮುರುವಾಗುವ ಕಾಲ ದೂರ ಇಲ್ಲ ಅನುತ್ಪಾದಕ ಕ್ಷೇತ್ರ ಎಂದು. ಪರಿಗಣಿಸಿದ ಮನೆ ..... ವರ್ತಮಾನದಲ್ಲಿ ಅರ್ಥವ್ಯಾಪ್ತಿಯನ್ನು ಬೇರೆಯದಾಗಿ ಪಡೆದು ಸರ್ಕಾರದ ಸವಲತ್ತುಗಳ ಮೂಲಕ ಎಲ್ಲರೂ ಸ್ವಂತ ಸೂರಿನಡಿ ವಾಸಿಸುವ ದಿನಗಳು ದೂರ ಇಲ್ಲ ಎನ್ನುತ್ತಾರೆ. ಆಹಾರ ಮತ್ತು ವಸತಿ ಮೂಲಭೂತ ಅಗತ್ಯಗಳಲ್ಲಿ ಪ್ರಮುಖವಾದವುಗಳು. ಆಹಾರ ಉತ್ಪಾದಿಸುವ

ರೈತರಿಗೆ ಅಭಿನಂದನೆ ತಿಳಿಸುವ ಎಲ್ಲರಿಗೂ ವಸತಿ ಕಲ್ಪಿಸಲಿರುವ ನೂತನ ಪ್ರಧಾನ ಮಂತ್ರಿ ರಾಜೀವಗಾಂಧಿಯವರ ಕನಸು ನನಸಾಗಲೆಂದು ಹಾರಿಸುತ್ತಾರೆ.

ಮುಂದುವರೆದು ಕುಡಿಯುವ ನೀರು ಒದಗಿಸುವ ದಿಕ್ಕಿನಲ್ಲಿ ಶೇಕಡಾ 90 ರಷ್ಟು ಪ್ರಗತಿ ಸಾಧಿಸಿದ್ದು ಹಳ್ಳಿಗಳ್ಳಲ್ಲಿ ಸ್ವಚ್ಛ ಕುಡಿಯುವ ನೀರು ದೊರಕುತ್ತಿರುವುದು ಸಹ ಇದಕ್ಕೆ ನಿದರ್ಶನ ಎಂದು ತಿಳಿಸುತ್ತಾರೆ.

ಬಡವರ ಗೃಹ ನಿರ್ಮಾಣ ದೃಷ್ಟಿಯಿಂದ ಗ್ರಾಮೀಣ ಪ್ರದೇಶದ ಬಡವರು ನಗರ ಪ್ರದೇಶದ ಬಡವರಿಗಿಂತ ಅತ್ಯಂತ ಹಿಂದುಳಿದಿದ್ದು ಗುಡಿಸಲಿಲ್ಲಿ ಈಗಲೂ ವಾಸಿಸುತ್ತಿದ್ದಾರೆ ಸ್ಲಂಗಳನ್ನ ಎತ್ತಂಗಡಿ ಮಾಡುವಾಗ ಅವರಿಗೆ ಸೂಚನೆ ನೀಡದೆ ಪೋಲಿಸರು ಅಧಿಕಾರಿಗಳು ಅಮಾನವೀಯವಾಗಿ ವರ್ತಿಸದೇ ಸೂಕ್ತ ಸ್ಥಳಕ್ಕೆ ಅವರಿಗೆ ಪುನರ್ವಸತಿ ಕಲ್ಪಿಸಿ ಎತ್ತಂಗಡಿ ಮಾಡಬೇಕು. ಗೃಹ ನಿರ್ಮಾಣ ಸಾಲವನ್ನು ನೇರವಾಗಿ ಹಣದ ರೂಪದಲ್ಲಿ ನೀಡದೇ ನಿವೇಶನದಲ್ಲಿ ಸಬ್ಸಿಡಿ ಹಣದಲ್ಲಿ ನೀಡಿ ಇಲಾಖೆಯೇ ಅವರಿಗೆ ಮನೆ ಕಟ್ಟಿ ಕೊಡುವ ವ್ಯವಸ್ಥೆ ರೂಪಗೊಳ್ಳ ಬೇಕು ಲೋಕಸಬೆಯಲ್ಲಿ ಪ್ರಸ್ತಾಪಗೊಂಡು ಪಾಸಾದ ಬಿಲ್ ಅಭಿವೃದ್ಧಿ ಕೆಲಸಗಳು ಹಳ್ಳಿಗಾಡಿನವರೆಗೆ ತಲುಪುವ ಹಂತದಲ್ಲಿ ಮಧ್ಯವರ್ತಿಗಳ ಕೈಗೆ ಯೋಜನೆಗಳು ಅರ್ಥಲಾಭಗಳು ದೊರೆಯದೇ ಕಟ್ಟ ಕಡೆಯ ಮನುಷ್ಯನಿಗೆ ಸಮರ್ಪಕ ಸೌಲಭ್ಯ ದೊರೆಯುವ ದಿಶೆಯಲ್ಲಿ ಬ್ಯಾಂಕ್‌ಗಳು ಸರ್ಕಾರಿ ಅಧಿಕಾರಿಗಳು ಮುತವರ್ಜಿ ವಹಿಸಬೇಕು. ಹಳ್ಳಿಗಾಡಿನ ಜನರು ಬರಗಾಲ ಬಿದ್ದಾಗ ನಗರ ಪ್ರದೇಶಗಳಿಗೆ ವಲಸೆ ಹೋಗದಂತೆ ತಡೆಯಲು ಅವರಿಗೆ ಉದ್ಯೋಗ ಕಲ್ಪಿಸಿ ಆಹಾರ ನೀರು ಸಿಗುವ ವ್ಯವಸ್ಥೆ ಹಳ್ಳಿಗಾಡಿನಲ್ಲಿ ಆಗಬೇಕು. ಇದರಿಂದ ನಗರಗಳು ಸಹ ಸ್ಲಂಮುಕ್ತ ಗೊಂಡು ಸ್ವಚ್ಛ ಗಾಳಿ ಬೆಳಕಿಗೆ ತೆರೆದುಕೊಳ್ಳುತ್ತದೆ. ಭಾರತ ಹಳ್ಳಿಗಾಡು ದೇಶ ಎಲ್ಲ ಹಳ್ಳಿಗಳಲ್ಲೂ ಜನರುಸ್ವಂತ ಮನೆ ಕಟ್ಟಿಕೊಂಡು ಸ್ವಾವಲಂಬಿ ಜೀವನ ನಡೆಸುವ ರೀತಿಯಲ್ಲಿ ಈ ಯೋಜನೆಗೆ 100 ಕೋಟಿ ಹಣಕ್ಕಿಂತಲೂ ಹೆಚ್ಚು 500 ಕೋಟಿ ಹಣ ಬಿಡುಗಡೆಯಾಗಬೇಕೆಂದು ಆಗ್ರಹ ಪಡೆಸುತ್ತಾರೆ.

# ಶ್ರೀಮತಿ ಬಸವರಾಜೇಶ್ವರಿಯವರ ಬದುಕು

ಶ್ರೀಮತಿ ಬಸವರಾಜೇಶ್ವರಿಯವರು ಕರ್ನಾಟಕ ಕಂಡ ಧೀಮಂತ ರಾಜಕಾರಣಿಗಳಲ್ಲಿ ಒಬ್ಬರು ಸ್ವಾತಂತ್ರೋತ್ತರ ಕಾಲದ ಚಾಣಾಕ್ಷ ಮಹಿಳಾ ರಾಜಕಾರಣಿಗಳ ಸಾಲಿಗೆ ಸೇರುವ ಇವರು, ಅನೇಕ ಜವಾಬ್ದಾರಿಯುತ ಸ್ಥಾನಗಳನ್ನಲಂಕರಿಸಿ ಆತ್ಮ ಸಾಕ್ಷಿ ಹಾಗೂ ದಕ್ಷತೆಯಿಂದ ಕಾರ್ಯನಿರ್ವಹಿಸಿ, ಅತ್ಯುತ್ತಮ ಸಂಸದೀಯ ಪಟು ಎಂದು ಹೆಸರು ಪಡೆದ ಮೇರುವ್ಯಕ್ತಿ.

ಉತ್ತರ ಕರ್ನಾಟಕದ ಗಂಡು ಭಾಷೆ ಕನ್ನಡದಲ್ಲಿ ನಿರರ್ಗಳವಾಗಿ ಹರಳು ಹುರಿದಂತೆ ಪಟ ಪಟನೆ ಮಾತನಾಡುವ, ಬಸವರಾಜೇಶ್ವರಿಯವರು, ಸದ್ಯ ಬಳ್ಳಾರಿಯಲ್ಲಿ ತಮ್ಮ ಅಪಾರ ಬಂಧುಬಳಗಳದೊಂದಿಗೆ ಬದುಕಿನ ಸಂಜೆ ಕಳೆಯುತ್ತಿದ್ದಾರೆ ಅವಿಭಕ್ತ ಕುಟುಂಬದಲ್ಲಿ ತುಂಬು ಜೀವನ ನಡೆಸುತ್ತಿರುವ ಇವರಿಗೆ ನಾಲ್ಕು ಜನ ಹೆಣ್ಣುಮಕ್ಕಳು ನಾಲ್ಕು ಜನ ಗಂಡು ಮಕ್ಕಳು, ಮನೆತುಂಬಾ ಮೊಮ್ಮಕ್ಕಳು ಹೀಗೆ ಸಂತಸದಿಂದ ಇರುವ ಇವರು ಸಕ್ರಿಯ ರಾಜಕಾರಣದ ಬಗ್ಗೆ ಸ್ಪಷ್ಟವಾಗಿ ತಮ್ಮ ಅನಿಸಿಕೆಗಳನ್ನು ಹೇಳುತ್ತಾರೆ ಪ್ರಸ್ತುತ ರಾಜಕೀಯ ಚಿಂತನೆಯನ್ನ ಬಳ್ಳಾರಿಯ ಬಿಸಿಲಿನ ಬೇಗುದಿಯ ನಡುವೆಯೂ ನಡೆಸುವ ಇವರ ನೆನಪಿನಶಕ್ತಿ ಅಗಾಧವಾದುದು. ತಮ್ಮ ರಾಜಕೀಯ ಬದುಕಿನುದ್ದಕ್ಕೂ ಇದ್ದ ಸಹೋದ್ಯೋಗಿಗಳು ಪ್ರತಿ ಸ್ಪರ್ಧಿಗಳ ಹೆಸರನ್ನ ಸ್ಪಷ್ಟವಾಗಿ ನೆನಪಿಸಿಕೊಂಡು ಹೇಳುತ್ತಾರೆ. ಜೀವನ ವೃತ್ತಾಂತವನ್ನೇ ನೆನಪಿನಾಳದಿಂದ ಹೊರತೆಗೆದ ಬಗೆಯು ರೋಚಕವಾದುದು. ಘಟನೆಗಳ ಸರಮಾಲೆ ನಿಗೂಢತೆ ಒಂದಕ್ಕೊಂದು ಪೂರಕವಾದ ಅಂಶಗಳನ್ನ ಹೊರಗೆಡಹಿದ ಬಸವರಾಜೇಶ್ವರಿಯವರ ಜೀವನವು ಅನೇಕ ಘಟನೆಗಳ ಸರಮಾಲೆ, ಅವರು ತುಳಿದು ಬಂದದ್ದು ಮುಳ್ಳಿನ ಹಾಸಿಗೆ ಹೃದಯವಂತೆಯು ಸಂಯಮಶೀಲರೂ ಆದ ಬಸವರಾಜೇಶ್ವರಿಯವರು ಗತ ಕಾಲವನ್ನು ನೆನಪಿಸಿಕೊಂಡಾಗ ಒಮ್ಮೊಮ್ಮೆ ಮುಖವು ಉಷ್ಣತೆಯಿಂದ ಕಪ್ಪಾದರೂ ಸಾಧಿಸಿದ ಗೆಲುವು ಪಡೆದ ಅಂತಸ್ತುಗಳ ಸರಮಾಲೆ ಬಿಚ್ಚಿದಾಗ ಗುಲಾಬಿರಂಗಿನಂತೆ ಕೆಂಪಗಾದ ಮುಖವು ಶಾಂತಿಸೂಸುವ ಕಣ್ಣುಗಳು ಎಂಥ ನಿರ್ಭಾವುಕರನ್ನೂ ಭಾವುಕತೆಯ ಮೋಡಿಗೆ ಒಳಪಡಿಸದೇ ಇರಲಾರವು. ತೆಂಗಿನ ಕಾಯಿ ಒರಟಾದರೇನಂತೆ ಒಳಗಿನ ನೀರು ಸಿಹಿ, ಕೊಬ್ಬರಿ ಇನ್ನೂ ಪೌಷ್ಟಕ ಹಾಗೆ ಬಿರುಸಿನಿಂದ ಮಾತನಾಡಿ ಮುನ್ನುಗ್ಗುವ ಇವರ ಜೀವನ ಶೈಲಿಯು ಒರಟು ಒರಟಾದರೇನಂತೆ ಒಳಗಿನ ನೀರು ಸಿಹಿ ಇದನೇ ಹಂಚಿ ಸಂತೋಷವನ್ನುಂಟು ಮಾಡಿದ್ದಾರೆ. ಹೈದರಬಾದ್ ಕರ್ನಾಟಕದ ಜಹಗೀರಧಾರ್ ಮನೆತನದ ಘನತೆ ಗಾಂಭೀರ್ಯ ಗೌರವಕ್ಕೆ ತಕ್ಕಂತೆ ರಾಜಕೀಯ ಬದುಕಿನುದ್ದಕ್ಕೂ ಇವರು ಪಕ್ವತೆಯೊಂದಿಗೆ ಕುಶಲತೆಯನ್ನ ಮೆರೆದ ಉತ್ತರ ಕರ್ನಾಟಕದ ಅತ್ಯಂತ ದೀರ್ಘಾವಧಿಯ ಮಹಿಳಾ ಸಂಸದೀಯ ಪಟು.

# ನಾಲ್ಕು ದಶಕಗಳ ದೀರ್ಘ ರಾಜಕೀಯ ಪಯಣ

1957 ರಿಂದ 1996 ರವರೆಗೆ ರಾಜಕೀಯ ಜೀವನದ ವಿವಿಧ ಸ್ಥಾನಗಳಿಗೆ ಆಯ್ಕೆಗೊಂಡು ಜನಸೇವೆ ಮಾಡಿ ಜನಾನುರಾಗಿಯಾದ ದೀರ್ಘಾವಧಿಯ ಮಹಿಳಾ ಸಂಸದೀಯ ಪಟುಗಳಲ್ಲಿ ಬಸವರಾಜೇಶ್ವರಿಯವರದು ಮೊದಲ ಹೆಸರು.

ಜನನ ಬಾಲ್ಯ: ಬಳ್ಳಾರಿ ಜಿಲ್ಲೆ ರಾಯಘಡ ತಾಲ್ಲೂಕಿನ ಹನುಮಾಪುರದಲ್ಲಿ ದಿನಾಂಕ: 17.02.1923 ರಲ್ಲಿ ತಂದೆ ವೀರಾರಡಿಯ ತಾಯಿ ತಿಮ್ಮಮ್ಮನವರ ಗರ್ಭ ಸಂಜಾತೆಯಾದ ಇವರಿಗೆ ಐವರು ತಂಗಿಯರು ಇಬ್ಬರು ತಮ್ಮಂದಿರು. ಮನೆಯವರ ಮುದ್ದಿನ ಹಿರಿಮಗಳಾಗಿ ಜನಿಸಿದ ಇವರಿಗೆ ಎಲ್ಲರ ಆರೈಕೆಯ ಜವಾಬ್ದಾರಿಯು ಚಿಕ್ಕಂದಿನಲ್ಲಿಯೇ ಪ್ರಾರಂಭವಾಯಿತು. ಕುಟುಂಬದವರೆಲ್ಲ ಸುಸಂಸ್ಕೃತರು - ಅಕ್ಷರವಂತರು - ವಿಚಾರವಂತರು ಹೀಗಾಗಿ ಓದು ಬರಹ ಇವರ ಪಾಲಿಗೆ ಸುಲಲಿತ - ವೃತ್ತಿಯಲ್ಲಿ ಅಡ್ವೋಕೇಟ್ ಆಗಿದ್ದ ಇವರ ಚಿಕ್ಕಪ್ಪ ಕುಮಾರರೆಡ್ಡಿಯವರು ಆಕಾಲದಲ್ಲಿಯೇ ತಾಲ್ಲೂಕು ಬೋರ್ಡು ಅಧ್ಯಕ್ಷರಾಗಿದ್ದರೆಂದರೆ ರಾಜಕೀಯ ವಾತಾವರಣದ ಪರಿಸರ ಚಿಕ್ಕವಯಸ್ಸಿನಲ್ಲಿಯೇ ಬಸವರಾಜೇಶ್ವರಿಯವರಿಗೆ ವರದಾನವಾಗಿತ್ತು. ಇವರ ರಾಜಕೀಯ ಪ್ರವೇಶಕ್ಕೆ ನಾಂದಿಯಾದ ಈ ಪರಿಸರ - ಚಿಕ್ಕಪ್ಪನವರೇ ಇವರಿಗೆ ಪ್ರೇರಣೆಯಾದರು. ಚಿಕ್ಕಪ್ಪನವರ ಮುದ್ದು ಮಗಳಾಗಿ ಯಾವತ್ತು ಅವರ ಮಡಿಲಲ್ಲಿ ನೆಮ್ಮದಿ ಕಾಣುತ್ತಿದ್ದ ಬಸವರಾಜೇಶ್ವರಿಯವರಿಗೆ ರಾಜಕೀಯ ಓನಾಮ ಪಾಠ ಇವರಿಗೆ ತಿಳುವಳಿಕೆ ಮೂಡುವಷ್ಟರಲ್ಲಿಯೇ ಸುರು ಆಯಿತು. ಜಮೀನ್ದಾರರ ಕುಟುಂಬ. ಮೇಲಾಗಿ ಮನೆಯ ತುಂಬಾ ಆಳುಕಾಳು. ಜವಾಬ್ದಾರಿ ನಿಭಾಯಿಸುವ ನಿಟ್ಟಿನಲ್ಲಿ ಚಿಕ್ಕಪ್ಪನವರು ಕಾಲಕಾಲಕ್ಕೆ ನೀಡುತ್ತಲಿದ್ದ ಸಲಹೆ ಸೂಚನೆಗಳು ಇವರ ರಾಜಕೀಯ ಸೋಪಾನದ ಮೆಟ್ಟಿಲುಗಳಾಗಿ ಪರಿವರ್ತನೆಗೊಂಡವು. ಯೌವನಾವಸ್ಥೆಗೆ ತಲುಪುವಷ್ಟರಲ್ಲಿ ಬಸವರಾಜೇಶ್ವರಿಯವರು ರಾಜಕೀಯದ ಸ್ಪಷ್ಟವಾದ ಅರಿವನ್ನು ಸಂಸಾರ ನಿರ್ವಹಣೆಯ ಜವಾಬ್ದಾರಿಯನ್ನು ಪಡೆದುಕೊಂಡಿದ್ದರು. ಬಳ್ಳಾರಿಯಲ್ಲಿ ಓದು ಮುಂದುವರೆಸಿದ ಇವರು ಶಾಲೆ ಮತ್ತು ಕಾಲೇಜಿನಲ್ಲಿ ಚುರುಕಾದ 'ಜಾಣೆ ಹುಡುಗಿ' ಎಂದು ಖ್ಯಾತಿಗೊಂಡಿದ್ದರು. ಕುಟುಂಬ ನಿರ್ವಹಣೆಗೆ - ತಂಗಿ ತಮ್ಮಂದಿರ ಆರೈಕೆ ಜವಾಬ್ದಾರಿ ನಿಭಾಯಿಸುತ್ತಾ ಆಗ ಅವರಿಗೆ ಪಿ.ಯು.ಸಿ. ವರೆಗೆ ಮಾತ್ರ ಓದಲು ಸಾಧ್ಯವಾಯಿತು. ಓದಿದ್ದು ಕಡಿಮೆಯಾದರೂ ಪಡೆದುಕೊಂಡ ಅನುಭವ ಗುಡ್ಡದಷ್ಟು - ನಿರರ್ಗಳವಾಗಿ ಇಂಗ್ಲೀಷ್, ಹಿಂದಿ, ಕನ್ನಡ ಮಾತನಾಡುವ ಇವರು ಬದುಕಿನಲ್ಲಿ - ರಾಜಕೀಯ ಕ್ಷೇತ್ರದಲ್ಲಿ ಕಲಿತದ್ದು ಹೆಚ್ಚು.

ವೈವಾಹಿಕ ಜೀವನ: ಹೈದ್ರಾಬಾದ್ ಕರ್ನಾಟಕದ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಗೆಜ್ಜಲ --- ಹದಿಮೂರು ಹಳ್ಳಿಗಳ ಒಡೆತನ ಹೊಂದಿದ್ದ ಜಹಗೀರದಾರ ರಾಜಾವೆಂಕಟರಾವ್ ಅವರ ಹಿರಿ ಹೆಂಡತಿ ಮಗ ರಾಜಾಕಾರಣ ಬಸವ ಅವರೊಂದಿಗೆ ವೈವಾಹಿಕ ಬಂಧನಕ್ಕೊಳಗಾದ ಬಸವರಾಜೇಶ್ವರಿಯವರಿಗೆ ಆಗ ಹದಿನೇಳು ವರ್ಷ. ಜಹಗೀರದಾರ ಮನೆತನದ ರೀತಿ

ರಿವಾಜುಗಳೊಂದಿಗೆ ತುಂಬಾ ಅದ್ದೂರಿಯಾಗಿಯೇ ನಡೆದ ಮದುವೆಯನ್ನು ಈಗಿಲೂ ಮೆಲುಕು ಹಾಕುವ ಬಸವರಾಜೇಶ್ವರಿಯವರು 'ನಭೂತೋ ನಭವಿಷ್ಯತೆ' ಎಂಬಂತೆ ಮದುವೆ ಜರುಗಿತು ಎನ್ನುತ್ತಾರೆ.

ನಿಜಾಮರ ಆಳ್ವಿಕೆಯ ಕಾಲದಲ್ಲಿ ಗುರುಗುಂಟಾ ಸಂಸ್ಥಾನದ ಸಾಮಂತರ ಅಧೀನದಲ್ಲಿದ್ದ ಜಹಗೀರದಾರರು ಅವರಿಗೆ ಕಪ್ಪ ಕಾಣಿಕೆಯನ್ನು ನೀಡುತ್ತಿದ್ದುದು ವಾಡಿಕೆಯಾಗಿತ್ತು. ಗೆಜ್ಜಲ --ದ ಜಹಗೀರದಾರ ರಾಜಾವೆಂಕಟರಾವ್ ಸಂಸ್ಥಾನದ ಸಾಮಂತರ ಅಚ್ಚುಮೆಚ್ಚಿಗೆ ಪಾತ್ರರಾಗಿ, ಜನಮೆಚ್ಚಿಗೆ ಪಡೆದು, ಪ್ರಸಿದ್ಧರಾಗಿದ್ದರು. ಶೌರ್ಯ ಸಾಹಸಕ್ಕೆ ಇನ್ನೊಂದು ಹೆಸರು ರಾಜಾವೆಂಕಟರಾವ್ ಹದಿಮೂರು ಹಳ್ಳಿಗಳ ಜಹಗೀರ್‌ದಾರಿಕೆ ಸಾವಿರಾರು ಎಕರೆ ಭೂಮಿ ಹಂಡೆಗಟ್ಟಲೆ ಹಣ, ವಿಕ್ಟೋರಿಯಾ ರಾಣಿಯ ಮುದ್ರೆ ಇದ್ದ ಬೆಳ್ಳಿಯ ನಾಣ್ಯಗಳು ಲೆಕ್ಕ ಇಡಲಾರಷ್ಟು ಬಂಗಾರದ ಒಡವೆಗಳು - ಹೀಗೆ ರಾಜ ವೈಭವದ ಅರಮನೆಗೆ ಬಸವರಾಜೇಶ್ವರಿಯವರು ಹಿರಿಸೊಸೆಯಾಗಿ ಬಂದಾಗ ಆ ಕುಟುಂಬದಲ್ಲಿ ವಿಧ್ಯೆಯ, ಅಕ್ಷರದ ಸುಳಿವು ಎಳ್ಳಷ್ಟೂ ಇರಲಿಲ್ಲ. ಹೀಗಾಗಿ ಓದು ಬರಹ ಚೆನ್ನಾಗಿ ಬಲ್ಲ ಮೇಲಾಗಿ ಮನೆಯ ಹಿರಿ ಸೊಸೆಯಾಗಿದ್ದ ಇವರ ಮೇಲೆಯೇ ಎಲ್ಲಾ ಜವಾಬ್ದಾರಿ, ಜಹಗೀರದಾರ ಮನೆತನದ ಕಾರಬಾರು ಇವರ ಹೆಗಲಿಗೆ ಬಿದ್ದಿತು.

ರಾಜಾವೆಂಕಟರಾವ ಅವರ ಮೂರನೇ ಹೆಂಡತಿ ನೀಲಮ್ಮನವರ ಉಸ್ತುವಾರಿಕೆ ಅವರೋ ಬಸವರಾಜೇಶ್ವರಿಯವರಿಗಿಂತ ಎರಡು ವರ್ಷ ಮಾತ್ರ ದೊಡ್ಡವರು. ಹೀಗಾಗಿ ಅತ್ತೆ ಸೊಸೆಯರು ಗೆಳತಿಯರಂತೆ ಬದುಕು ಅನುಭವಿಸಿ, ಮನೆ ಕೆಲಸಕಾರ್ಯ ನಿಭಾಯಿಸುತ್ತಿದ್ದರು. ಮಾವನವರಿಗೆ ವಿದ್ಯಾವಂತೆ ರೂಪವಂತೆಯಾದ ಸೊಸೆಯ ಬಗ್ಗೆ ತುಂಬಾ ಅಭಿಮಾನ. ಆದರೆ ಶ್ರೀಮಂತಿಕೆ ಹೇರಳ ಹಣದ ವಹಿವಾಟು, ಹಣ ಎಣಿಸುವುದು ಲೆಕ್ಕಮಾಡಿ ತಿಜೋರಿಯಲ್ಲಿ ಪೇರಿಸಿಡಲು ರಾಜಾವೆಂಕಟರಾವ್ ಅವರು ಸೊಸೆಯನ್ನು ಆಗಾಗ ಸಹಾಯಕ್ಕೆ ಕರೆಯುತ್ತಿದ್ದರು. ಹೀಗಾಗಿ ಹಣ ಎಣಿಕೆಯಲ್ಲಿ ಪರಿಣಿತಗೊಂಡ ಬಸವರಾಜೇಶ್ವರಿಯವರು ಛಾಪಾ ಕಾಗದಗಳನ್ನು ಓದಿ ವಿವರಿಸುತ್ತಾ ಬಂದಂತೆ ಭೂದಾಖಲೆ ಮತ್ತು ಖರೀದಿ ಮುಂತಾದ ಜಮೀನಿನ ಆಡಳಿತಾತ್ಮಕ ಪರಿಭಾಷೆಗಳನ್ನು ಕಲಿಯುವುದರೊಂದಿಗೆ ಮಾವನವರಿಗೆ ಅವರ ಸಕಲ ವ್ಯವಹಾರಕ್ಕೆ ಬೆನ್ನೆಲುಬಾಗಿ ನಿಂತರು. ಎಲ್ಲಾ ಕೆಲಸಗಳನ್ನು ಲೀಲಾಜಾಲವಾಗಿ ಮಾಡುತ್ತಿದ್ದ ಬಸವರಾಜೇಶ್ವರಿಯವರ ಬಗ್ಗೆ ಅತ್ತೆ ಮಾವನವರು ಪ್ರೀತಿ ಅಕ್ಕರೆಯನ್ನು ಧಾರೆ ಎರೆದರೆ ರಾಜಾಶರಣಬಸವರಂತೂ ಹೆಂಡತಿಯ ಬಗ್ಗೆ ಅಭಿಮಾನಗೊಂಡು ಮುತ್ತು ಜೋಪಾನವಾಗಿಡುವಂತೆ ಇವರನ್ನು ರಕ್ಷಿಸಿದರು, ಕಾಪಾಡಿದರು, ಪ್ರೀತಿ ಹೊಳೆ ಹರಿಸಿದರು.

**ಆಂತರಿಕ ಕೋಲಾಹಲ:** ಮದುವೆಯಾಗಿ ಗಂಡನ ಮನೆಯಲ್ಲಿ ಜವಾಬ್ದಾರಿ ನಿಭಾಯಿಸಿ ಪ್ರೀತಿಗೆ ಪಾತ್ರರಾದ ಬಸವರಾಜೇಶ್ವರಿಯವರ ಬದುಕಿನಲ್ಲಿ ಕೋಲಾಹಲ ಎದ್ದುದು, ಅದನ್ನು ನಿಭಾಯಿಸಿದ ರೀತಿಯ ಇವರೊಬ್ಬ 'ನಾಯಕಿ'ಯಾಗಿ ಬೆಳೆಯುವ ದಿಶೆಯಲ್ಲಿ ಅನುಭವ ನೀಡಿದವೇನೋ ನಿಜ. ಆದರೆ ಆ ದಿನಗಳು ಎಂಥಾ ದುರ್ಬರವಾಗಿದ್ದವೆಂದರೆ ಅಳ್ಳೆದೆಯವರಾಗಿದ್ದರೆ ಅಧೈರ್ಯಗೊಂಡು ವ್ಯವಸ್ಥೆಯ ಬಲಿ ಪಶುಗಳಾಗುತ್ತಿದ್ದರು. ಎಲ್ಲವನ್ನೂ ದಿಟ್ಟತನದಿಂದ ಎದುರಿಸಿ ಬದುಕಿನ ಸಾರ್ಥಕತೆ ಕಂಡ ಬಗೆಯನ್ನು ನೋಡೋಣ.

ಸ್ವಾತಂತ್ರ ಪೂರ್ವದಲ್ಲಿ ನಿಜಾಮರ ಆಡಳಿತದ ವ್ಯಾಪ್ತಿಗೆ ಒಳಪಟ್ಟ ಹೈದ್ರಾಬಾದ್ ಕರ್ನಾಟಕದ ಜಹಗೀರದಾರರೆಲ್ಲ ಮಕ್ಕಳು ಜನಿಸಿದ ಕೂಡಲೇ 'ಜಹಗೀರ್‌ದಾರ್ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್'ನಲ್ಲಿ ದಾಖಲೆಗೊಳಿಸುವ ನಿಯಮ ಕಡ್ಡಾಯವಾಗಿ ಜಾರಿಯಲ್ಲಿತ್ತು. ಆ ಪ್ರಕಾರ ಜಹಗೀರ್‌ದಾರ್ ವೆಂಕಟರಾವ್ ಅವರೂ ಕೂಡ ಹಿರಿಯ ಹೆಂಡತಿಯ ಹಿರಿಯ ಮಗ ಬಸವರಾಜೇಶ್ವರಿಯವರ ಗಂಡ ರಾಜಾಶರಣಬಸವ ಅವರಿಗೆ ತಮ್ಮ ನಂತರ ಜಹಗೀರದಾರಿಕೆಯ ಆಡಳಿತಾಧಿಕಾರದ ಹಕ್ಕು ದಕ್ಕಬೇಕೆಂದು ನಮೂದುಗೊಳಿಸಿದರು. ಹಿರಿ ಮಗನು ಎಲ್ಲಾ ರೀತಿಯಿಂದ ದಕ್ಷ ಮತ್ತು ಸಮರ್ಥ ಎಂದರಿತ ಅವರೂ ಸಹ ಬಹಳ ನಿರೀಕ್ಷೆಯನ್ನು ಹೊಂದಿದ್ದರು. ಮೇಲಾಗಿ ಅವರ ಹೆಂಡತಿ ಬಸವರಾಜೇಶ್ವರಿಯವರು ಎಲ್ಲಾ ನೈಪುಣ್ಯತೆಯನ್ನು ಪಡೆದವರಾದ್ದರಿಂದ, ತಮ್ಮ ನಂತರದ ಆಡಳಿತಾಧಿಕಾರಿಯಾಗಿ ಶರಣಬಸವ ಜನಾನುರಾಗಿಯಾಗುತ್ತಾರೆಂಬ ಆಸೆಯನ್ನು ಎಲ್ಲಾ ತಂದೆಯರಂತೆ ರಾಜಾವೆಂಕಟರಾವ್ ಅವರೂ ಹೊಂದಿದ್ದರು.

ಆದರೆ ಈ ಕನಸು ನೆನಸಾಗದೇ ನುಚ್ಚು ನೂರಾಯಿತು. ಕಿರಿಯ ಹೆಂಡತಿ ನೀಲಮ್ಮಾ ಸವತಿ ಮಗನಿಗೆ ರಾಜ್ಯಾಧಿಕಾರ ಸಿಗುತ್ತದಲ್ಲಾ ಎಂದು ಅಸೂಹೆಪಟ್ಟು 'ರಾಮಾಯಣದ ಕೈಕೆಯಾದರು. ಅಸಮಾಧಾನಗೊಂಡ ಅವರು ಮುಂದೆಂದೂ ತನ್ನ ಮಕ್ಕಳಿಗೆ ರಾಜ್ಯಾಧಿಕಾರ ಸಿಗುವುದು ದುಸ್ತರ ಎಂದು ಭಾವಿಸಿ ಸಿಡಿಮಿಡಿಗೊಂಡು ರುದ್ರಾವತಾರ ತಾಳಿದರು. ಸೊಸೆಯನ್ನು ತನ್ನ ಸಹಾಯಕ್ಕೆ ಕರೆದು ತಿಜೋರಿಯ ವಹಿವಾಟು ನೀಡಿದ್ದಕ್ಕೂ ರಾಜಾವೆಂಕಟರಾವ ಅವರ ಬಗ್ಗೆಯೂ ಸಿಡಿಮಿಡಿಗೊಂಡರು. ಒಟ್ಟಾರೇ ಶರಣಬಸವ ಬಸವರಾಜೇಶ್ವರಿಯವರ ಏಳಿಗೆಯನ್ನು ಸಹಿಸದಾದರು. ಮನೆಯ ವಾತಾರಣದ ಬಿಗಡಾಯಿಸಿತು. ಆದರದಿಂದ ಪ್ರೀತಿ ಅಭಿಮಾನ ಆದರಿಂದ, ಸೊಸೆಯನ್ನು ಕಾಣುತ್ತಿದ ರಾಜಾವೆಂಕಟರಾವ ಅವರೂ ಉದಾಸೀನರಾದರು, ನೊಂದರು, ಅಸಹಾಯಕರಾದರು.

ಅಲ್ಲಿಗೆ ಸುಮ್ಮನಿರದೇ ನೀಲಮ್ಮಾ ಶರಣಬಸವರವರು ಆಡಳಿತಾ ಅಧಿಕಾರವನ್ನು ನಡೆಸಲು ಅಸಮರ್ಥ, ಯಾವುದೇ ಜಮೀನು ವಹಿವಾಟು ಲೆಕ್ಕಪತ್ರವಿರಿಸಲು ಲಾಯಕ್ಕಿಲ್ಲ ಎಂದು ವಾದ ಮಂಡಿಸಿ, ಜಹಗೀರದಾರ ಅಡ್‌ಮಿನಿಸ್ಟ್ರೇಟಿವ್ ಮುಖ್ಯಸ್ಥ "ಆಯ್ ಮುಕ್ತಿಯಾರ್" (ಐನ್‌ಗೌಡ) ಅವರಿಗೆ ಲಂಚ ರುಸುವತ್ತು ನೀಡಿ ಹದಿಮೂರು ಹಳ್ಳಿಗಳ ಜಹಗೀರದಾರಿಕೆ ಸಾವಿರಾರು ಎಕರೆ

ಜಮೀನು ಉಸ್ತುವಾರಿಕೆ ತನ್ನ ಮಗ ರಾಜಾಶಿವಶಂಕರ ಅವರಿಗೆ ದೊರೆಯುವಂತೆ ಸೂತ್ರರೂಪಿಸಿ ಸಫಲಗೊಂಡದ್ದಲ್ಲದೇ ಆಡಳಿತಾಧಿಕಾರದಪಟ್ಟ ಕಟ್ಟಬೇಕೆಂದು "ಆಯ್‌ಮುಕ್ತಿಯಾರ್" ಅವರಿಗೆ ತಾಕೀತು ಮಾಡುವಷ್ಟು ದುಷ್ಟತೆಯನ್ನ ತೋರಿದರು. ನೀಲಮ್ಮಾ ಅಪಾರ ಆಸ್ತಿ ಹಣ ಸಂಪತ್ತಲ್ಲೆವೂ ತನ್ನ ಮಗನಿಗೆ ಸಲ್ಲಬೇಕು, ಯಾರಿಗೂ ಇದರಲ್ಲಿ ಪಾಲಿಲ್ಲವೆಂದು ಘೋಷಿಸಿ ಸುಮ್ಮನಿರದೇ ಅದನ್ನೆಲ್ಲಾ ತವರುಮನೆ ಶಿರೋಳ್‌ಗೆ ಸಾಗಿಸುವ ತಯಾರಿ ನಡೆಸಿದರು. ಆವತ್ತಿಗೆ ಪ್ಲೇಗ್‌ಮಾರಿ ಬಂದು ಗೆಜ್ಜಲ ಘಟ್ಟ ಊರಿಗೆ ಊರೇ ಖಾಲಿಯಾಗಿತ್ತು. ಶಿರೋಳ್‌ದಿಂದ ಆಳು ಕರೆಯಿಸಿಕೊಂಡು ವಿಕ್ಟೋರಿಯಾ ರಾಣಿ ಮುದ್ರೆ ಇರುವ ಬೆಳ್ಳಿ ನಾಣ್ಯದ ನಾಲ್ಕು ಹಂಡೆಗಳನ್ನ ಘಟಪ್ರಭಾ ನದಿಮೂಲಕ ಶಿರೋಳ್‌ಗೆ ಸಾಗಿಸುವ ಸಿದ್ಧತೆ ಮಾಡಿಕೊಂಡಾಗ, ಅತಿವೃಷ್ಟಿಯಿಂದ ನದಿತುಂಬಿ ಹರಿದು ಅಡಚಣೆ ಉಂಟಾಯ್ತು. ನೆರೆ ಬಂದಾಗ ನದಿ ದಾಟುವುದು, ಸುರಕ್ಷಿತವಲ್ಲ ಎಂದು ಎಲ್ಲಾ ಹಣದ ಹಂಡೆಗಳನ್ನು ರೈಲು ಮೂಲಕ ಧಾರವಾಡ ಜಿಲ್ಲೆಯ ಶಿರೋಳಕ್ಕೆ ಸಾಗಿಸುವಲ್ಲಿ ನೀಲಮ್ಮಾನವರು ಯಶಸ್ವಿಯಾದರು. ಇದರಿಂದ ಅವರ ಧೈರ್ಯ ಇಮ್ಮಡಿಸಿತು.

ಪಿತ್ರಾರ್ಜಿತ ಆಸ್ತಿಯ ಹಕ್ಕು ಹಿರಿಯ ಮಗನಿಗೂ ದಕ್ಕಬೇಕು ಎಂದರಿತ ಬಸವರಾಜೇಶ್ವರಿಯವರು, ತಿಜೋರಿಯಲ್ಲಿಯ ಬಂಗಾರದೊಡವೆಗಳು ಹಂಡ ಗಟ್ಟಲೆ ಹಣ ಖಾಲಿಯಾಗುವುದನ್ನು ನೋಡಿ ಸುಮ್ಮನೆ ಕೂಡದೇ ಪ್ರತಿ ತಂತ್ರ ರೂಪಿಸಿ ಗಂಡ ಶರಣಬಸವ ಅವರ ಸಹಕಾರದಿಂದ ಹಣ ತುಂಬಿ ಇರಿಸಿದ ಥೈಲಿ 'ಥೈಲಿ'ಗಳ ಕೊಠಡಿಗೆ ಕನ್ನ ಹಾಕಿ ಹಣ ಸಾಗಿಸುವ ಸಾಹಸಕ್ಕೆ ಕೈಹಾಕಿ ಸಿಕ್ಕು ಹಾಕಿಕೊಂಡರು. ಊರ ತುಂಬಾ ಜಹಗೀರದಾರ್ ಮನೆತನದ ಆಸ್ತಿ ಕಬಳಿಕೆಯ ಸುದ್ದಿ ಹರಡಿತು. ಮಾವ ರಾಜಾವೆಂಕಟರಾವ ತುಂಬಾ ಕೋಪಗೊಂಡರು. ನೆಮ್ಮದಿ ತಾಣವಾಗಿದ್ದ ಮನೆಯ ವಾತಾವರಣ ಹದಗೆಟ್ಟು ಶೀತಲ ಸಮರ ಸುರು ಆಯ್ತು. ಪುನಃ ಹಣದ ಚೀಲಗಳನ್ನು ಅದೇ ಕೊಠಡಿಯ ನೆಲದಲ್ಲಿ ಹುಗಿದು ಹಾಕಲಾಯ್ತು. ಈ ಸಾರಿ ವಿಷಯವನ್ನು ನೀಲಮ್ಮನವರು ಪೊಲೀಸರಿಗೆ ಪಿರ್ಯಾದು ನೀಡಿದರು. ಪೊಲೀಸರು ಆಗಮನದಿಂದ ಎಲ್ಲರೂ ತುಂಬಾ ನರ್ವಸ್ ಆದರು. ಊಟತಿಂಡಿಯ ವ್ಯವಸ್ಥೆಯೂ ಹಾಳಾಗಿ ಹೋಯ್ತು. ಸದಾ ನಗುವಿನಿಂದ ತುಂಬಿ ತುಳುಕಾಡುತ್ತಿದ್ದ ಮನೆಯಲ್ಲಿ ಹಣದದಾಹದ ಕರಾಳಛಾಯೆ ವ್ಯಾಪಿಸಿ ನೆಮ್ಮದಿಯನ್ನು ಪೂರಾ ಹಾಳುಗೆಡುಹಿತು. ನೋವು ಬೇಸರದಿಂದ ಜೀವನ ಜಿಗುಪ್ಸೆ ತರಹತ್ತಿತ್ತು. ಸದಾ ಜಗಳ ಮನಸ್ತಾಪದಿಂದ ತತ್ತರಿಸಿದರು ಎಲ್ಲರೂ. ಹದಿಮೂರು ಹಳ್ಳಿಗಳ ರೈತ ಮುಖಂಡರು ಗುರುಗುಂಟಾ ಸಂಸ್ಥಾನದ ರಾಜವಂಶಸ್ಥರು ಈ ಅಸಹಾಯಕ ದಂಪತಿಗಳ ಬೆಂಬಲಕ್ಕೆ ನಿಂತು ಸಂಪೂರ್ಣ ರಕ್ಷಣೆ ಕೊಟ್ಟರು. ಆಗಿನ ರೀತಿ ರಿವಾಜು ಪ್ರಕಾರ ಪೊಲೀಸರ ಮಧ್ಯಸ್ತಿಕೆಯನ್ನು ಹೊರತುಪಡಿಸಿ ಅಮರೇಶ್ವರ ದೇವಸ್ಥಾನದಲ್ಲಿ ಆಣೆ ಪ್ರಮಾಣ ಮಾಡಿಸಿ ದಂಪತಿಗಳನ್ನು ಪುನಃ ಗೆಜ್ಜಲಘಟ್ಟದ ಅರಮನೆಗೆ ತಂದು ಬಿಟ್ಟರು. ಬಸವರಾಜೇಶ್ವರಿಯವರ ಬದುಕಿನಲ್ಲಿ ಆದ ಏರು ಪೇರಿನ ಬಗ್ಗೆ ಕಾಳಜಿ ವಹಿಸಿದ ಅವರ ಚಿಕ್ಕಪ್ಪ ಕುಮಾರರೆಡ್ಡಿಯವರು ಸ್ವತಃ ಸಹಾಯಕ್ಕೆ ನಿಂತರು. ಈಗಿರುವ ರಾಜಾಅಮರಪ್ಪ ನಾಯಕರ ತಂದೆ ರಾಜಾಜಡಿಸೋಮಪ್ಪ ಗುರಗುಂಟಾ ಸಂಸ್ಥಾನದ

ಜಹಗೀರದಾರರಾಗಿದ್ದರು. ಅವರು ರಾಜಾವೆಂಕಟರಾವ ಅವರಿಂದ ಕಪ್ಪ ಕಾಣಿಕೆಯನ್ನು ಪಡೆಯುತ್ತಿದ್ದರು. ಅಂಥ ಪ್ರಭಾವಶಾಲಿ ಗುರುಗುಂಟಾ ಸಂಸ್ಥಾನಕ್ಕೆ ಹದಿಮೂರು ಹಳ್ಳಿ ರೈತ ಮುಖಂಡರು, ಗುರಗುಂಟಾ ಸಂಸ್ಥಾನದ ರಾಜವಂಶಸ್ಥರು - ಮತ್ತು ಚಿಕ್ಕಪ್ಪನವರು ಸೇರಿ ದಂಪತಿಗಳ ಮನಒಲಿಸಿ ಆಶ್ರಯ ಒದಗಿಸಿ ಬಿಟ್ಟು ಬಂದರು. ಆ ಸಂಸ್ಥಾನದ ಸಾಮಂತರ ಆಶ್ರಯ ಬಸವರಾಜೇಶ್ವರಿ ಮತ್ತು ರಾಜಶರಣಬಸವರವರಿಗೆ ವರದಾನವಾಗಿ ಪರಿಣಯಿಸಿ ಬದುಕಿನಲ್ಲಿ ಭರವಸೆಯನ್ನು ಮೂಡಿಸಿತು. ಉದಾರವಾಗಿ ದವಸಧಾನ್ಯ ನೀಡು ವುದಲ್ಲೇ ನೈತಿಕವಾಗಿ ಬೆಂಗಾವಲಿಗೆ ನಿಂತ ಸಂಸ್ಥಾನದ ಹಿತೈಷಿಗಳು ಹೊಸ ಬದುಕನ್ನು ಇವರಿಗೆ ನೀಡಿದ್ದರೆಂದು ಕೃತಜ್ಞತೆಯಿಂದ ಈಗಲೂ ಬಸವರಾಜೇಶ್ವರಿಯವರು ನೆನಪಿಸಿಕೊಳ್ಳುತ್ತಾರೆ.

ಆ ಊರಿನ ಮೂವರು ಪಟೇಲರು ಈ ದಂಪತಿಗಳಿಗಾದ ಅವಮಾನವನ್ನು ಕಂಡು ಉರಿದು ಬಿದ್ದರು. ಮಮ್ಮಲಮರುಗಿದರು. ವಿದ್ಯೆಯ ಸುಳಿವು ಅವರ ಹತ್ತಿರ ಕಿಂಚಿತ್ತೂ ಸುಳಿಯದಿದ್ದರೂ ಕೂಡಾ ಪಟೇಲರು ತುಂಬಾ ಸೂಕ್ಷ್ಮಮತಿಗಳು ಚಾಣಾಕ್ಷರಾಗಿದ್ದರು. ಅರಸ ಅರಸಿಯರಾಗಿ ಬಾಳಿ ಬದುಕ ಬೇಕಾಗಿದ್ದ ಈ ದಂಪತಿಗಳ ಪಾಡು ಯಾರಿಗೂ ಬಾರದಿರಲಿ ಎಂದು ಹಾರೈಸಿ, ತಮ್ಮ ಮನೆಯಲ್ಲಿಯೇ ಪರದೇಶಿಗಳಾದವರ ಬೆಂಬಲಕ್ಕೆ ನಿಂತು ಭದ್ರತೆಯನ್ನು ಒದಗಿಸಿದರು. ಅವರಲ್ಲೊಬ್ಬರು ತಿಮ್ಮನಗೌಡರಂತೂ ಧೈರ್ಯ ತುಂಬಿ ಬಸವರಾಜೇಶ್ವರಿ ದಂಪತಿಗಳಿಗೆ ಪುನಃ ಜಹಗೀರದಾರಿಕೆಯನ್ನು ಮರಳಿ ದೊರಕಿಸಿ ಕೊಡುವ ದಿಶೆಯಲ್ಲಿ ಹದಿಮೂರು ಹಳ್ಳಿಗಳ ರೈತ ಮುಖಂಡರನ್ನ ಸಂಘಟಿಸಿ ಅವರಿಗೆ ವಿಷಯದ ಸಂಪೂರ್ಣ ಮನವರಿಕೆ ಮಾಡಿಕೊಟ್ಟು ನ್ಯಾಯ ನೀಡಬೇಕೆಂದು ಜಾಗ್ರತೆಗೊಳಿಸಿದರು. ಹೀಗೆ ಬಸವರಾಜೇಶ್ವರಿ ದಂಪತಿಗಳಿಗೆ ರಕ್ಷಣೆ ಕೊಡಿಸುವ ದಿಶೆಯಲ್ಲಿ ರೈತ ಮುಖಂಡರೆಲ್ಲ ಅಮರೇಶ್ವರ ದೇವಸ್ಥಾನದಲ್ಲಿ ನೀಲಮ್ಮಾ ಅವರಿಂದ ಆಣೆ ಮಾಡಿಸಿ ಪ್ರಮಾಣ ವಚನ ಸ್ವೀಕರಿಸಿದ ಮೇಲೆ ಅರಮನೆಗೆ ತಂದು ಬಿಟ್ಟು ಹೋದರು. ಹೀಗೆ ಸಂಸ್ಥಾನದ ಸಾಮಂತರ, ರೈತ ಮುಖಂಡರ ರಕ್ಷಣೆ ಆಶಾದಾಯಕವಾಗಿ ಹೊಸ ಹುಮ್ಮಸ್ಸೇನೋ ನೀಡಿತು. ಆದರೆ ಅರಮನೆಗೆ ಬಂದ ಹಿಂಬಾಲಕರಿಗೆ ಹದಿಮೂರುಹಳ್ಳಿ ಜನರಿಗೆಲ್ಲ ಊಟೋಪಚಾರದ ವ್ಯವಸ್ಥೆ ಮಾಡಿಸುವುದು ಅವರೆಲ್ಲರನ್ನೂ ನಿಭಾಯಿಸುವ ದಿಶೆಯಲ್ಲಿ ಖರ್ಚಿನ ಹೊರೆ ಹೆಚ್ಚುತ್ತಾ ಹೋಯ್ತು. ಅರಮನೆಯ ಹಗೇವಿನಲ್ಲಿಯ ಕಾಳುಕಡಿಬಿಟ್ಟರೆ ಎಲ್ಲಾ ಧನ ಕನಕ ಸಂಪತ್ತು ಶಿರೋಳಕ್ಕೆ ಸಾಗಿಸಲಾಗಿತ್ತು.

ಒಂದೊಂದು ಹಗೇವು ಬಗೆದು ಕಾಳುಕಡಿಹೊರತಗೆದಂತೆಲ್ಲಾ ಚಿಕ್ಕಮ್ಮಾ ಒಂದೊಂದು ಕ್ರಿಮಿನಲ್ ಕೇಸು ಹಾಕುತ್ತಹೋದಳು. ಹೀಗೆ ಒಟ್ಟು ಹದಿಮೂರು ಕ್ರಿಮಿನಲ್ ಕೇಸು ದಾಖಲಾದವು. ಇಷ್ಟಕ್ಕೂ ಸುಮ್ಮನಿರದೇ ಬಸವರಾಜೇಶ್ವರಿ ಮತ್ತು ಶರಣಬಸವ ಅವರ ಮೇಲೆ ಅನ್ ಬೇಲೇಬಲ್ ವಾರಂಟ್ ಜಾರಿಗೊಳಿಸುವುದರಲ್ಲಿ ನೀಲಮ್ಮಾ ಸಫಲಗೊಂಡರು. ಚಿಕ್ಕಮ್ಮ ಕೊಡಬಾರದ ಕಷ್ಟಗಳನ್ನು ನೀಡಿದಾಗ ಅಸಹಾಯಕರಾದ ದಂಪತಿಗಳು ಭೂಗತರಾದರು.

ಆಗ ಜಹಗೀರದಾರ ಆಳ್ವಿಕೆ ಕಾಲದಲ್ಲಿ ಭೌಗೋಲಿಕವಾಗಿ ಕೃಷ್ಣಾನದಿ ದಂಡೆಯಿಂದ ತುಂಗಭದ್ರಾನದಿ ದಂಡೆವರೆಗೆ ಪೊಲೀಸ್ ಬಂದೋ ಬಸ್ತ್ ವ್ಯವಸ್ಥೆ ವೆಂಕಟರಾವ್ ಉಸ್ತುವಾರಿಯಲ್ಲಿತ್ತು. ತಂದೆ ಹಾಗೂ ಹಿರಿಮಗನ ಜಗಳ ದಿನಕ್ಕೊಂದು ಆಕಾರ ಪಡೆಯುತ್ತ ಹೋಯ್ತು. ಇವರನ್ನ ಬೆಂಬಲಿಸಿದ ಪಟೇಲ ತಿಮ್ಮನಗೌಡರ ಮೇಲೆ ಕಾನೂನು ಕ್ರಮ ಜರುಗಿಸಿ ಅರೆಸ್ಟ್ ವಾರೆಂಟ್ ಜಾರಿಗೊಳಿಸಿದರು. ರಾತ್ರಿ ಸುಮಾರು 9 ಗಂಟೆಗೆ ತಿಮ್ಮನಗೌಡನ ಅರೆಸ್ಟ್ ಮಾಡಲು ಪೊಲೀಸರು ಬಂದಾಗ ಧೈರ್ಯಶಾಲಿ ಬಸವರಾಜೇಶ್ವರಿಯವರು "ನಾನೂ ಕಾನೂನು ಬಲ್ಲೆ ರಾತ್ರಿ ಟ್ರೆಸ್‌ಪಾಸ್ ಮಾಡಿ ಅರೆಸ್ಟ್ ಮಾಡಿದ್ರೆ ಗತಿ ನೆಟ್ಟಗಾಗಲಿಕ್ಕಿಲ್ಲವೆಂದು ಅಬ್ಬರಿಸಿದರು. ಕಾನೂನು ತಿಳಿದ ಮಹಿಳೆಯನ್ನು ಎದುರು ಹಾಕಿಕೊಂಡರೆ ಸರಿ ಅಲ್ಲಾ ಎಂದು ಪೊಲೀಸರು ಹಿಂದೇಟು ಹಾಕಿದರು. ಸಾರ್ವಜನಿಕವಾಗಿ ಅಬ್ಬರಿಸಿದ ಬಸವರಾಜೇಶ್ವರಿಯವರ ವರ್ತನೆಯಿದ ರಾಜಾವೆಂಕಟರಾವ ಅವರಿಗೆ ಅವಮಾನ ಆಯ್ತು. ಮುಖಾಮುಖಿ ಮಾವನವರನ್ನು ಎದುರು ಹಾಕಿಕೊಂಡು ಮೇಲಾಧಿಕಾರಿಗಳಿಗೆ ಇವರ ದೌರ್ಜನ್ಯದ ವಿರುದ್ಧ ದೂರು ದಾಖಲು ಮಾಡಿ ಬಿಟ್ಟರು.

ಒಂದು ಕಡೆ ಜಹಗೀರದಾರ ಮಾವ-ಇನ್ನೊದೆಡೆ ಕೈಹಿಡಿದ ಗಂಡ - ಪಿತೂರಿ ಮಾಡುವ ಚಿಕ್ಕಮ್ಮ- ಅಪಾರ ಆಸ್ತಿ ವಿವಾದ - ಜಗಳ - ಮನಸ್ತಾಪ- ಇವೆಲ್ಲದರಿಂದ ನೋವುಂಡ ಬಸವರಾಜೇಶ್ವರಿಯವರಿಗೆ ಕಟುವಾದ ಜೀವನಾನುಭವ ಆಯಿತು ಅದೇ ವೇಳೆಗೆ ಒರ್ವ ಯುವ ಪೋಲಿಸ್ ಅಧಿಕಾರಿಯು ಗೆಜ್ಜಲಘಟ್ಟಕ್ಕೆ ವರ್ಗಾವಣೆಗೊಂಡು ಬಂದ, ನವಾಬ್ ಕುಟುಂಬದ ಹಿನ್ನೆಲೆಯಿಂದ ಬಂದ ಆ ಅಧಿಕಾರಿಯು ಚಾಣಾಕ್ಷ ಮತ್ತು ಸೂಕ್ಷ್ಮಮತಿಯಾದ ಜಹಗ್ರಿದಾರ್ ಮನೆತನದ ಆಸ್ತಿ ಕಲಹ ವಿವರಗಳನ್ನ ಸಾದ್ಯಾಂತವಾಗಿ ಪಡೆದು ಸಮರ್ಪಕ ಆಸ್ತಿ ಹಂಚಿಕೆ ಯಾಗಬೇಕು, ಮಕ್ಕಳೆಲ್ಲರೂ ಸಮಾನ ಹಕ್ಕುದಾರರು, ಎಂದು ಎರಡೂ ಕಡೆಯವರಿಗೆ ಮನವರಿಕೆ ಮಾಡಿ ಕೊಟ್ಟು, ಭೂಗತರಾಗಿದ್ದ ರಾಜಾಶರಣಬಸವ ಅವರನ್ನ ಕರೆತಂದು ಅರಮನೆಗೆ ಬಿಟ್ಟರಲ್ಲದೇ ಎಲ್ಲಾ ಖಟ್ಲೆಗಳನ್ನು ರದ್ದುಗೊಳಿಸಿ ವಾತಾವರಣ ತಿಳಿಗೊಳಿಸಿದರು. ಆಸ್ತಿ ಹಂಚಿಕೆ ವಿವಾದ ಮುಗಿದ ಮೇಲೆ ಮೊದಲಿನಂತೆಯೇ ನೆಮ್ಮದಿಯ ಜೀವನ ಇವರದಾಯಿತು. ಆಗ ಮೊದಲ ಗಂಡು ಮಗು ಜನನ ಅಲ್ಲಿಯೂ ಚಿಕ್ಕಮ್ಮ ತನ್ನ ಹೇಯಕೃತ್ಯ ಎಸಗಿ ಕೂಸು ನೋಡಿಕೊಳ್ಳಲು ನೇಮಿಸಿದ ಸೂಲಗಿತ್ತಿಯ ಮೂಲಕ ವಿಷದ ಗುಂಡುಪಿನ್ನು ಚುಚ್ಚಿಸಿ ಮಗುವನ್ನು ಬಲಿತೆಗೆದುಕೊಂಡ ಮತ್ತೊಂದು ಕರಾಳ ಪ್ರಕರಣ ನಡೆದು ಹೋಯ್ತು, ಹೊಸದಾಗಿ ಬಂದ ಆಯ್‌ಮುಕ್ತಿಯಾರ್ ಗಿರಿಮಲ್ಲಪ್ಪ ಕೂಸು ಹೇಗೆ ಸತ್ತಿತು. ಎಂದು ಮೇಲಿನಂತೆ ವಿವರಿಸಿದ ನೀಲಮ್ಮಾ ಮೊದಲಿದ್ದ ಆಯ್‌ಮುಕ್ತಿಯಾರ್‌ಗೆ ಲಂಚ ರುಸುವತ್ತು ನೀಡಿ ಪ್ರಕರಣ ಮುಚ್ಚಿ ಹಾಕಿದ್ದರು. ಇಷ್ಟಕ್ಕೂ ಸಮಾಧಾನಗೊಳ್ಳದ ಬಸವರಾಜೇಶ್ವರಿಯವರಿಗೆ ಗರ್ಭನಿಲ್ಲಲಾರದಂತೆ ಔಷಧಿಯನ್ನ ಹಾಕಿಸಿರುವೆ ಎಂದು ವದಂತಿ ಹಬ್ಬಿಸಿ ಇವರ ನೆಮ್ಮದಿಯನ್ನ ಸ್ವಲ್ಪ ಕಾಲ ಹಾಳು ಮಾಡಿದ್ದಳು. ದಿನದಿಂದ ದಿನಕ್ಕೆ ಪುನಃ ಜಹಗೀರ್ದಾರ್ ಮನೆತನದ ಆಂತರಿಕ ಕಲಹಗಳು ಉಲ್ಬಣಗೊಳ್ಳುತ್ತಲೇ ನಡೆದವು "ನೋಡಿ ನೀವು ಇಷ್ಟೊಂದು ತೊಂದರೆಗೆ ಒಳಗಾಗಿ ಇದ್ದೀರಿ" ಪಕ್ಕದ ನಿಮ್ಮ ಮಾವನವರ

ಮನೆಯಲ್ಲಿ ಬೇಕಾದಷ್ಟು ದವಸಧಾನ್ಯ ಬಟ್ಟೆಬರೆಎಲ್ಲಾ ಇವೆ. ಎಂದು ಹೇಳಿದ ರೈತ ಮುಖಂಡರು ಎಲ್ಲಾ ಸಾಮಗ್ರಿಗಳನ್ನ ರಾಜಾವೆಂಕಟರಾವ್ ಮನೆಯಿಂದ ಬಸವರಾಜೇಶ್ವರಿಯವರ ಮನೆಗೆ ಸಾಗಿಸಿದಾಗ ಕಳುವಿನ ಕೇಸೊಂದನ್ನ ಹಾಕಿ ಎಲ್ಲಾ ರೈತರನ್ನ ಅರೆಸ್ಟಮಾಡಿಸಿ ಇವರಿಗೆ ಕೊಟ್ಟಿದ್ದ ಮನೆಗೂ ಬೀಗಜಡಿಸಿದರು. ಎಲ್ಲಾ ರೀತಿಯ ಕಷ್ಟ ಕೋಟ್ಲೆಗೆ ಇವರು ಸಿಕ್ಕಿಕೊಂಡಾಗ ಕೋಟೆಮಲ್ಲಪ್ಪನೆಂಬ ಊರಗಣ್ಯವ್ಯಕ್ತಿಯೊಬ್ಬರು ರಾಜಾ ಶರಣಬಸವರನ್ನ ಬೆನ್ನ ಮೇಲೆ ಹತ್ತಿಸಿಕೊಂಡು ಕೋಟೆ ಗೋಡೆ ಹಾರಿಸಿದ್ದ ಪ್ರಸಂಗವನ್ನು ನೆನಪು ಮಾಡಿಕೊಂಡಾಗ ಕಣ್ಣಂಚಿನಲ್ಲಿ ಹನಿಗಳು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಈ ದಂಪತಿಗಳಿಗೆ ಸಹಕಾರ ನೀಡಿ ಸಲಹುದಿದ್ದರೆ ಮುದೊಂದು ದಿನ ರಾಜಕೀಯವಾಗಿ ಬೆಳೆಯಲು ಆಗುತ್ತಿರಲಿಲ್ಲ ಒಮ್ಮೆ 68 ಎಕರೆ ಕೆರೆ ಏರಿಯ ಮೇಲೆ ಗೋಧಿ ಬಿತ್ತಿದ್ದ ಸಂದರ್ಭದಲ್ಲಿ ಹುಲುಸಾದ ಗೋಧಿಬೆಳೆಯನ್ನು  ನಾಗಮ್ಮ ಬಸಮ್ಮ ಎಂಬ ಊರಿನ ಸದೃಡ ಮಹಿಳೆಯರಿಬ್ಬರೇ ರಾಶಿ ಮಾಡಿ ...... ಗೋಧಿ ತುಂಬಿ ಮನೆಮಾಳಿಗೆಯ ಮೇಲೆ ಹರಡಿದ್ದ ಸಾಹಸವನ್ನ ಮನದುಂಬಿ ನೆನಪು ಮಾಡಿಕೊಳ್ಳುತ್ತಾರೆ. ಮಾವನವರ "........." ಕುತಂತ್ರ ಕಾರಸ್ಥಾನಗಳಿಂದ ನೊಂದ ಇವರ ಬದುಕಿಗೆ - ಮತ್ತಿವರು ಎಲ್ಲವನ್ನು ಎದುರಿಸುತ್ತಿರುವ ಎದೆಗಾರಿಕೆಗೆ ಈ ದಂಪತಿಗಳನ್ನ ಕೊಲ್ಲಲು ಒಳಸಂಚು ರೂಪುಗೊಂಡ ಸನ್ನಿವೇಶದಲ್ಲಿ ಆಂಧ್ರಪ್ರದೇಶದಿಂದ ಬಸವರಾಜೇಶ್ವರಿ ತಂದೆಯವರು ನಾಲ್ಕು ಜನ ಸದೃಡ ವ್ಯಕ್ತಿಗಳನ್ನ ಅಂಗರಕ್ಷಕರನ್ನಾಗಿ ನೇಮಿಸಿ ಇವರನ್ನಕಾಪಾಡಿದ್ದಾರೆ "ಹಂಡೆ ಕೇಸು ಮಾತ್ರ ಕೋರ್ಟಿನಲ್ಲಿ ಮುದ್ದತ್ತುಪಡೆಯುತ್ತ ಮುಂದುವರೆದಿತ್ತು" ಕಳುವಿನಕೇಸು ಬಿದ್ದು  ಹೋಗುತ್ತದೆ ಇವರು ಪಾರಾಗುತ್ತಾರೆಂದು ತಂತ್ರ ರೂಪಿಸಿ ಮೂರು ಸೇರು ಬಂಗಾರದ ಗಟ್ಟಿಗಳನ್ನ ಬಾವಿಗೆ ಹಾಕಿಸಿ ರಾಜಾವೆಂಕಟರವ್ ಉಪಪತ್ನಿಯರ ಮಕ್ಕಳನ್ನ ಈ ದಂಪತಿಗಳು ಕೊಲ್ಲಿಸಲು ತಯ್ಯಾರಿ ನಡೆಸಿರುವುದು ಅಂಗರಕ್ಷಕರು ಭೇಧಿಸಿ ಇವರನ್ನ ಗಂಡಾಂತರದಿಂದ ಪಾರುಮಾಡಿದರು ತಾತಯ್ಯ ಅಲಿಯಾಸ್ ಭೀಮ ಎಂಬ ಬೇಡರ ಜನಾಂಗದ ವ್ಯಕ್ತಿಯೊಬ್ಬ ತುಂಬಾ ಬಲಿಷ್ಠನೂ ಧೈರ್ಯಶಾಲಿಯೂ ಆಗಿದ್ದನಂತೆ, ಆತನೆದುರು ಪೋಲಿಸರ ಮಾವ ಆಟವೂ ನಡೆಯುತ್ತಿರಲಿಲ್ಲವಂತೆ, ಹಲವಾರು ಸಾರಿ ಅಟ್ಯಾಕ್ ಮಾಡಿದಾಗ ಅವರೆಲ್ಲರನ್ನೂ ಸದೆಬಡಿದು ಹಾಕಿದ ದೃಶ್ಯ ಇನ್ನೂ ಕಣ್ಣೆಂದೆ ಇದೆ ಎಂದು ಬಸವರಾಜೇಶ್ವರಿಯವರು ಮೆಲುಕು ಹಾಕುತ್ತಾರೆ.

ರಾಜಾವೆಂಕಟರಾವ ಮಧುಮೇಹ ಬಂದು ವಿಧಿವಶರಾದ ಮೇಲೆ ನೀಲಮ್ಮ ಮತ್ತವರ ಮಗ ರಾಜಾಶಿವಶಂಕರ ಗೆಜ್ಜಲಪುರದ ಪಕ್ಕದ ಊರು ನೀಲಗೂಗೆ ವಲಸೆ ಬಂದು -ಇವರಿಗೆ ಕಿರುಕುಳ ನೀಡುವುದನ್ನ ಮುಂದುವರೆಸಿದರು ನೀಲಗೂ ಗ್ರಾಮದ ಜನರಿಗೆ ಹಣದ ಆಮಿಷ ಒಡ್ಡಿದ್ದ ಅವರನ್ನ ತಮ್ಮ ಬೆಂಬಲಕ್ಕೆ ಇಟ್ಟು ಕೊಂಡು ಕಾರ್ಯ ರೂಪಿಸುತ್ತಲೇ ನಡೆದರು ಜಹಗೀರದಾರ್ ಮನೆತನದ ರಿವಾಜಿನಂತೆ ಕಂದಾಯ ವಸೂಲಿಗೆ ಬಸವರಾಜೇಶ್ವರಿಯವರೇ ಹೊರಡುವ ತಯ್ಯಾರಿ ನಡೆಸಿದಾಗ ಕರಿಭೀಮ "ತಾಯಿ ನೀವು ಹೋಗುವುದು ಬೇಡ ನಾನೇ ಹೋಗಿ ಕಂದಾಯ ವಸೂಲಿ ಮಾಡಿ ಕೊಂಡು ಬರುವೆ " ಎಂದು ಹೇಳಿ ಹೊರಟ. ಬನ್ನಿ ನೀಲಗೂನಲ್ಲಿ ಏನಾದರೂ ಅನಾಹುತ ಆಗುತ್ತದೆಂಬ ಇವರ ಊಹೆ ನಿಜವಾಗಿ ಕರಿಭೀಮನನ್ನ ವಧೆ ಮಾಡಲಾಯಿತು ಕಲ್ಲಿನಿಂದ ಹೊಡೆದು ಸಾಯಿಸಿದ್ದಲ್ಲದೇ ಜಜ್ಜಿ ಜಜ್ಜಿ ಆಕ್ರೋಷವನ್ನು

ತೀರಿಸಿಕೊಂಡು ಬಿಟ್ಟರು. ಶೀತಲ ಸಮರ ಕರಿಭೀಮನ ಕೊಲೆಯಲ್ಲಿ ಪರ್ಯಾವಸಾನಗೊಂಡು ಊರು ರಣರಂಗವಾಯಿತು ಇದರಿಂದ ಶಾಂತಪ್ರಿಯರಾದ ಎರಡೂ ಕಡೆ ಊರಿನ ಪ್ರಮುಖರು ಚಿಂತನೆ ನಡೆಯಿನ ಹೀಗೆ ಬಿಟ್ಟರೆ ಇನ್ನೂ ಏನೇನು ಅನಾಹುತ ಕಾದಿದೆಯೋ ಎಂದು ಮುಂದಾಲೋಚಿಸಿ - ಎರಡೂ ಮನೆತನಕ್ಕೆ ಸಮಪಾಲು ಹಂಚಿಕೆ ಮಾಡಿ. ಜಗಳಕ್ಕೆ ತೆರೆ ಎಳೆದರು ನೀಲಮ್ಮ ಅವರಿಗೆ ಕ್ಯಾನ್ಸರ್ ಕಾಯಿಲೆ ತಲುಗಿಕೊಂಡಾಗ ಹಿಂದಿನ ಎಲ್ಲಾ ಹಗೆತನ ಮರೆತು ಬಸವರಾಜೇಶ್ವರಿಯವರೇ ಆರೈಕೆಮಾಡಿ ಮಾನವತೆಯನ್ನು ಮರೆದು ಎಲ್ಲರ ಗೌರವಕ್ಕೆ ಪಾತ್ರರಾದರು.

ಸಂಸಾರದ ಹೊಣೆ - ಜಹಗೀರದಾರ್ ಮನೆತನದ ----- ಆಸ್ತಿಕಲಹ - ಪರಿಹಾರ - ಊರಿನಗಣ್ಯರ ಮಧ್ಯಸ್ಥಿಕೆ - ಪೊಲೀಸರ ನಿಷ್ಕ್ರಿಯತೆ - ಭೂದಾಖಲೆ ಮತ್ತು ಭೂಪಾಕಾಗದಗಳ ಒಕ್ಕಣೆ ಓದು ಎಲ್ಲದರಲ್ಲಿಯೂ ಸಕ್ರಿಯವಾಗಿ ತೊಡಗಿಕೊಂಡು ನೊಂದು ಬೆಂದು ಅನುಭವ ಪಡೆದ ಬಸವರಾಜೇಸ್ವರಿಯವರಿಗೆ ರಾಜಕೀಯ ಒಲವು ಬಾಲ್ಯದಲ್ಲಿಯೇ ಚಿಕ್ಕಪ್ಪನವರ ಪ್ರೇರಣೆಯಿಂದ ಮೂಡಿತ್ತಾದರೂ ಬದುಕಿನ ಕುಲುಮೆಯಲ್ಲಿ ಬೆಂದ ಜೀವ ಪರಿಪಕ್ವಗೊಂಡು ಎದೆಯೊಡೆಯುವ ಯಾವುದೇ ಸಮಸ್ಯೆ ಬಂದರೂ ಛಾತಿಯೊಂದಿಗೆ ಎದುರಿಸುವ ಛಲಮೈಗೂಡಿ ಪರಿಹಾರ ಕಂಡುಕೊಳ್ಳುವ ಪರಿಪಾಠ ನಿರಂತರ ನಾಲ್ಕು ದಶಕಗಳ ಕಾಲ ನಾಯಕಿಯಾಗಿ ನಾಯಕತ್ವ ನೀಡಲು ಎಲ್ಲಾ ಸಾಧ್ಯತೆಗಳು ಮೈಗೂಡಿದವು. ನಾಲ್ಕು ಮಕ್ಕಳು ತಾಯಿಯಾದ ಇವರಿಗೆ ಅವರಿಗೆ ಸೂಕ್ತ ವಿದ್ಯೆಕೊಡಿಸುವ ಜವಾಬ್ದಾರಿಯೊಂದಿಗೆ 1957ರಲ್ಲಿ 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್' ಸೇರುವ ಮೂಲಕ ರಾಜಕೀಯ ಪಾದಾರ್ಪಣೆಯನ್ನು ಬಸವರಾಜೇಶ್ವರಿಯವರು ಮಾಡುತ್ತಾರೆ.

ರಾಜಕೀಯ ಪಕ್ಷಿನೋಟ

| | | | |
|---|---|---|---|
| 1957-1962 | ವಿಧಾನಸಭೆ ಸದಸ್ಯ | MLA | ಮಾನ್ವಿಕ್ಷೇತ್ರ ವಿಧಾನಸಭಾಕ್ಷೇತ್ರ |
| 1962-1967 | ವಿಧಾನಸಭೆ ಸದಸ್ಯ | | ಮಾನ್ವಿಕ್ಷೇತ್ರ ವಿಧಾನಸಭಾಕ್ಷೇತ್ರ |
| 1967-1976 | ವಿಧಾನಸಭೆ ಸದಸ್ಯ | | ಮಾನ್ವಿಕ್ಷೇತ್ರ ವಿಧಾನಸಭಾಕ್ಷೇತ್ರ |

30.5.1968 ರಿಂದ 1971 ಏಪ್ರಿಲ್‌ವರೆಗೆ ಮಹಿಳಾ ಮಕ್ಕಳ ಕಲ್ಯಾಣ ಸಚಿವೆಯಾಗೇ ಸೇವೆ

| | | | |
|---|---|---|---|
| 1976 - 1982 | ವಿಧಾನಪರಿಷತ್ ಸದಸ್ಯ | MLC | |
| 1982 - 1984 | ವಿಧಾನಪರಿಷತ್ ಸದಸ್ಯ | MLC | |
| 1984 - 1989 | ಲೋಕಸಭಾ ಸದಸ್ಯ | MP | ಬಳ್ಳಾರಿ ಲೋಕಸಭಾಕ್ಷೇತ್ರ |
| 1980 - 1991 | ಲೋಕಸಭಾ ಸದಸ್ಯ | | ಬಳ್ಳಾರಿ ಲೋಕಸಭಾಕ್ಷೇತ್ರ |
| 1991 - 1996 | ಲೋಕಸಭಾ ಸದಸ್ಯ | | ಬಳ್ಳಾರಿ ಲೋಕಸಭಾಕ್ಷೇತ್ರ |

ರಾಜಕೀಯನಾಯಕಿ: 1957ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸದಸ್ಯೆಯಾದ ಬಸವರಾಜೇಶ್ವರಿಯವರು ಮಾನ್ವಿ ವಿಧಾನ ಸಭಾ ಕ್ಷೇತ್ರದಿಂದ ಪ್ರಥಮ ಬಾರಿಗೆ ಚುನಾವಣೆಯಲ್ಲಿ ಗೆದ್ದನಂತರ ಹಿಂದಕ್ಕೆ ತಿರುಗಿ ನೋಡಲಿಲ್ಲ. ಅಲ್ಲಿಂದ ಸತತ ಮೂರು ಬಾರಿ ಎಂ.ಎಲ್.ಎ. ಆಗಿ ಆಯ್ಕೆಗೊಂಡು ಜನಾನುರಾಗಿ ಜನಪ್ರಿಯ ಶಾಸಕಿಯಾಗಿ ಮತದಾರರ ಒಲವನ್ನ ಪಡೆದುಕೊಂಡು ಹ್ಯಾಟ್ರಿಕ್ ಸಾಧನೆ ಮಾಡಿದ ಕೆಲವೇ ಕೆಲರು ಸಂಸದೀಯ ಪಟುಗಳಲ್ಲಿ ಬಸವರಾಜೇಶ್ವರಿಯವರ ಹೆಸರು ಮೊದಲಿಗೆ ಬರುತ್ತದೆ. ಶಾಸಕಿಯಾಗಿದ್ದ ಅವಧಿಯಲ್ಲಿ ಟ್ಯಾಗೋರ್ ಮೆಮೋರಿಯಲ್ ಅಸೋಸಿಯೇಷನ್ ವಿದ್ಯಾ ಸಂಸ್ಥೆಯ ಮುಖಾಂತರ ಕ್ಷೇತ್ರದಾದ್ಯಂತ ಹಲವಾರು ಶಾಲೆಗಳನ್ನು ಪ್ರಾರಂಭ ಮಾಡಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ. ಬಾಲಕಿಯರ ಪ್ರೌಢಶಾಲೆಗೆ ಪ್ರಾಶಸ್ತ್ಯ ನೀಡಿದುದಲ್ಲದೇ ಅತ್ಯಂತ ನಿರ್ಲಕ್ಷಿತ ಪ್ರದೇಶಗಳಲ್ಲಿ ಹಳ್ಳಿಗಳಲ್ಲಿ ಶಾಲೆಗಳನ್ನು ಪ್ರಾರಂಭಿಸಿದ ಕೀರ್ತಿ ಸಹ ಇವರಿಗೆ ಸಲ್ಲುತ್ತದೆ. ಹಿಂದುಳಿದ ಪ್ರದೇಶದ ಮಕ್ಕಳ ಜ್ಞಾನಾರ್ಜನೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಈ ಶಾಲೆಗಳ ತೆರೆಯುವಿಕೆ ಅರ್ಥಪೂರ್ಣ ಕಾರ್ಯಕ್ರಮವಾಗಿ ಪರಿಣಮಿಸಿ ಬಸವರಾಜೇಶ್ವರಿಯವರು ಹೆಚ್ಚು ಜನಾನುರಾಗಿಯಾದರು. ಕರ್ನಾಟಕ ಕೃಷಿಕ ಸಮಾಜದ ಸದಸ್ಯೆಯಾದ ಇವರು 'ಸಮಾಜದ' ಆರ್ಥಿಕ ಸ್ಥಿತಿ ಸುಧಾರಣೆಯತ್ತ ಸಾಕಷ್ಟು ಗಮನ ಹರಿಸಿದರು. ತಮ್ಮ ವೇತನದ ಕಾಲು ಭಾಗವನ್ನು ಕೃಷಿಕ ಸಮಾಜಕ್ಕೆ ಅಧಿಕಾರದ ಅವಧಿಯಿದ್ದಕ್ಕೂ ನೀಡುತ್ತ ಬಂದರು. ಕೆನರಾಬ್ಯಾಂಕಿನಿಂದ ಹೆಚ್ಚು ಸಂಪನ್ಮೂಲ ಬಿಡುಗಡೆಗೊಳಿಸುವ ದಿಸೆಯಲ್ಲಿ ಪ್ರಯತ್ನಶೀಲರಾಗಿ ಇವರು ಕಾಳಜಿ ವಹಿಸದಿದ್ದರೆ ಕೃಷಿಕ ಸಮಾಜಕ್ಕೆ ಸ್ವಂತ ಸುಸಜ್ಜಿತ ಕಟ್ಟಡ ಕನಸಿನಮಾತಾಗಿರುತ್ತಿತ್ತು. ನಂತರ ಇವರು ಭಾರತ ಕೃಷಿಕ ಸಮಾಜ'ದ ಕಾರ್ಯಕಾರಿಯಾಗಿ ಸದಸ್ಯೆಯಾದರು. ಆಗ ಬಲರಾಂಜಾಖಡ ವರು ಅಧ್ಯಕ್ಷರಾಗಿ ವಿರಾಜ ಮಾನರಾಗಿದ್ದರು. ಲೋಕಸಭೆಯ ಸ್ಪೀಕರೂ ಆಗಿದ್ದ ಬಲರಾಂಜಾಖಡ ಅವರು ಎಲ್ಲಾ ಕಾರ್ಯಕಾರಿ ಸಮಿತಿ ಸದಸ್ಯರೊಂದಿಗೆ ಸಿಂಗಾಪೂರ್ ಹಾಂಕಾಂಗ್ ಬ್ಯಾಂಕಾಂಕ್ ಜಪಾನ್ ದೇಶಗಳ ಅಧ್ಯಯನ ಪ್ರವಾಸಕ್ಕೆ ವ್ಯವಸ್ಥೆಗೊಳಿಸಿದರು. ಇದು ಬಸವರಾಜೇಶ್ವರಿಯವರ ಪ್ರಥಮ ವಿದೇಶ ಪ್ರವಾಸವಾಗಿತ್ತು. ಈ ಅಧ್ಯಯನ ಪ್ರವಾಸದಡಿ ಭತ್ತ ಬೆಳೆಯುವ ಕೃಷಿಯ ಬಗ್ಗೆ ವಿವರವಾಗಿ ತಿಳಿದುಕೊಳ್ಳಲು ಸಾಧ್ಯವಾಯಿತು. ಜಾಯಿಂಟ್ ಸೆಲೆಕ್ಟ್ ಕಮಿಟಿ ಆನ್ ಲ್ಯಾಂಡ್ ರಿಫಾರ್ಮಸ್ ಬಿಲ್ ಮತ್ತು ಪಂಚಾಯತ್ ರಾಜ್ ಬಿಲ್‌ನ ಸಮಸ್ಯೆಯಾಗಿ ಕಾರ್ಯನಿರ್ವಹಿಸಿದ ಅನುಭವ ಇವರ ಪಾಲಿಗಾಯಿತು. ವಿರೇಂದ್ರಪಾಟೀಲರು ಮೊದಲಬಾರಿ ಮುಖ್ಯಮಂತ್ರಿಯಾಗಿದ್ದಾಗ (1968-1971) ಅವರ ಸಚಿವ ಸಂಪುಟದಲ್ಲಿ ಸಮಾಜಕಲ್ಯಾಣ ಇಲಾಖೆ ಸಚಿವೆಯಾಗಿ ಸಮರ್ಥ ಆಡಳಿತಕ್ಕೆ ದಕ್ಷತೆಗೆ ಮುಖ್ಯ ಮಂತ್ರಿಗಳು ಮತ್ತಿತರ ಸಹೋದ್ಯೋಗಿ ಸಚಿವರಿಂದ ಪ್ರಶಂಸೆಗೆ ಪಾತ್ರರಾಗಿದ್ದರು.

1976-1984 ರ ಅವಧಿಯಲ್ಲಿ ವಿಧಾನಪರಿಷತ್ ಸದಸ್ಯೆಯಾಗಿ ಆಯ್ಕೆಗೊಂಡ ಇವರು ವಿಧಾನಪರಿಷತ್ ಅಧ್ಯಕ್ಷೆಯಾಗಿ ಸಮರ್ಥವಾಗಿ ಕಾರ್ಯ ನಿರ್ವಹಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾಗ ಗುಂಡುರಾಯರು ಮುಖ್ಯಮಂತ್ರಿಗಳಾಗಿದ್ದರು ವಿಧಾನಪರಿಷತ್ ಸದಸ್ಯೆಯಾದ ಸಂದರ್ಭದಲ್ಲಿ

ಜಾಂಬಿಯಾದಲ್ಲಿ ಜರುಗಿದ All India Presiding Offiers Meeting ನಲ್ಲಿ ಭಾಗವಹಿಸುವ ಅವಕಾಶವನ್ನು ಪಡೆದರು ತಾಂಜೇನಿಯಾ ಪ್ರದೇಶಕ್ಕೆ ಸಹ ಭೇಟಿಯನ್ನು ನೀಡಿದರು ಅಲ್ಲಿ ಸಮುದ್ರ ಮತ್ತು ಕಾಡು ಪ್ರಾಣಿಗಳನ್ನು ಹತ್ತಿರದಿಂದ ನೋಡುವ ಸದಾವಕಾಶವನ್ನು ಪಡೆದ ಅವರು ಅಲ್ಲಿಯ ನೈಸರ್ಗಿಕ ಸಂಪತ್ತು ಅಪಾರ ಮತ್ತು ಅವರ್ಣಿಯವಾದುದೆಂದು ನೆನಪು ಮಾಡಿಕೊಳ್ಳುತ್ತಾರೆ.

ನಂತರ 1984-1996 ಅವಧಿಯವರೆಗೆ ಸತತ ಮೂರು ಬಾರಿ ಬಳ್ಳಾರಿ ಲೋಕ ಸಭಾ ಕ್ಷೇತ್ರದಿಂದ ಲೋಕಸಭಾ ಸದಸ್ಯೆಯಾಗಿ ಆಯ್ಕೆಗೊಂಡು ಅಲ್ಲಿಯೂ ಹ್ಯಾಟ್ರಿಕ್ ಸಾಧನೆ ಮಾಡಿದ ಬಸವರಾಜೇಶ್ವರಿಯವರು ಅದೆಷ್ಟು ಜನಾನುರಾಗಿಯಾಗಿದ್ದರೆಂಬುದಕ್ಕೆ ಸಾಟಿ ಇಲ್ಲ. ಇವರ ಅಧಿಕಾರದ ಅವಧಿಯಲ್ಲಿ ಈಗಿನ ಹಂಪಿ ಎಕ್ಸ್‌ಪ್ರೆಸ್ ಟ್ರೇನ್ ಪಾರಂಭಗೊಳಿಸಲು ಮೂಲ ಪ್ರೇರಣೆಯಾದರು. ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಬಳ್ಳಾರಿ ಲೋಕಸಭಾ ಕ್ರೇತ್ರಕ್ಕೂ ನಾಡಿಗೂ ತಂದ ಕೀರ್ತಿಗೆ ಪಾತ್ರರಾದರು. ಪರಿಶಿಷ್ಟ ಪಂಗಡದ ಕಾಲೋನಿಗಳಿಗೆ ಶೌಚಾಲಯ ಮತ್ತು ಚರಂಡಿ ವ್ಯವಸ್ಥೆ ರೂಪಿಸಲು ಅಪಾರವಾದ ಹಣವನ್ನು ಕೇಂದ್ರ ಸರ್ಕಾರದಿಂದ ಬಿಡುಗಡೆಗೊಳಿಸಿ ಆ ಕ್ಷೇತ್ರದ ನೊಂದವರಿಗೆ ನ್ಯಾಯ ಒದಗಿಸುವುದರಲ್ಲಿ ಸಫಲತೆ ಸಾಧಿಸಿದರು. ಹಗರಿಬ್ರಿಜ್ ಕುಡಿಯುವ ನೀರಿನ ಸೌಕರ್ಯದ ಜತೆಗೆ ಅನೇಕ ಅಭಿವೃದ್ಧಿ ಕೆಲಸಗಳಲ್ಲಿ ತೊಡಗಿಕೊಂಡರು. ಅನೇಕ ಪ್ರಾಥಮಿಕ ಮಾಧ್ಯಮಿಕ ಶಾಲೆಗಳನ್ನು ಹಳ್ಳಿಗಳಲ್ಲಿ ತೆರೆದು ತಳಮಟ್ಟದ ಜನರಿಗೆ ವಿದ್ಯೆ ದೊರಕಿಸಿಕೊಡುವ ದಿಶೆಯಲ್ಲಿ ಬಹಳ ಶ್ರಮ ಹಾಕಿದರು. ಮೂರನೇ ಬಾರಿ ಎಂ.ಪಿ.ಯಾಗಿ ಆಯ್ಕೆಗೊಂಡಾಗ ಸಚಿವ ಸಂಪುಟದಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವೆಯಾಗಿ ಪ್ರಮಾಣವಚನ ಸ್ವೀಕರಿಸಿದಾಗ ಪಿ.ವಿ. ನರಸಿಂಹರಾವ್ ಅವರು ಅಂದಿನ ಪ್ರಧಾನ ಮಂತ್ರಿಗಳಾಗಿದ್ದರು. ಕೇಂದ್ರ ಸಚಿವೆಯಾಗಿ ಸೇವೆ ಸಲ್ಲಿಸಿದ ಕೀರ್ತಿಗೆ ಭಾಜಕರು ಆ ಅವಧಿಯಲ್ಲಿ ಕರ್ನಾಟಕದ ಉದ್ದಗಲಕ್ಕೂ ಬಾಲವಾಡಿ ಕೇಂದ್ರಗಳನ್ನು ತೆರೆದು ಗ್ರಾಮೀಣ ಪ್ರದೇಶದ ಮಕ್ಕಳಿಗೆ ಹೊಸ ಕಾಯಕಲ್ಪ ರೂಪಿಸಿದರು. ಎರಡು ಬಾರಿ ಜಾಗತಿಕ ಮಹಿಳಾ ಸಮಾವೇಶಗಳು ಬೀಚಕ್ಯಾಂಡಿ ಮತ್ತು ಚೈನಾ ದೇಶಗಳಲ್ಲಿ ಅನುಕ್ರಮವಾಗಿ ಜರುಗಿದಾಗ ಭಾರತವನ್ನು ಪ್ರತಿನಿಧಿಸುವ ಅವಕಾಶವನ್ನು ಪಡೆದ ಇವರು ಆದೇಶಗಳ ಎಲ್ಲಾ ರಾಜ್ಯಗಳಲ್ಲಿ ಸುತ್ತಾಡಿ ಹಲವಾರು ಸಾಮಾಜಿಕ ಸಂಘಟನೆಗಳ ಪದಾಧಿಕಾರಿಗಳೊಂದಿಗೆ ಚರ್ಚೆ ನಡೆಸಿದರು ಆರ್ಥಿಕವಾಗಿ ಮಹಿಳಾ ಅಭಿವೃದ್ಧಿ ಮತ್ತು ಮಹಿಳಾ ಸ-ಶಕ್ತಿಕರಣದಂತಹ ಮಹಿಳಾ ಅಭಿವೃದ್ಧಿ ವಿಚಾರ ಗೋಷ್ಠಿಗಳಲ್ಲಿ ಭಾಗವಹಿಸಿ ತಮ್ಮ ಅಪಾರವಾದ ಅನುಭವವನ್ನ ವಿಚಾರಗಳನ್ನು ವಿನಿಮಯ ಮಾಡಿಕೊಳ್ಳುವ ಸದಾವಕಾಶವನ್ನ ಕೇಂದ್ರ ಸಚಿವೆಯಾದ ಸಂದರ್ಭದಲ್ಲಿ ಬಸವರಾಜೇಶ್ವರಿಯವರು ಪಡೆದರು. ಸಮಾವೇಶದಲ್ಲಿ ನಿರ್ಣಯದ ಕರಡನ್ನ ಸಂದಾಯ ಮಾಡುವುದಕ್ಕೆ ಮುಂಚೆ ಇಂಡೋನೇಷಿಯಾ ಮತ್ತು ಬಾಂಗ್ಲಾದೇಶಗಳಿಗೂ ಸಂಸದೆಯವರು ಭೇಟಿ ನೀಡಿದರು. ನಿರ್ಣಯದ ಕರಡನ್ನ ಮಂಡಿಸಿದಾಗ ಅದು ಸರ್ವಾನುಮತದಿಂದ ಅಂಗೀಕಾರಗೊಂಡಿತು. ಸಮಾವೇಶಕ್ಕೆ ಭಾರತ ತಂಡದ ನಾಯಕಿಯಾಗಿದ್ದ ಇವರೊಂದಿಗೆ 1500

ಪ್ರತಿನಿಧಿಗಳು ವಿವಿಧ ಪ್ರದೇಶಗಳಿಂದ ಹಾಜರಾಗಿದ್ದರು. ಭಾರತದ ಪ್ರತಿನಿಧಿಯಾಗಿ ಜಾಗತಿಕ ಮಹಿಳಾ ಸಮಾವೇಶದಲ್ಲಿ ಭಾಗವಹಿಸಿ ಮಾತನಾಡುವ ಅವಕಾಶ ಪಡೆದ ಪ್ರಥಮ ಭಾರತೀಯ ಮಹಿಳೆಯಾಗಿ ಸಂಸದೆ ಬಸವರಾಜೇಶ್ವರಿಯವರು ಖ್ಯಾತಿಗೊಂಡರು. ಕಾಮನ್‌ವೆಲ್ತ್ ಪಾರ್ಲಿಮೆಂಟರಿ ಪಾರ್ಟಿಯಲ್ಲಿ ಮತ್ತು ಸಾರ್ಕ್ ಸಮ್ಮೇಳನಗಳಲ್ಲಿ ಭಾರತದ ಪ್ರತಿನಿಧಿಯಾಗಿ ಅಭಿಪ್ರಾಯ ಮಂಡಿಸುವ ಅವಕಾಶವನ್ನು ತಮ್ಮ ಅಧಿಕಾರವಧಿಯಲ್ಲಿ ಇವರು ಪಡೆದರು. (ಮಹಿಳೆಯರ ಅಧಿಕಾರ ಮತ್ತು ಅಭಿವೃದ್ಧಿ ಕುರಿತಂತೆ ಭಾರತದ ಪ್ರತಿನಿಧಿಯಾಗಿ 'ಬೀಜಿಂಗ್'ನಲ್ಲಿ ಭಾಗವಹಿಸಿದ ಸಂದರ್ಭದಲ್ಲಿಯೇ ಪ್ರಧಾನಮಂತ್ರಿ ಪಿ.ವಿ. ನರಸಿಂಹರಾವ್ ಅವರಿಂದ ತುರ್ತುಕರೆ ಬಂದು ಮಂತ್ರಿ ಪದವಿಗೆ ರಾಜೀನಾಮೆ ಕೇಳಿದ್ದರು! ಇಂದಿಗೂ ಯಾಕೆ ಹೀಗಾಯ್ತು? ಎಂಬ ಪ್ರಶ್ನೆ ಒಗಟಾಗಿಯೇ ಉಳಿಯಿತೆಂದು ವಿಷಾದವ್ಯಕ್ತಪಡಿಸಿದ ಸಂಸದೆಯವರು "ಒಗಟಿ"ಗೆ ಉತ್ತರ ಹುಡುಕುತ್ತಲೇ ಇದ್ದಾರೆ. 35 ವರ್ಷಗಳ ಸುದೀರ್ಘ ಸಕ್ರಿಯ ರಾಜಕೀಯ ಬದುಕಿನ ಒಂದು ಕಾಲಘಟ್ಟ ಇದಾದರೆ, ಮುಂದೆ ಕೆಲವು ದಿನ ಲೋಕಸಭಾ ಸದಸ್ಯೆಯವರ ಪಾಲಿಗೆ ಕತ್ತಲೆಯ ದಿನಗಳಾದವು. ದೃತಿಗೆಡದೇ ಸಾರ್ವಜನಿಕ ಬದುಕಿನೊಂದಿಗೆ ಹಾಸುಹೊಕ್ಕಾಗಿದ್ದ ಜೀವ ತುಡಿತ ಹೆಚ್ಚಾಗಿ ಬಳ್ಳಾರಿಯಲ್ಲಿ ಸಂಜಯ್‌ಗಾಂಧಿ ಪಾಲಿಟೆಕ್ನಿಕ್ ಕಾಲೇಜ್ ಸ್ಥಾಪಿಸಿದರು. ಇಂಜನೀಯರಿಂಗ್ ಕಾಲೇಜ್ ಜತೆ ಜತೆಗೆ ಬಯೋಟೆಕ್ನಾಲಾಜಿ, ಇನ್‌ಫಾರ್ಮಾಷನ್ ಟೆಕ್ನಾಲಾಜಿ, ಕಂಪ್ಯೂಟರ್‌ಸೈನ್ಸ್, ಮುಂತಾದ ತಾಂತ್ರಿಕ ವಿದ್ಯೆ ನೀಡುವ ಕಾಲೇಜುಗಳನ್ನು ಪ್ರಾರಂಭಗೊಳಿಸಿ ಸಂಪೂರ್ಣವಾಗಿ ಅರಿವಿನ ಪ್ರಪಂಚದಲ್ಲಿ ತಮ್ಮನ್ನು ತೊಡಗಿಸಿಕೊಂಡು ಹೊಸಉತ್ಸಾಹ ಹುಮ್ಮಸ್ಸನ್ನು ಮರಳಿ ಪಡೆಯುವುದಲ್ಲಿ ಯಶಸ್ವಿಯಾದರು.

ಬಳ್ಳಾರಿಯಲ್ಲಿಯೇ ಸಣ್ಣಉಕ್ಕಿನ ಘಟಕ 'ನವಕರ್ನಾಟಕ ಸ್ಟೀಲ್ ಲಿಮಿಟೆಡ್' ಸ್ಥಾಪನೆಯೊಂದಿಗೆ ಅದರ ಸಂಸ್ಥಾಪಕ ಅಧ್ಯಕ್ಷರಾಗಿ ಇಂದಿಗೂ ಮುಂದುವರೆದಿದ್ದಾರೆ. ಅಮರೇಶ್ವರ ರೋಲಿಂಗ್ ಮಿಲ್ಸ್ ಜತೆಗೆ ಮೈಕ್ರೋ ಕಾಂಕ್ರೀಟ್ ಪ್ಲಾಂಟ್ (ಹುಣಸಗಿ) ಸ್ಥಾಪನೆಯು VSIL ಎನ್ಸಿಲರಿ ಯೂನಿಟ್ ಆಗಿ ಇಂದಿಗೂ ಕಾರ್ಯನಿರ್ವಹಿಸುತ್ತಲಿದೆ.

ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದೆ ಮಾಣ್ಬದೆ
ಕಡೆಗೀಲು ಬಂಡಿಗಾಧಾರ
ಕಡುದರ್ಪವೇರಿದ ಒಡಲೆಂಬ ಬಂಡಿಗೆ
ಮೃಢ ಭಕ್ತರ ನುಡಿಗಡಣವೆ ಕಡೆಗೀಲು ಕಾಣಾ ರಾಮನಾಥ!

– ಜೇಡರ ದಾಸಿಮಯ್ಯ

ಹೊಲೆಯರ ಬಾವಿಂಗಲೊಂದು ಎಲು ನಟ್ಟಿದ್ದಡೆ
ಹೊಲೆಯೆಂಬುದು ಲೋಕವೆಲ್ಲ
ಹಲವೆಲುವಿದ್ದ ಬಾಯಿ ಬಲವರವ ನುಡಿದಡೆ
ಹೊಲೆಯರ ಬಾವಿಯಿಂದ ಕರಕಷ್ಟ ಕಾಣಾ ರಾಮನಾಥ!

– ಜೇಡರ ದಾಸಿಮಯ್ಯ

# ಭಾಷಣಗಳು

1969ರ ಸಾಲಿನಲ್ಲಿ ಸನ್ಮಾನ್ಯ ವೀರೇಂದ್ರ ಪಾಟೀಲರ ಸಚಿವ ಸಂಪುಟದಲ್ಲಿ ಸಮಾಜಕಲ್ಯಾಣ ಇಲಾಖೆಯ ರಾಜ್ಯ ಸಚಿವೆಯಾಗಿ, ಮಾನ್ಯ ಸದಸ್ಯರ ಬೇಡಿಕೆ, ಟೀಕೆ ಆಕ್ಷೇಪಣೆಗಳಿಗೆ ಉತ್ತರ ನೀಡುವ ಇವರ ಭಾಷಣ ಅತ್ಯಂತ ಮಹತ್ವದ್ದು ಸತತ ಅಭ್ಯಾಸ, ತಯ್ಯಾರಿ ಮಾಡಿಕೊಂಡು ವಿಷಯವನ್ನು ಮನದಟ್ಟು ಮಾಡುತ್ತಾ ಹೋಗುತ್ತಾರೆ. ಎಲ್ಲಿಯೂ ವಿಚಲಿತರಾಗದೇ ನಿರೂಪಿಸುತ್ತಾ ಹೋಗುವುದು ಉತ್ತರವನ್ನು ಉತ್ತರ ಕರ್ನಾಟಕ ಭಾಷೆಯಲ್ಲಿ ಮನಮುಟ್ಟಿಸುತ್ತಾರೆ ಇವರು ಮಂಡಿಸಿದ ಈವರೆಗಿನ ಭಾಷಣಗಳಲ್ಲಿ ಇದು ಅತ್ಯಂತ ಗಮನಾರ್ಹ ಮತ್ತು ಪ್ರಶಂಶನೀಯವಾದುದು.

ಶ್ರೀಮತಿ ಬಸವರಾಜೇಶ್ವರಿ:- ಅಧ್ಯಕ್ಷರೇ, ಅನೇಕ ಮಾನ್ಯ ಸದಸ್ಯರುಗಳು ಈ ಡಿಮ್ಯಾಂಡ್ ಬಗ್ಗೆ ಮಾತನಾಡಿ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ ಮತ್ತು ರಚನಾತ್ಮಕವಾದ ಟೀಕೆಗಳನ್ನು ಸಹ ಮಾಡಿದ್ದಾರೆ. ಅವರೆಲ್ಲರಿಗೂ ಕೂಡ ತಮ್ಮ ಮೂಲಕ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ. ನಾವು ಈಗ ನಾಲ್ಕನೆಯ ಪಂಚವಾರ್ಷಿಕ ಯೋಜನೆಯನ್ನು ಪ್ರಾರಂಭ ಮಾಡತಕ್ಕಂಥ ಸಂದರ್ಭದಲ್ಲಿ ಇದ್ದೇವೆ. ಈ ಯೋಜನೆಯಲ್ಲಿ ಸುಮಾರು 600 ಲಕ್ಷ ರೂಪಾಯಿಗಳನ್ನು ಖರ್ಚು ಮಾಡತಕ್ಕಂಥ ಒಂದು ಯೋಜನೆಯನ್ನು ಇಟ್ಟುಕೊಂಡಿರುವುದು ಮಾನ್ಯ ಸದಸ್ಯರಿಗೆ ತಿಳಿದಂಥ ವಿಷಯವಾಗಿದೆ. ಮಾನ್ಯ ಸದಸ್ಯರನೇಕರು ಅಭಿಪ್ರಾಯಪಟ್ಟಂತೆ ವಿದ್ಯಾಭ್ಯಾಸಕ್ಕಾಗಿ ಹೆಚ್ಚಿನ ಆಸಕ್ತಿಯನ್ನು ಈ ಯೋಜನೆಯಲ್ಲಿ ಕೊಡಲಾಗಿದೆಯೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಅಡ್ವೈಸರಿ ಕಮಿಟಿಯವರು ಕೊಟ್ಟಿರುವ ಸಲಹೆಗಳನ್ನು ಮತ್ತು ಈ ಮನೆಯ ಮಾನ್ಯ ಸದಸ್ಯರುಗಳು ಕೊಟ್ಟಿರುವ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಪಂಚವಾರ್ಷಿಕ ಯೋಜನೆಯನ್ನು ಕಾರ್ಯಗತ ಮಾಡುವ ಸಮಯದಲ್ಲಿ ಅನುಷ್ಠಾನಕ್ಕೆ ತರಲು ಆ ಬಗ್ಗೆ ಅನೇಕ ಸ್ಕೀಮ್‌ಗಳನ್ನು ಹಾಕಿಕೊಂಡಿದ್ದೇವೆಂದು ಈ ಸಂದರ್ಭದಲ್ಲಿ ಹೇಳಲು ಇಷ್ಟಪಡುತ್ತೇನೆ. 1969-70ನೇ ಸಾಲಿಗೆ ಇಟ್ಟಿರುವ ಹಣ ಬಹಳ ಕಡಿಮೆ ಇದೆ ಎಂದು ಅನೇಕ ಮಾನ್ಯ ಸದಸ್ಯರುಗಳು ಹೇಳಿದರು ಈ ಇಲಾಖೆಯಿಂದ ಏನೂ ಕೆಲಸವಾಲ್ಲ, ಪ್ರಗತಿಯಲ್ಲಿ ಒಂದು ಇಂಚ್ ಕೂಡ ಮುಂದಕ್ಕೆ ಹೋಗಿಲ್ಲ ಅನ್ನುವ ಮಾತನ್ನು ಮಾನ್ಯ ಸದಸ್ಯರುಗಳು ಹೇಳಿದರು. ಮತ್ತು ಹಿಂದಿನ ವರ್ಷ ಮಾನ್ಯ ಸದಸ್ಯರುಗಳು ಮಾಡಿದ ಸಲಹೆಗಳನ್ನು ಸರ್ಕಾರದವರು ಗಮನದಲ್ಲಿಟ್ಟುಕೊಂಡು ಅದರಂತೆ ಅನುಷ್ಠಾನಕ್ಕೆ ತಂದಿಲ್ಲವೆಂಬ ಅಪಾದನೆಯನ್ನೂ ಕೂಡ ಮಾಡಿದ್ದಾರೆ. ಈ ಮೂಲಕ ಮಾನ್ಯ ಸದಸ್ಯರುಗಳ ಗಮನಕ್ಕೆ ಒಂದು ವಿಚಾರವನ್ನು ತರುವುದಕ್ಕೆ ಇಷ್ಟಪಡುತ್ತೇನೆ, 1969ನೇ ಸಾಲಿನಲ್ಲಿ ಅನೇಕ ಯೋಜನೆಗಳನ್ನು ಹಾಕಿಕೊಂಡಿದ್ದೇವೆ. ಇವತ್ತಿನ ದಿವಸ ಹಾಸ್ಟೆಲ್‌ನಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಮಕ್ಕಳ ವಿದ್ಯಾಮಟ್ಟ ಕಡಿಮೆಯಾಗುತ್ತಿದೆ. ಮತ್ತು ಪರ್‌ಸೆಂಟೇಜ್ ಆಫ್ ರಿಜಲ್ಟ್ಸ್ ಕಡಿಮೆಯಾಗುತ್ತಿದೆ. ಇವರ ವಿದ್ಯಾ ಮತ್ತು ಜಾಸ್ತಿಯಾಗಬೇಕು ಮತ್ತು ರಿಜಲ್ಟ್ಸ್ ಜಾಸ್ತಿಯಾಗಬೇಕೆನ್ನುವ ಕಾರಣದಿಂದ ಈಗ 8 ಹಾಸ್ಟೆಲ್‌ಗಳಲ್ಲಿ ಪಾರ್ಟ್‌ಟೈಮ್ ಟೀಚರ್‌ಗಳನ್ನು ಅಪಾಯಿಂಟ್ ಮಾಡಿ ಯಾವ ವಿಷಯಗಳಲ್ಲಿ

ವಿದ್ಯಾರ್ಥಿಗಳು ವೀಕ್ ಇರುತ್ತಾರೋ ಆ ವಿಷಯದಲ್ಲಿ ಪಾಠ ಹೇಳಿಕೊಡುವ ಏರ್ಪಾಡನ್ನು ಮಾಡಲಾಗಿದೆ. ಈಗ ಹಾಸ್ಟೆಲ್‌ಗಳಲ್ಲಿ ಮೆಟ್ರಿಕ್ಯುಲೇಷನ್ ಆದವರು ಸೂಪರಿಂಟೆಂಡೆಂಟ್ ಆಗಿದ್ದಾರೆ. ಇನ್ನು ಮುಂದೆ ಗ್ರಾಜುಯೆಟ್‌ಗಳನ್ನು ಅಂದರೆ ಬಿ.ಎ., ಬಿ.ಈಡಿ. ಟ್ರೈನಿಂಗ್ ಆದವರನ್ನು ನೇಮಕ ಮಾಡಬೇಕೆಂದು ಇದ್ದೇವೆ. ಇಂತಹವರನ್ನು ನೇಮಕ ಮಾಡಿದರೆ ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸ ಸಿಗುವುದಕ್ಕೆ ಅವಕಾಶವಾಗುತ್ತದೆಂದು ತಿಳಿದು ಈ ಯೋಜನೆಯನ್ನು 1969ನೇ ಸಾಲಿನಿಂದ ತರಲಾಗುತ್ತದೆಂದು ಸಭೆಯ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಡಾಕ್ಟರ್‌ಗಳಿಗೆ ಮತ್ತು ಇಂಜಿನಿಯರ್‌ಗಳಿಗೆ ಸಿಗುತ್ತಿರುವ ಸವಲತ್ತುಗಳನ್ನು ಲಾ.ಗ್ರಾಜುಯೇಟ್ಸ್‌ಗೂ ಕೊಡಬೇಕೆಂದು ಅನೇಕ ಮಾನ್ಯ ಸದಸ್ಯರುಗಲ ಅಭಿಪ್ರಾಯವಾಗಿತ್ತು. ಆದರ ಪ್ರಕಾರ ಮುಂದಿನ ವರ್ಷದಿಂದ ಲಾ-ಗ್ರಾಜುಯೇಟ್ಸ್‌ಗಳಿಗೆ ರಿಜಿಸ್ಟ್ರೇಷನ್ ಫೀಯನ್ನು ಪುಸ್ತಕಗಳಿಗೆ ಬೇಕಾಗುವ ಖರ್ಚನ್ನು ಸರ್ಕಾರದವರೇ ವಹಿಸಿಕೊಳ್ಳಬೇಕೆಂದು ವಿಚಾರ ಮಾಡಿದ್ದೇವೆ.

ಈ ತರಹ ಅನೇಕ ಯೋಜನೆಗಳನ್ನು ಮಾಡಬೇಕು ಎಂದು 1969-70ನೇ ಸಾಲಿನಲ್ಲಿ ಒಂದು ಪ್ರೋಗ್ರಾಮ್ ಮಾಡಿಕೊಂಡಿದ್ದೇವೆ. ಇದನ್ನು ಮುಂದಿನ ವರ್ಷದಿಂದ ಪ್ರಾರಂಭ ಮಾಡಲು ಪ್ರಯತ್ನ ಮಾಡುತ್ತಿದ್ದೇವೆ. ಎನ್ನುವ ವಿಷಯವನ್ನು ಈ ಸಭೆಯ ಗಮನಕ್ಕೆ ತರಲು ಇಚ್ಛಿಸುತ್ತೇನೆ.

ಅನೇಕ ಮಾನ್ಯ ಸದಸ್ಯರುಗಳು ನಮ್ಮ ಇಲಾಖೆ ಬಗ್ಗೆ ಕಟ್ ಮೋಷನ್ಸ್‌ಗಳನ್ನು ಇಲ್ಲಿ ಕೊಟ್ಟಿದ್ದಾರೆ. ಇದನ್ನು ಸ್ಥೂಲವಾಗಿ ನೋಡಿದರೆ ಇದರಲ್ಲಿ ಎರಡು ಮೂರು ಅಂಶಗಳು ಗೊತ್ತಾಗುತ್ತವೆ. ಅವರು ಹೇಳಿರತಕ್ಕ ವಿಷಯಗಳು ಎಂದರೆ ಕುಡಿಯುವ ನೀರಿನ ಬಾವಿಗಳನ್ನು ಪೂರೈಕೆ ಮಾಡುವುದು, ಮನೆಗಳನ್ನು ಕಟ್ಟಲಿಕ್ಕೆ ಸೈಟುಗಳನ್ನು ಒದಗಿಸಿ ಕೊಡುವುದು ಇತ್ಯಾದಿ ಇನ್ನೂ ಕೆಲವು ವಿಚಾರಗಳನ್ನು ಹೇಳಿದ್ದಾರೆ. ಎಲ್.ಡಿ. ವರ್ಕ್ಸ್ ಮೂಲಕ ಈಗ ಕುಡಿಯುವ ನೀರಿನ ಪೂರೈಕೆ ಮಾಡುತ್ತಿದ್ದಾರೆ. ಒಂದು ವೇಳೆ ಇದು ಸಾಲದೆ ಇದ್ದರೆ ನಮ್ಮ ಇಲಾಖೆ ಮೂಲಕ ಇಂತಹ ಪ್ರಸಂಗಗಳು ಬಂದಾಗ ಬಾವಿಗಳನ್ನು ಪೂರೈಕೆ ಮಾಡಿಕೊಳ್ಳಬಹುದು. ಇಂತಹ ಪ್ರಪೋಸಲ್‌ಗಳು ಕೆಲವು ಕಡೆ ಬಂದಿವೆ. ಅವನ್ನು ಸರಕಾರ ಪರಿಶೀಲನೆ ಮಾಡಿ ಅಂತಹ ಕಡೆಗಳಲ್ಲಿ ಕುಡಿಯುವ ನೀರಿನ ಬಾವಿಗಳನ್ನು ಪೂರೈಕೆ ಮಾಡಲು ಸಾಧ್ಯವಾಗುತ್ತದೆ.

ಶ್ರೀ ಸದಾಶಿವಪ್ಪ ಪಾಟೀಲ್ (ದೇವದುರ್ಗ):- ಹರಿಜನರ ಬಗ್ಗೆ ಕುಡಿಯುವ ನೀರಿನ ಬಾವಿಗಳನ್ನು ಮಾಡಿಸಿಕೊಡುತ್ತೇವೆಂದು ಮಂತ್ರಿಗಳು ಅಪ್ಪಣೆ ಕೊಡಿಸಿದರು. ಒಂದೊಂದು ಊರಿನಲ್ಲಿ ಹರಿಜನರು ಎರಡು ಬಗೆಯವರು ಇರುತ್ತಾರೆ. ಇಂತಹ ಕಡೆಗಳಲ್ಲಿ ಒಂದೇ ಬಾವಿ ಮಾಡಿಸಿಕೊಡುತ್ತೀರೋ ಇಲ್ಲವೇ ಎರಡು ವರ್ಗಗಳವರಿಗೂ ಬೇರೆ ಬೇರೆಯಾಗಿ ಬಾವಿಗಳನ್ನು ಮಾಡಿಸಿಕೊಡುತ್ತೀರೋ?

ಶ್ರೀಮತಿ ಬಸವರಾಜೇಶ್ವರಿ:- ತಮಗೆ ಇದರ ಬಗ್ಗೆ ಉತ್ತರವನ್ನು ಕೊನೆಯಲ್ಲಿ ಕೊಡುತ್ತೇನೆ. ನಮ್ಮ ರಾಜ್ಯದಲ್ಲಿ ಹರಿಜನರ ಅಭಿವೃದ್ಧಿಗಾಗಿ ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟು

ಎಂದು ಪ್ರತ್ಯೇಕವಾದ ಇಲಾಖೆಯನ್ನು ಏಕೆ ಇಟ್ಟುಕೊಂಡಿದ್ದಾರೆ ಎಂದರೆ ಇದರಲ್ಲಿ ಕಾನ್‌ಸ್ಟಿಟ್ಯೂಷನಲ್ ಸೇಫ್‌ಗಾರ್ಡ್ಸ್ ಏನಿವೆಯೋ ಅದರ ಸವಲತ್ತುಗಳು ಸಿಗುವುದಕ್ಕೋಸ್ಕರ ಕೆಲಸ ಮಾಡಿಕೊಂಡು ಇಲ್ಲಿಯವರೆಗೂ ಈ ಇಲಾಖೆಯನ್ನು ಉಳಿಸಿಕೊಂಡು ಬರುತ್ತಿದೆ. ಎಜುಕೇಷನ್ನಿನಲ್ಲಿ ಬ್ಯಾಕ್‌ವರ್ಡ್ ಆಗಿರುವ ಇಂತಹ ಜನಕ್ಕೆ ಅನುಕೂಲವಾಗುವ ಎಜುಕೇಷನಲ್ ಸ್ಕೀಂಗಳನ್ನು ಹಾಗೂ ಎಜುಕೇಷನಲ್ಲಿ ಬ್ಯಾಕ್‌ವರ್ಡ್ ಆಗಿರುವವರಿಗೆ ಸಹಾಯ ಮಾಡಲು ಮತ್ತು ಇವರ ಹೌಸಿಂಗ್ ಪ್ರಾಬ್ಲಂ ಬಗ್ಗೆ ಅನೇಕ ವಿಧವಾದ ಸ್ಕೀಂಗಳನ್ನು ಹಾಕಿಕೊಂಡು ಇವರನ್ನು ಸುಧಾರಿಸಬೇಕು ಎನ್ನುವ ದೃಷ್ಟಿಯಿಂದ ಇದನ್ನೂ ಮಾಡಲಾಗಿದೆ. ಇದರ ಬಗ್ಗೆ ಒಂದು ಕಮಿಟಿಯನ್ನು ನೇಮಕ ಮಾಡಬೇಕು ಮತ್ತು ಈ ಕಮಿಟಿಯವರು ಇವೊತ್ತು ಈ ಜನಾಂಗದ ಅಭಿವೃದ್ಧಿ ಯಾವ ರೀತಿಯಾಗುತ್ತಿದೆ. ಎನ್ನುವುದನ್ನು ಪರಿಶೀಲನೆ ಮಾಡಲು ಅನುಕೂಲವಾಗುತ್ತದೆ ಎಂದು ಹೇಳಿದರು. ಇದರ ಬಗ್ಗೆ ಕೆಲವು ಅಂಕಿ ಅಂಶಗಳನ್ನು ಕೊಟ್ಟರೆ ಮಾನ್ಯ ಸದಸ್ಯರಿಗೆ ಇಂತಹ ಕಮಿಟಿಯೇ ಬೇಕಾಗಿಲ್ಲ ಎಂದು ಅವರೇ ಹೇಳಬಹುದು. ಇದರ ವಿವರಗಳು ಹೀಗಿವೆ.

ಇದಕ್ಕಾಗಿ ಇಲ್ಲಿಯವರೆಗೂ ಈ ತರಹಾ ಅನೇಕ ಯೋಜನೆಗಳನ್ನು ನಾವು ಮಾಡುತ್ತಾ ಬಂದಿದ್ದೇವೆ. ಹಿಂದೆ ಇದೇ ಸದನದಲ್ಲಿ ಮಾನ್ಯ ಸದಸ್ಯರು ಒಂದು ಷಾರ್ಟ್ ನೋಟೀಸು ಪ್ರಶ್ನೆ ಕೇಳಿದ್ದರು. ಮತ್ತು ಇದರ ಬಗ್ಗೆ ಅರ್ಧ ಗಂಟೆ ಕಾಲದ ಚರ್ಚೆಯನ್ನು ಇಲ್ಲಿ ಮಾಡಿದರು, ಆಗ ಮೂರನೇ ಯೋಜನೆಯಲ್ಲಿ ಎಷ್ಟು ದುಡ್ಡನ್ನು ಲ್ಯಾಪ್ಸ್ ಮಾಡಿದ್ದಾರೆ ಎನ್ನುವುದನ್ನು ಸರಕಾರದ ಗಮನಕ್ಕೆ ತಂದಾಗ ಇದರ ಬಗ್ಗೆ ವಿವರಗಳನ್ನೆಲ್ಲಾ ಕೊಟ್ಟಿದ್ದೇನೆ. ಮತ್ತೆ ಇದೇ ವಿಚಾರಗಳನ್ನು ಪುನಃ ಇಲ್ಲಿ ಹೇಳಲು ಇಷ್ಟಪಡುವುದಿಲ್ಲ. ಬಡ್ಜೆಟ್ಟಿನಲ್ಲಿ 1967-68ನೇ ಸಾಲಿನಲ್ಲಿ ಒದಗಿಸಿರುವ ಹಣವೇ ಕಡಿಮೆ. ಉಳಿದುದೆಲ್ಲವನ್ನೂ ಪೂರ್ತಿಯಾಗಿ ಖರ್ಚು ಮಾಡಿದ್ದೇವೆ. ಸುಮಾರು ಮೂರು ಲಕ್ಷ ಉಳಿದಿದೆ ಎಂದು ಸರಕಾರದ ಗಮನಕ್ಕೆ ಬಂದಾಗ ಅನೇಕ ಸ್ಕೀಂಗಳನ್ನು ಮಾಡಿ ಅವನ್ನು ತೆಗೆದುಕೊಳ್ಳಬೇಕೆಂದು ಆ ವರ್ಷದ ಕೊನೆಯಲ್ಲೇ ಕೆಲಸ ಮಾಡಿ ಒಂದು ನಯಾಪೈಸೆ ಕೂಡ ಉಳಿಯದಂತೆ ಯೋಜನೆಗಳನ್ನು ಹಾಕಿಕೊಂಡಿದ್ದೇವೆ. ಇದರ ಬಗ್ಗೆ ಮಾನ್ಯ ಮಂತ್ರಿಗಳು ಈ ಸಭೆಯಲ್ಲಿ ಏನು ಭರವಸೆ ಕೊಟ್ಟಿದ್ದರೋ ಆ ಪ್ರಕಾರ ನಡೆದುಕೊಂಡಿದ್ದಾರೆ. ಅದರಂತೆ ಕೆಲಸವಾಗಬೇಕಾದರೆ ಅಧಿಕಾರಿಗಳೂ ಕೂಡ ಬಹಳ ಸಹಾನುಭೂತಿಯಿಂದ ಮತ್ತು ಯಶಸ್ವಿಯಾಗಿ ಮಾಡಿಕೊಂಡು ಯಾವ ದುಡ್ಡೂ ಲ್ಯಾಪ್ಸ್ ಆಗದ ರೀತಿಯಲ್ಲಿ ಖರ್ಚು ಮಾಡಿದ್ದಾರೆ.

ಶ್ರೀಮಾನ್ ಮುನಿಯಪ್ಪನವರು ಹಿಂದೆ ಇಲ್ಲಿದ್ದ ಡೈರೆಕ್ಟರ್‌ರವರು ಬಹಳ ಚೆನ್ನಾಗಿ ಕೆಲ ಮಾಡುತ್ತಿದ್ದರು. ಆದರೆ ಈಗ ಇರುವ ಡೈರೆಕ್ಟರು ಒಂದು ರೀತಿಯ ಉದಾಸೀನದಿಂದ ಕೆಲಸ ಮಾಡುತ್ತಿದ್ದಾರೆ ಎಂದು ಹೇಳಿದರು. ಇದು ಸರಿಯಲ್ಲ ಇದಕ್ಕೆ ಬೇಕಾದರೆ ತಮಗೆ ಅಂಕೆ ಸಂಖ್ಯೆಗಳನ್ನು ಕೊಡಬಹುದು. ಆದರೆ ಈಗ ವೇಳೆ ಬಹು ಕಡಿಮೆ ಇರುವುದರಿಂದ ಇದನ್ನು ಕೊಡುವ ಗೋಜಿಗೆ ಹೋಗುವುದಿಲ್ಲ. ನಮ್ಮ ಇಲಾಖೆಯಲ್ಲಿ ಬಹಳ ಒಳ್ಳೆಯ ರೀತಿಯಿಂದ ಕೊಟ್ಟಿರುವ ದುಡ್ಡನ್ನು ಪೂರ್ತಿಯಾಗಿ ಖರ್ಚುಮಾಡಿದ್ದಾರೆ. ಎಂದು ಈ ಸಭೆಯ ಗಮನಕ್ಕೆ ತರಲು ಇಚ್ಛಿಸುತ್ತೇನೆ.

ಇನ್ನು ಮಾನ್ಯ ಸದಸ್ಯರು ಅನೇಕರು ಇಲ್ಲಿರುವ ಡಿಪಾರ್ಟುಮೆಂಟಿನಲ್ಲಿ ಇದುವರೆಗೆ ಏನೂ ಕೆಲಸ ಮಾಡಿಲ್ಲ ಮತ್ತು ಏನೇನು ಅಚೀವ್ ಮಾಡಿದ್ದೀರಿ ಇದರ ಅಂಕೆ ಸಂಖ್ಯೆಗಳೇನೂ ಇಲ್ಲ ಮತ್ತು ಎಷ್ಟು ಸ್ಕಾಲರ್‌ಷಿಪ್ ಕೊಟ್ಟಿದ್ದಾರೆ, ಎಷ್ಟು ಕುಡಿಯುವ ನೀರಿನ ಬಾವಿಗಳನ್ನು ಮಾಡಲು ಎಷ್ಟು ಖರ್ಚು ಮಾಡಿದ್ದಾರೆ. ಮತ್ತು ಎಷ್ಟು ಹಾಸ್ಟೆಲ್‌ಗಳನ್ನು ಓಪನ್ ಮಾಡಿದ್ದೀರಿ ಎನ್ನುವ ಕೆಲವು ಆಪಾದನೆಗಳನ್ನು ಮಾಡಿದ್ದಾರೆ. ನಾನಾದರೂ ಇದರ ಬಗ್ಗೆ ಕೆಲವು ಅಂಕೆ ಸಂಖ್ಯೆಗಳನ್ನು ಕೊಟ್ಟರೆ ಇವರಿಗೆಲ್ಲಾ ಸಮಾಧಾನವಾಗುತ್ತದೆ. ಯಾವ ಯಾವ ಕೆಲಸಗಳಿಗಾಗಿ ಎಷ್ಟು ಖರ್ಚು ಮಾಡಿದ್ದೇವೆ ಎನ್ನುವ ವಿವರಗಳನ್ನು ಮಾನ್ಯ ಸಭೆಯ ಗಮನಕ್ಕೆ ತರಲು ಇಚ್ಛಿಸುತ್ತೇನೆ.

| | | |
|---|---|---|
| ಎರಡನೇ ಪ್ಲಾಪಿನಲ್ಲಿ | - | 12 ಲಕ್ಷ ಖರ್ಚಾಗಿದೆ. |
| ಮೂರನೇ ಪ್ಲಾನಿನಲ್ಲಿ | - | 1,60,30,528.39 |
| 1966-67 | - | 1,11,983.08 |
| 1967-68 ರಲ್ಲಿ | - | 4,53,889 |
| 1968-69 ರಲ್ಲಿ | - | ಇಲ್ಲಿಯವರೆಗೆ 2,79,482 |
| ಪ್ರೈವೇಟು ಹಾಸ್ಟಲ್‌ಗಳು: | - | ಗ್ರಾಂಟ್ ಇನ್‌ಏಡ್ ಹಾಸ್ಟೆಲ್‌ಗಳಿಗೆ |
| ಎರಡನೇ ಪ್ಲಾನ್ ಪೀರಿಯಡ್‌ನಲ್ಲಿ | - | ಸುಮಾರು 5 ಲಕ್ಷ ರೂಪಾಯಿಗಳು |
| ಮೂರನೇ ಪ್ಲಾನಿನಲ್ಲಿ | - | 37,50,000 ರೂಪಾಯಿಗಳು |
| 1966-67 ರಲ್ಲಿ | - | 1030,000 ರೂಪಾಯಿಗಳು |
| 1967-68 ರಲ್ಲಿ | - | 12,66,500 ರೂಪಾಯಿಗಳು |
| 1968-69 ರಲ್ಲಿ | - | 13,45,000 ರೂಪಾಯಿಗಳು |

ಪ್ರೀಮೆಟ್ರಿಕ್ ಸ್ಕಾಲರುಷಿಪ್‌ಗಳು:

| | | |
|---|---|---|
| ಮೂರನೇ ಪ್ಲಾನಿನಲ್ಲಿ | - | 4,572 ವಿದ್ಯಾರ್ಥಿಗಳಿಗೆ |
| 1966-67 ರಲ್ಲಿ | - | 7,102 ವಿದ್ಯಾರ್ಥಿಗಳಿಗೆ |
| 1967-68ರಲ್ಲಿ | - | 10,251 ವಿದ್ಯಾರ್ಥಿಗಳಿಗೆ |

ಹಣ ಕೊಟ್ಟಿರುವುದು:

| | | |
|---|---|---|
| ಮೂರನೇ ಪ್ಲಾನಿನಲ್ಲಿ | - | 3,42,128 |
| 1966-67 | - | 2,68,767 |
| 1967-68 ರಲ್ಲಿ | - | 3,68,908 |
| 1968-69 ರಲ್ಲಿ | - | 4,30,000 |

ಕೇಂದ್ರ ಸರಕಾರದವರು ಪೋಸ್ಟ್ ಮೆಟ್ರಿಕ್ ಸ್ಕಾಲರುಷಿಪ್‌ಗಳನ್ನು-ರಿಜರ್ವ್‌ಡ್ಜ-ಜನಾಂಗಗಳಿಗೆ ಕೊಡುತ್ತಾ ಇದ್ದಾರೆ. ಇದನ್ನು ರಾಜ್ಯ ಸರಕಾರದವರು ಹಂಚಿಕೆ ಮಾಡುತ್ತಿದ್ದೇವೆ.

ಅವುಗಳ ವಿವರ ಹೀಗಿದೆ:

| | No. of Students: | Amount spent: Rs. |
|---|---|---|
| Second Plan | 3,653 | 17,17,159 |
| Third Plan | 1,5099 | 76,26,434 |
| 1966-67 | 4,016 | 21,76,168 |
| 1967-68 | 4,808 | 27,39,169 |

1968-69ನೇ ಸಾಲಿಗೆ ಈಗಾಗಲೇ 6,500 ಮಕ್ಕಳಿಗೆ ಪೋಸ್ಟ್ ಮೆಟ್ರಿಕ್ ಸ್ಕಾಲರ್‌ಷಿಪ್‌ಗಳಿಗಾಗಿ 33, 94, 151 ರೂಪಾಯಿಗಳನ್ನು ವಿತರಣೆ ಮಾಡಿದ್ದಾಗಿದೆ ಎನ್ನುವುದನ್ನು ಈ ಸಭೆಯ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಇದನ್ನೆಲ್ಲಾ ಏತಕ್ಕೆ ಹೇಳುತ್ತೇನೆ ಎಂದರೆ ಮಾನ್ಯ ಸದಸ್ಯರುಗಳು ಕೆಲವರು ಏನೂ ಮಾಡಿಲ್ಲ ಎಂದು ಹೇಳಿದ್ದರಿಂದ ಇದನ್ನು ಹೇಳಬೇಕಾಯಿತು.

ಇದೇ ರೀತಿ No. of Government Hostels for boys and Girls opened under Social Welfare epartment ಎನ್ನುವ ಬಗ್ಗೆ ವಿವರಗಳನ್ನು ಕೊಡುತ್ತೇನೆ:

| | Hostels for: | |
|---|---|---|
| | Boys: | Girls: |
| Second Plan | 95 | 37 |
| Third Plan | 98 | 46 |
| 1966-67 | 6 | 18 |
| 1967-68 | 24 | 18 |
| 1968-69 | 10 | 5 |

| | Economic upliftment: |
|---|---|
| Second Plan | 24,54,516 |
| Third Plan | 47,39,000 |
| 1966-67 | 3,98,300 |
| 1967-68 | 3,21,200 |
| 1968-69 | about 4 lakhs. |

ಈ ರೀತಿ ಖರ್ಚು ಮಾಡಲಾಗಿದೆ. ಈ ಅಂಕಿಅಂಶಗಳ ಪ್ರಕಾರ ಮಾನ್ಯ ಸದಸ್ಯರುಗಳು ಏನೂ ಕೆಲಸವಾಗಿಲ್ಲ ಎಂದು ಹೇಳಿರುವುದು ಸರಿಯಲ್ಲ ಎಂಬುದು ಗೊತ್ತಾಗುತ್ತದೆ. ಇವರ ಏಳಿಗೆಗಾಗಿ ಪ್ರತಿವರ್ಷ ಯಾವ ರೀತಿ ಹಣವನ್ನು ಖರ್ಚು ಮಾಡಲಾಗುತ್ತಿದೆ. ಎಂಬ ಬಗ್ಗೆ ಈ ಅಂಕಿಅಂಶಗಳನ್ನು ಮಾನ್ಯ ಸಭೆಯ ಗಮನಕ್ಕೆ ತಂದಿದ್ದೇನೆ. ಇದೇ ರೀತಿ ಇನ್ನೊಂದು ವಿಷಯವನ್ನು ಮಾನ್ಯ ಸಭೆಯ ಗಮನಕ್ಕೆ ತರುವುದಕ್ಕೆ ಇಚ್ಛಿಸುತ್ತೇನೆ. ಏನೆಂದರೆ ಡಬ್ಲ್ಯು.ಎಚ್.ಓ. ಸಂಸ್ಥೆಯವರು ನಮ್ಮ ರಾಜ್ಯಕ್ಕೆ ಬಂದಿದ್ದಾಗ ನಮ್ಮ ಅಧಿಕಾರಿಗಳು ಅವರ ಜೊತೆಯಲ್ಲಿ ಸೇರಿಕೊಂಡು ಸಮಾಲೋಚನೆ ನಡೆಸಿದರು. ನಾವು ಇವತ್ತಿನ ದಿವಸ ಗ್ರಾಂಟ್-ಇನ್-ಯೇಡ್ ಹಾಸ್ಟಲ್‌ನಲ್ಲಿರುವ ವಿದ್ಯಾರ್ಥಿಗಳಿಗೆ ಕೊಡುತ್ತಿರುವ 25 ರೂಪಾಯಿಗಳಿಗೆ ಒಳ್ಳೆಯ ಊಟ ಸಿಗುವುದಿಲ್ಲ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆ. ಮತ್ತು ಮೇಲಿಂದ ಮೇಲೆ ನಮ್ಮ ರಾಜ್ಯ ಅಭಾವಕ್ಕೆ ತುತ್ತಾಗುತ್ತಿರುವುದರಿಂದ, ಡಬ್ಲ್ಯು.ಎಚ್.ಓ. ಅವರ ನೆರವು ಪಡೆಯಬೇಕೆಂದು ಅಭಿಪ್ರಾಯ ಪಟ್ಟಿದ್ದೇವೆ. ಅದಕ್ಕಾಗಿ ಒಂದು ಸ್ಕೀಮನ್ನು ತಯಾರು ಮಾಡಿ ನಮ್ಮ ಮಂತ್ರಿಗಳು ಕೇಂದ್ರಸರ್ಕಾರಕ್ಕೆ ಕಳಿಸಿದ್ದಾರೆ. ಅದರ ಜೊತೆಗೆ ವಿದ್ಯಾಸಂಸ್ಥೆಗಳಲ್ಲಿ ಫೀಡಿಂಗ್ ಪ್ರೋಗ್ರಾಮ್‌ನ್ನು ಜಾರಿಗೆ ತರುವ ವಿಚಾರದಲ್ಲಿ ಒಂದು ಯೋಜನೆಯನ್ನು ತಯಾರು ಮಾಡಿ ನಮ್ಮ ಮಂತ್ರಿಗಳು ಕೇಂದ್ರಸರ್ಕಾರಕ್ಕೆ ಕಳಿಸಿಕೊಟ್ಟಿದ್ದಾರೆ. ಇದು ಒಂದು ಸಂತೋಷದ ಸಂಗತಿಯಾಗಿದೆ ಎಂಬುದನ್ನು ಮಾನ್ಯ ಸದಸ್ಯರುಗಳ ಗಮನಕ್ಕೆ ತರುವುದಕ್ಕೆ ಇಚ್ಛಿಸುತ್ತೇನೆ. ಮಾನ್ಯ ಸದಸ್ಯರುಗಳಲ್ಲಿ ಕೆಲವರು ಟೀಕೆ ಮಾಡಿದ್ದಾರೆ, ಮತ್ತೆ ಕೆಲವರು ಸಲಹೆಗಳನ್ನು ಕೊಟ್ಟಿದ್ದಾರೆ. ಪ್ರತಿಯೊಂದಕ್ಕೂ ಈಗ ಉತ್ತರ ಕೊಡುವುದು ಅವಶ್ಯಕವೆಂದು ಕಾಣುವುದಿಲ್ಲ. ಆದರೂ ಕೂಡ ಸ್ಥೂಲವಾಗಿ ಹೇಳುವುದಾದರೆ, ಮಾನ್ಯ ಸದಸ್ಯರಾದಂಥ ಶ್ರೀ ಜಯಪ್ರಕಾಶ್‌ನಾರಾಯಣ್ ಅವರು ಯೂನಿಫಾರಮ್ ಗ್ರಾಂಟ್-ಇನ್-ಯೇಡ್ ಆಗಬೇಕೆಂದು ಹೇಳಿದರು. ಈಗ ಕರ್ನಾಟಕದ ಮಕ್ಕಳಿಗೆ, ಹೈದರಾಬಾದ್‌ಗೆ ಕರ್ನಾಟಕ ಮತ್ತು ಹಳೆಯ ಮೈಸೂರಿನ ಮಕ್ಕಳಿಗೆ ಕೊಡುತ್ತಿರುವ ಸಹಾಯಧನ ಬೇರೆ ಬೇರೆ ರೂಪದಲ್ಲಿ ಇದೆ. ಇದನ್ನೆಲ್ಲಾ ಹೋಗಲಾಡಿಸಲು ಮತ್ತು ಈ ಒಂದು ತಾರತಮ್ಯವನ್ನು ತಪ್ಪಿಸಲು ಮುಂದಿನ ವರ್ಷದಿಂದ ಇಡೀ ರಾಜ್ಯಕ್ಕೇ ಅನ್ವಯವಾಗುವಂತೆ ಯೂನಿಫಾರಂ ಗ್ರಾಂಟ್-ಇನ್-ಯೇಡ್‌ನ್ನು ಜಾರಿಗೆ ತರಬೇಕೆಂದಿದ್ದೇವೆ. ಇದರಿಂದ ಮಾನ್ಯ ಸದಸ್ಯರುಗಳಿಗೆ ಸಂತೋಷವಾಗಬಹುದು. ಇದೇ ರೀತಿ ಯೂನಿಫಾರಮ್ ಗ್ರಾಂಟ್-ಇನ್-ಯೇಡ್ ಕೋಡನ್ನು ಕೂಡ ಮಾಡಬೇಕೆಂದು ಭಿಪ್ರಾಯಪಟ್ಟಿದ್ದೇವೆ. ಈ ಮೂಲಕ ರಾಜ್ಯದ ಎಲ್ಲಾ ಮಕ್ಕಳಿಗೂ ಕೂಡ ಒಂದೇ ರೀತಿಯ ಸಹಾಯ ಮಾಡಬೇಕೆಂದು ಸರ್ಕಾರದ ಉದ್ದೇಶವಾಗಿದೆ. ಕೆಲವು ಮಾನ್ಯ ಸದಸ್ಯರುಗಳು ಮಕ್ಕಳಿಗೆ ಸಹಾಯ ಧನ ಸರಿಯಾಗಿ ಸಿಗುತ್ತಿಲ್ಲವೆಂದು ಹೇಳಿದ್ದಾರೆ. ಸರ್ಕಾರದ ಉದ್ದೇಶವಾದರೂ ಕೂಡ, ಮಕ್ಕಳಿಗೆ ಹಾಸ್ಟಲ್ ಫೆಸಿಲಿಟೀಸ್ ಸಿಗಬೇಕು ಇಲ್ಲವೇ ಪ್ರೀ ಮೆಟ್ರಿಕ್ ಸ್ಕಾಲರ್‌ಷಿಪ್ ಕೊಡಬೇಕೆಂಬುದು ಇದೆ. ಈ ಎರಡು ಸ್ಕೀಮ್‌ಗಳಲ್ಲಿ ಯಾವುದಾದರು ಒಂದರಲ್ಲಿ ಈ ಮಕ್ಕಳನ್ನು ಅಳವಡಿಸಬೇಕೆಂದು ಯೋಚನೆ ಮಾಡಿ ಆ ಬಗ್ಗೆ ಒಂದು ಯೋಜನೆಯನ್ನು ತಯಾರು ಮಾಡಿ ಅದರಂತೆ ಕೆಲಸ ಮಾಡುತ್ತಿದ್ದೇವೆನ್ನುವ ವಿಷಯವನ್ನು ಈ ಸಭೆಯ ಗಮನಕ್ಕೆ ತರುವುದಕ್ಕೆ ಇಚ್ಛಿಸುತ್ತೇನೆ.

ಇನ್ನು ಟಿಂಬರ್ ಕೊಡುವ ವಿಚಾರದಲ್ಲಿ ಮಿಸ್-ಅಪ್ರೋಪ್ರಿಯೇಷನ್ ಆಗಿದೆ ಎಂದು ಮಾನ್ಯ ಲೋಕಯ್ಯನಾಯಕ್ ಅವರು ಹೇಳಿದ್ದಾರೆ. ಬಹುಶಃ ಅವರಿಗೂ ಗೊತ್ತಿರಬಹುದು, ಮೊನ್ನೆ ತಾನೆ ನಮ್ಮ ಮಂತ್ರಿಗಳು ತಮ್ಮ ಛೇಂಬರ್‌ನಲ್ಲಿ ಒಂದು ಮೀಟಿಂಗ್ ಈ ಬಗ್ಗೆ ನಡೆಸಿದರು. ಮಾನ್ಯ ಸದಸ್ಯರುಗಳನೇಕರು ಈ ವಿಷಯದಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇನ್ನೊಂದು ಮೀಟಿಂಗ್ ಕರೆದು ಇದರ ಅಂತಿಮ ತೀರ್ಮಾನ ತೆಗೆದುಕೊಳ್ಳುವುದಾಗಿ ನಮ್ಮ ಮಂತ್ರಿಗಳು ಮಾನ್ಯ ಸದಸ್ಯರುಗಳಿಗೆ ಭರವಸೆಯನ್ನು ಕೊಟ್ಟಿದ್ದಾರೆ. ಟಿಂಬರ್ ಕೊಡುವ ವಿಚಾರದಲ್ಲಿ ಸ್ವಲ್ಪ ಅನಾನುಕೂಲತೆಗಳು ಇದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆ. ಸರ್ಕಾರದವರು ಈ ವಿಚಾರದಲ್ಲಿ ಏನು ಕ್ರಮ ತೆಗೆದುಕೊಂಡಿದ್ದಾರೆಂದು ಕೆಲರು ಸದಸ್ಯರುಗಳು ಕೇಳಿದರು. ಈಗ ಎಲ್ಲೆಲ್ಲಿ ದುರುಪಯೋಗವಾಗಿದೆ ಎಂದು ಸರ್ಕಾರದ ಗಮನಕ್ಕೆ ಬಂದಿದೆಯೋ ಅಲ್ಲೆಲ್ಲಾ ತನಿಖೆಯಾಗುತ್ತಿದೆಯೆಂದು ಹೇಳುವುದಕ್ಕೆ ಇಚ್ಛಿಪಡುತ್ತೇನೆ. ಮಾನ್ಯ ಜಯಪ್ರಕಾಶ್‌ನಾರಾಯಣ್ ಅವರು ಎಂ.ಸಿ.ಆರ್.ಸಿ. ಸ್ಕೀಮ್ ಮತ್ತು ಲ್ಯಾಂಡ್ ರಿಕ್ಲಮೇಷನ್ ಸ್ಕೀಮ್‌ಗಳಿಗೆ ಕೊಡುತ್ತಿರುವ ಹಣ ಸಾಲುವುದಿಲ್ಲವೆಂದು ಹೇಳಿದರು. ರಿಕ್ಲಮೇಷನ್ ಕೆಲಸಕ್ಕಾಗಿ ಇಟ್ಟಿರುವ ಹಣವನ್ನು ಖರ್ಚು ಮಾಡಲು ಈಗಾಗಲೇ ವ್ಯವಸಾಯ ಇಲಾಖೆಯವರು ಕೆಲವು ಕಾರ್ಯ ಕ್ರಮವನ್ನು ಹಾಕಿಕೊಂಡಿದ್ದಾರೆ. ಈ ರೀತಿಯಲ್ಲಿ ಎಲ್ಲಾ ಕೆಲಸಗಳನ್ನು ಮುಂದುವರಿಸಿಕೊಂಡು ಹೋಗುತ್ತಿದ್ದೇವೆ ಎನ್ನುವ ವಿಷಯವನ್ನು ಮಾನ್ಯ ಸದಸ್ಯರುಗಳಿಗೆ ಹೇಳುವುದಕ್ಕೆ ಇಷ್ಟಪಡುತ್ತೇನೆ. ಇನ್ನೂ ಅನೇಕ ಮಾನ್ಯ ಸದಸ್ಯರು ಬೋವಿ ಜನಾಂಗವನ್ನು ಷೆಡ್ಯೂಲ್ ಕ್ಯಾಸ್ಟ್ ಪಟ್ಟಿಯಲ್ಲಿ ಸೇರಿಸುವ ಬಗ್ಗೆ ಹೇಳಿದ್ದಾರೆ. ಮೊನ್ನೆ ತಾನೇ ಕೇಂದ್ರ ಸರ್ಕಾರದ ಜಾಯಿಂಟ್ ಸೆಲೆಕ್ಟ್ ಕಮೀಟಿಯವರು ಈ ವಿಚಾರವಾಗಿ ನಮ್ಮ ರಾಜ್ಯಕ್ಕೆ ಬಂದಿದ್ದರು. ಅವರ ಮುಂದೆ ಅನೇಕ ಮಾನ್ಯ ಸದಸ್ಯರುಗಳು ತಮ್ಮ ತಮ್ಮ ಅಭಿಪ್ರಾಯಗಳನ್ನು ಇಟ್ಟಿದ್ದಾರೆ. ಸರ್ಕಾರದವರು ಕೂಡ ತಮ್ಮ ಅಭಿಪ್ರಾಯವನ್ನು ಅವರಿಗೆ ತಿಳಿಸಿದ್ದಾರೆ. ಮುಂದೆ ಅವರು ಆ ಬಗ್ಗೆ ತೀರ್ಮಾನ ಕೈಗೊಳ್ಳುತ್ತಾರೆ. ಇದನ್ನು ಕೇಂದ್ರ ಸರ್ಕಾರದವರು ತೀರ್ಮಾನ ಮಾಡಬೇಕೇ ವಿನಃ ನಾವಲ್ಲ, ಎನ್ನುವ ವಿಚಾರವನ್ನು ಮಾತ್ರ ಈ ಸಂದರ್ಭದಲ್ಲಿ ಹೇಳುತ್ತೇನೆ. ಫ್ರೀ ಮೆಟ್ರಿಕ್ ಸ್ಕಾಲರ್‌ಷಿಪ್ ಕಾಲಕ್ಕೆ ಸರಿಯಾಗಿ ಸಿಗುತ್ತಿಲ್ಲವೆಂದು ಕೆಲವು ಮಾನ್ಯ ಸದಸ್ಯರುಗಳು ಪ್ರಸ್ತಾಪ ಮಾಡಿದ್ದಾರೆ. ಏಪ್ರಿಲ್ ತಿಂಗಳಲ್ಲಿ ಸಿಗುತ್ತಿರುವುದರಿಂದ ಮಕ್ಕಳಿಗೆ ಬಹಳ ತೊಂದರೆಯಾಗುತ್ತಿದೆ ಎಂದೂ ಕೂಡ ಹೇಳಿದ್ದಾರೆ. ಇದರ ಬಗ್ಗೆ ಅಪ್ಲಿಕೇಷನ್‌ಗಳನ್ನು ಬಿಲ್ಡ್ ಆಫ್ ಮಾಡುವವರು ಆಯಾ ಶಾಲೆಗಳ ಮುಖ್ಯ ಉಪಾಧ್ಯಾಯರುಗಳು. ಅವರು ಕಾಲಕ್ಕೆ ಸರಿಯಾಗಿ ಅಪ್ಲಿಕೇಷನ್‌ಗಳನ್ನು ಬಿಲ್ಡ್ ಆಫ್ ಮಾಡಿ ಕಳಿಸದೇ ಇರುವುದರಿಂದ ಈ ರೀತಿ ಸ್ವಲ್ಪ ನಿಧಾನವಾಗುತ್ತಿದೆ. ಈಗಾಗಲೇ ವಿದ್ಯಾ ಇಲಾಖೆಯ ಕಾರ್ಯದರ್ಶಿಗಳೊಡನೆ ಚರ್ಚೆ ಮಾಡಿದ್ದೇವೆ. ಮತ್ತು ಮುಂದಿನ ವರ್ಷದಿಂದ ಆಯಾ ಶಾಲೆಗಳ ಮುಖ್ಯ ಉಪಾಧ್ಯಾಯರುಗಳು ಸ್ಟ್ರಿಕ್ಟ್ ಆಗಿ ಶಾಲೆ ಪ್ರಾರಂಭವಾದ ಒಂದು ತಿಂಗಳೊಳಗೆ ಅಪ್ಲಿಕೇಷನ್‌ಗಳನ್ನು ಬಿಲ್ಡ್ ಅಪ್ ಮಾಡಿ ಕಳಿಸುವಂತೆ ಒಂದು ಸರ್ಕ್ಯುಲರ್ ಅನ್ನು ಕಳಿಸಬೇಕೆಂದು ಮಾಡಿದ್ದೇವೆ. ಇದರಿಂದ ವರ್ಷದ ಪ್ರಾರಂಭದಲ್ಲಿಯೇ ಮಕ್ಕಳಿಗೆ ಹಣ ಸಿಗುವುದಕ್ಕೆ ಅವಕಾಶವಾಗುತ್ತದೆ. ಈ ಬಗ್ಗೆ ಈಗಾಗಲೇ ಸಾಕಷ್ಟು ವಿಚಾರಮಾಡಿದ್ದೇವೆ.

ಇನ್ನು ಹೊಸದಾಗಿ ರಾಜ್ಯಪಾಲರ ಭಾಷಣದಲ್ಲಿ ಅನೇಕ ಕೆಲಸಗಳನ್ನು ಹಿಂದುಳಿದವರ ಬಗ್ಗೆ ಮಾಡಿಕೊಂಡು ಬಂದಿದ್ದೇವೆ. ಮಾನ್ಯ ಸದಸ್ಯರುಗಳನೇಕರು ಅಭಿಪ್ರಾಯಪಟ್ಟಂತೆ ಸೋಷಿಯಲ್ ವೆಲ್‌ಫೇರ್ ಬೋರ್ಡಿನವರು ಹಿಂದುಳಿದ ಜನಾಂಗದವರ ಕಲ್ಯಾಣಕ್ಕಾಗಿ ಅನೇಕ ಸ್ಕೀಮ್‌ಗಳನ್ನು ಹಾಕಿಕೊಂಡಿದ್ದಾರೆ. ಉದಾಹರಣೆಗಾಗಿ ಹೇಳುವುದಾದರೆ ಕುರುಡರು, ಕುಂಟರು, ಮೆಂಟಲಿ ಹ್ಯಾಂಡಿಕ್ಯಾಪ್‌ಡ್, ಅನಾಥ ಮಹಿಳೆಯರು ಮುಂತಾದವರ ಕಲ್ಯಾಣವಾಗುವುದು ಅವಶ್ಯಕವಿದೆ. ಸಮಾಜದಲ್ಲಿ ಈ ರೀತಿಯಾಗಿ ಬದಲಾವಣೆಗಳಾಗುತ್ತಿರುವ ಸಂದರ್ಭದಲ್ಲಿ ಇವರ ಕಲ್ಯಾಣವನ್ನು ಸರ್ಕಾರ ವಹಿಸಿಕೊಳ್ಳತಕ್ಕದ್ದು ಅತ್ಯಾವಶ್ಯಕವೆಂದು ತಿಳಿದುಕೊಂಡಿದ್ದೇವೆ. ಕೆಲವು ಖಾಸಗಿ ಸಂಸ್ಥೆಗಳವರು ಮಾಡಿದ್ದಾರೆ, ಸರ್ಕಾರದವರೂ ಕೂಡ ಪ್ರಯತ್ನ ಮಾಡಿದ್ದಾರೆ. ಇನ್ನು ಮುಂದೆ ಹೆಚ್ಚಾಗಿ ಖಾಸಗಿ ಜನರು ಮುಂದೆ ಬಂದು ಸ್ಪೆಷಲೈಸ್ಡ್ ಸರ್ವೀಸ್ ಏನಿದೆ ಅದನ್ನು ಪ್ರಾರಂಭ ಮಾಡಿದರೆ ಅದಕ್ಕೆ ಸರ್ಕಾರ ಸಹಾಯ ಮಾಡುವುದಕ್ಕೆ ಏನೂ ತೊಂದರೆಯಾಗುವುದಿಲ್ಲ. ನಾನು ಅಧ್ಯಕ್ಷರ ಮೂಲಕ ಖಾಸಗಿಯವರನ್ನು ಕೇಳಿಕೊಳ್ಳುವುದೇನೆಂದರೆ ಅವರ ಮನಸ್ಸು ಈ ಕಡೆಗೆ ಹರಿಯಬೇಕು, ಅವರು ಈ ಕಡೆಗೆ ದೃಷ್ಟಿ ಇಟ್ಟು ಸ್ಪೆಷಲೈಸ್ಡ್ ಸ್ಕೀಮುಗಳನ್ನು ಪ್ರಾರಂಭ ಮಾಡಬೇಕೆಂದು ಹೇಳುತ್ತೇನೆ.

ಅಸ್ಪೃಶ್ಯತಾ ನಿವಾರಣೆ ಬಗ್ಗೆ ಮಾನ್ಯ ಸದಸ್ಯರನೇಕರು ಮಾತನಾಡಿದ್ದಾರೆ. ಇದು ಈ ಹೊತ್ತಿನ ವಿಷಯವಲ್ಲ ಎನ್ನುವುದು ಎಲ್ಲರಿಗೂ ಗೊತ್ತಿದೆ. ಅನೇಕ ವರ್ಷಗಳಿಂದ ಪರಂಪರೆಯಾಗಿ ಬಂದಿರತಕ್ಕ ವಿಚಾರ, ಇದನ್ನು ಯಾವ ರೀತಿ ನಿರ್ಮೂಲ ಮಾಡಬೇಕು, ಏನು ಕ್ರಮಗಳನ್ನು ತೆಗೆದುಕೊಳ್ಳಬೇಕು ಎಂದು ಸರ್ಕಾರ ವಿಚಾರ ಮಾಡುತ್ತಿದೆ. ಕೆಲವು ಹಾಸ್ಟೆಲುಗಳು ಈ ಹೊತ್ತಿನ ದಿವಸ ನಾನ್ ಡಿನಾಮಿನೇಷನಲ್ ಹಾಸ್ಟಲ್ ಎಂದು ಮಾಡಿ ಅದರಲ್ಲಿ ಶೇಕಡ 25 ರಷ್ಟು ಬೇರೆ ಹುಡುಗರು ಇರುವುದಕ್ಕ ಅವಕಾಶ ಮಾಡಿದೆ. ಕಾಲೇಜು ಮಟ್ಟಕ್ಕೆ ಹೋದಾಗ ಆ ಮಕ್ಕಳಿಗೆ ಅಷ್ಟೊಂದು ಅಸ್ಪೃಶ್ಯತೆಯ ವಿಚಾರ ಅವರ ಮನಸ್ಸಿನಲ್ಲಿ ಇರಬಾರದೆಂದು. ಪೋಸ್ಟ್ ಮೆಟ್ರಿಕ್ ತರಗತಿಗಳಲ್ಲಿ ಓದುವಾಗ ಅವರನ್ನು ಜನರಲ್ ಹಾಸ್ಟಲುಗಳಲ್ಲಿ ಇಡುವ ವ್ಯವಸ್ಥೆ ಮಾಡಿ ಬೋರ್ಡಿಂಗ್ ಸ್ಕಾಲರ್‌ಷಿಪ್ ಕೊಡುವ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೇವೆ. ಪಂಚಾಯತಿಗಳಿಗೆ ಪ್ರೈಜ್ ಕಾಂಪಿಟೇಷನ್ ವ್ಯವಸ್ಥೆ ಮಾಡಿ ಯಾರು ಈ ವರ್ಗದ ಜನರ ಕಲ್ಯಾಣಕ್ಕಾಗಿ ಹೆಚ್ಚು ದುಡಿಯುತ್ತಾರೆ. ಅವರಿಗೆ ಬಹುಮಾನಗಳನ್ನು ಕೊಡತಕ್ಕ ಪದ್ಧತಿಯನ್ನು ಕೂಡ ಸರ್ಕಾರ ಹಾಕಿಕೊಂಡಿದೆ. ಅದೇ ರೀತಿಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಸರ್ಕಾರ ಹಾಕಿಕೊಂಡಿದೆ. ಪಟ್ಟಣಗಳಲ್ಲಗಿ ಅಸ್ಪೃಶ್ಯತೆ ಕ್ರಮೇಣ ಕಡಮೆಯಾಗುತ್ತ ಬಂದಾಗ್ಯೂ ಕೂಡ ಎಲ್ಲರೂ ಹೇಳುವಂತೆ ಹಳ್ಳಿಗಳಲ್ಲಿ ಸ್ವಲ್ಪ ಮಟ್ಟಿಗೆ ಇನ್ನೂ ಇದೆ. ಅದೂ ಕ್ರಮೇಣ ಕಡಮೆಯಾಗಬಹುದು ಎನ್ನುವ ನಂಬಿಕೆ ನನಗೆ ಇದೆ.

ಶ್ರೀ ಎಂ.ಎಚ್. ಜಯಪ್ರಕಾಶ್‌ನಾರಾಯಣ್:- ಗಾಂಧಿ ಶತಾಬ್ದಿ ಸಂಬಂಧದಲ್ಲಿ ಸಮಾಜಕಲ್ಯಾಣ ಇಲಾಖೆಯಿಂದ ಏನೇನು ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ ಮತ್ತು ಅದಕ್ಕೆ ಎಷ್ಟು ಹಣವನ್ನು ಒದಗಿಸಲಾಗಿದೆ?

ಶ್ರೀಮತಿ ಬಸವರಾಜೇಶ್ವರಿ:- ಆ ರೀತಿಯಾಗಿ ಪ್ರತ್ಯೇಕವಾದ ಯೋಜನೆಗಳನ್ನು ಹಾಕಿಕೊಂಡಿಲ್ಲ. ಕುಡಿಯುವ ನೀರಿನ ಪೂರೈಕೆ ಬಗ್ಗೆ ಹೆಚ್ಚಿನ ಗಮನಕೊಡಬೇಕೆಂದು ಸರ್ಕಾರ ಮನಗಂಡಿದೆ.

ಮಾನ್ಯ ಸದಸ್ಯರೆಲ್ಲರೂ ಇದುವರೆಗೂ ಕೂಡ ಸಹಕಾರ ಮಾಡಿದ್ದಕ್ಕಾಗಿ ಅವರೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಅನೇಕ ಮಹನೀಯು ಅನೇಕ ವಿಚಾರಗಳನ್ನು ಹೇಳಿದ್ದಾರೆ. ಅವೆಲ್ಲಕ್ಕೂ ಉತ್ತರ ಕೊಡುವುದಕ್ಕೆ ಅವಕಾಶವಿಲ್ಲದೆ ಇರುವುದರಿಂದ ಅವರು ಹೇಳಿರುವ ವಿಚಾರಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮುಂದೆ ಆಗಬೇಕಾದ ಕಾರ್ಯಕ್ರಮಗಳಲ್ಲಿ ಅದನ್ನು ಅಳವಡಿಸಿ ಕೆಲಸ ಮಾಡುತ್ತೇವೆಂದು ಮಾನ್ಯ ಸಭೆಗೆ ಭರವಸೆಯನ್ನು ಕೊಟ್ಟು ಅಧ್ಯಕ್ಷರಿಗೆ ವಂದಿಸಿ ನನ್ನ ನಾಲ್ಕು ಮಾತನ್ನು ಮುಗಿಸುತ್ತೇನೆ.

ಶ್ರೀಮತಿ ಬಸವರಾಜೇಶ್ವರಿ:- ಮಾನ್ಯ ಸದಸ್ಯರು ಅಂಕಿಸಂಖ್ಯೆಗಳನ್ನು ಏನು ಕೇಳಿದ್ದಾರೆ ಅದು ಈಗ ನನ್ನ ಹತ್ತಿರ ಇಲ್ಲ. ಎಲ್ಲೆಲ್ಲಿ ಜಮೀನು ಕೊಡತಕ್ಕುದು ಇದೆ ಲ್ಯಾಂಡ್ ಗ್ರಾಂಟ್ ರೂಲ್ಸ್ ಪ್ರಕಾರ ಅದನ್ನು ಕೊಡಲಾಗುತ್ತಿದೆ. ಈ ಬಗ್ಗೆ ಪೆಂಡಿಂಗ್ ಇರುವ ಅಪ್ಲಿಕೇಷನ್ ವಿಚಾರದಲ್ಲಿ ಮೊನ್ನೆ ತಾನೇ ಮುಖ್ಯ ಮಂತ್ರಿಗಳು ತಮ್ಮ ಭಾಷಣದಲ್ಲಿ ಜಿಲ್ಲಾಧಿಕಾರಿಗಳ ಸಮ್ಮೇಳನದಲ್ಲಿ ಹೇಳಿದ್ದಾರೆ. ಅದರ ಬಗ್ಗೆ ಜಿಲ್ಲಾಧಿಕಾರಿಗಳು ಕ್ರಮ ತೆಗೆದುಕೊಳ್ಳುತ್ತಾರೆ.

ಶ್ರೀ ಎಚ್.ಎನ್. ನಂಜೇಗೌಡ.- Sir, I just want a clarification. ಇವತ್ತು ಮೇಜರ್ ಹೆಡ್ 26 ಇದೆ, ಅದರಲ್ಲಿ ಮುಜರಾಯಿ ಸಂಸ್ಥೆಗಳೂ ಸೇರಿವೆ, ಮುಜರಾಯಿ ಸಂಸ್ಥೆಗಳ ಜವಾಬ್ದಾರಿ ರೆವೆನ್ಯೂ ಮಂತ್ರಿಗಳಿಗಿದೆ. ಅದರ ಬಗ್ಗೆ ಮುನಿಸಿಪಾಲಿಟಿಗಳಿಗೆ ಸಂಬಂಧಪಟ್ಟ ಸಚಿವರು ಜವಾಬು ಹೇಳುತ್ತಾರೋ ಏನೋ ಗೊತ್ತಿಲ್ಲ. ಬೆಳಿಗ್ಗೆ ಕೂಡ ಹಾಗೇ ಆಯಿತು. ಟೌನ್ ಪ್ಲಾನಿಂಗ್ ಕೂಡ ಸೇರಿತ್ತು. ಅದು ಪಿ.ಡಬ್ಲ್ಯು.ಗೆ ಸೇರಬೇಕಾಗಿತ್ತು. ಈ ರೀತಿಯಾದರೆ ಕ್ಲಾಸಿಫಿಕೇಷನ್ ಕಷ್ಟ. ಇವತ್ತು ಅಗ್ನಿಶಾಮಕ ದಳದ ವಿಚಾರದ ಕೂಡ ಬರುತ್ತದೆ. ಅದು ಹೋಂ ಇಲಾಖೆಯಲ್ಲಿತ್ತು. ಕ್ಲಾಸಿಫಿಕೇಷನ್ ಸರಿಯಾಗಿಲ್ಲದಿರುವುದರಿಂದ ಟೀಕೆ ಮಾಡುವುದು ಕಷ್ಟ, ಉತ್ತರ ಕೊಡುವುದೂ ಕಷ್ಟ. ಆದುದರಿಂದ ಡಿಮ್ಯಾಂಡುಗಳನ್ನು ರೀಕ್ಲಾಸಿಫೈ ಮಾಡಬೇಕು, ಯಾವ ಮಂತ್ರಿಗಳು ಡಿಮ್ಯಾಂಡ್ ಇಡುತ್ತಾರೋ ಅವರಿಗೆ ಸಂಬಂಧಪಟ್ಟಿದ್ದು ಮಾತ್ರ ಇರಬೇಕು. ಬೇರೆ ಮಂತ್ರಿಗಳಿಗೆ ಸಂಬಂಧಪಟ್ಟದ್ದನ್ನು ಬೇರೆ ದಿವಸ ಇಡಬೇಕು. ಬೈಫರ್ಕೇಷನ್ ಮಾಡುವುದಕ್ಕೆ ಅವಕಾಶ ಇರಬೇಕು.

1967ರ ಅಧಿವೇಶನದಲ್ಲಿ ಪಶುಸಂಗೋಪನೆ ಕುರಿತಂತೆ ಇರುವ ಬೇಡಿಕೆಗಳ ಒತ್ತಾಯ ಕುರಿತಂತೆ ಸುದೀರ್ಘವಾಗಿ, ಸಿದ್ಧತೆ ಮಾಡಿಕೊಂಡ ಭಾಷಣ ಅವರ ವಿಷಯ ಗ್ರಹಿಕೆ ಮತ್ತು ತಳಸ್ಪರ್ಶದ ಅರಿವು ಗ್ರಾಮಾಂತರ ಪ್ರದೇಶಗಳ ಜರೂರು ಕುರಿತಂತೆ ಗಮನ ಸೆಳೆಯುವಂಥ – ಅದರ ಪಾಠವನ್ನು ಈಗ ನೋಡೋಣ.

ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ) :- ಮಾನ್ಯ ಅಧ್ಯಕ್ಷರೇ, ನಮ್ಮ ಮುಂದೆ ಇರತಕ್ಕ ಪಶುಸಂಗೋಪನೆಗೆ ಸಂಬಂಧಪಟ್ಟ ಬೇಡಿಕೆಗಳನ್ನು ಅನುಮೋದಿಸುತ್ತ ಕೆಲವು ಸೂಚನೆಗಳನ್ನು ಕೊಡಬಯಸುತ್ತೇನೆ.

ಈ ವರ್ಷದ ಪ್ರಾರಂಭದಲ್ಲಿ ಸುಮಾರು 40 ರೂರಲ್ ವೆಟರಿನರಿ ಡಿಸ್ಪೆನ್ಸರಿಗಳ ಮತ್ತು ಮೂರು ಆರ್ಟಿಫಿನಿಯರ್ ಇನ್‌ಸೆಮಿನೇಷನ್ ಸೆಂಟರ್ಸ್ ಪ್ರಾರಂಭ ಮಾಡುತ್ತಾರೆಂದು ನಮಗೆ ಗೊತ್ತಾಗಿದೆ. ರಾಜ್ಯದಲ್ಲಿರುವ 19 ಜಿಲ್ಲೆಗಳಿಗೆ ಇವರು ಕೊಡತಕ್ಕ 40 ಆಸ್ಪತ್ರೆಗಳು ಎಲ್ಲಿಗೆ ಸಾಕು ಎಂದು ಮಾನ್ಯ ಮಂತ್ರಿಗಳನ್ನು ಕೇಳುತ್ತೇನೆ. ಇವತ್ತಿನ ದಿವಸ ಮನುಷ್ಯರಿಗೆ ಎಷ್ಟು ಬೇನೆ ಬರುತ್ತದೆಯೋ ಅದೇ ಪ್ರಕಾರ ದನಗಳಿಗೂ ಕೂಡ ನಾನಾ ತರಹ ಬೇನೆಗಳು ಬರುತ್ತಿವೆ. ಒಂದು ಜೋಡಿ ಎತ್ತುಗಳ ಬೆಲೆ ಒಂದು ಸಾವಿರ ರೂಪಾಯಿಗಳಿಗೆ ಕಡಿಮೆ ಇಲ್ಲ ಒಂದು ಎತ್ತಿಗೆ ಏನಾದರೂ ರೋಗ ಬಂದು ಅದು ಸತ್ತು ಹೋದರೆ ಒಕ್ಕುತನ ಮಾಡುವವನ ಜೀವನವೇ ನಿರ್ಜೀವವಾಗುತ್ತದೆ. ಇಂಥ ಪ್ರಾಮುಖ್ಯವಾದ ವಿಚಾರಗಳಿಗೆ ನಾವು ಎಷ್ಟರವಟ್ಟಿಗೆ ಲಕ್ಷ್ಯ ಕೊಟ್ಟಿದ್ದೇವೆಂದರೆ ಕೇವಲ ಆರು ಕೋಟಿ ರೂಪಾಯಿ ಮಾತ್ರ ಇದಕ್ಕೆ ಒದಗಿಸಿದ್ದೇವೆ. ಎಂದು ನೋಡಿದರೆ ನನಗೆ ತುಂಬ ಅಸಮಾಧಾನವಾಗುತ್ತದೆ. ಇವತ್ತಿನ ದಿವಸ ವ್ಯವಸಾಯದ ಅಭಿವೃದ್ಧಿ ಮಾಡಬೇಕು, ಹೆಚ್ಚು ಬೆಳೆಯಬೇಕು ಎಂದು ಹೇಳುತ್ತೇವೆ. ಯಾವಾಗ ಹೆಚ್ಚು ಬೆಳೆಯುವುದಕ್ಕೆ ಆಗುತ್ತದೆ. ಎಂದರೆ ಉತ್ತಮ ತಳಿಯ ದನಗಳನ್ನು ಕಟ್ಟಿಕೊಳ್ಳಬೇಕು, ಅವುಗಳಿಂದ ಗೊಬ್ಬರವನ್ನು ಪಡೆಯಬೇಕು, ಗೊಬ್ಬರವನ್ನು ಹೊಲಕ್ಕೆ ಹಾಕಬೇಕು, ಆಗ ಉತ್ತಮ ಬೆಳೆ ಬರುವುದಕ್ಕೆ ಪ್ರಾರಂಭವಾಗುತ್ತದೆ. ದನಗಳನ್ನು ಕಟ್ಟುವುದಿಲ್ಲ. ಗೊಬ್ಬರ ಬೇಕಾಗಿಲ್ಲ ಏನೂ ಬೇಕಾಗಿಲ್ಲ, ಆಹಾರ ಹೆಚ್ಚು ಬೆಳೆಯಿರಿ ಎಂದು ಹೇಳಿದರೆ ಹೆಚ್ಚು ಬೆಳೆಯಾಗುವುದಿಲ್ಲ. ಅದಕ್ಕೆ ಸಂಬಂಧಪಟ್ಟಂತೆ ಪ್ರಿಲಿಮಿನರೀಸ್ ಅದನ್ನೆಲ್ಲಾ ಮೊದಲೇ ಕಾಪಾಡಿಕೊಳ್ಳಬೇಕಾಗುತ್ತದೆ. ಅದಕ್ಕೆ ಮೊದಲು ಬೇಕಾದಷ್ಟು ಎಂದರೆ ಎತ್ತಗಳು ಮತ್ತು ದನಗಳು. ಎತ್ತುಗಳು ಚೆನ್ನಾಗಿ ವ್ಯವಸಾಯ ಮಾಡುವುದಕ್ಕೆ ಬೇಕಾಗುತ್ತವೆ. ಮತ್ತು ದನಗಳನ್ನು ಜೋಪಾನ ಮಾಡುವುದರಿಂದ ನಮಗೆ ಹಾಲೂ ಸಿಕ್ಕುತ್ತದೆ ಗೊಬ್ಬರವೂ ಸಿಕ್ಕುತ್ತದೆ. ಇವೆರಡೂ ಇಲ್ಲದೆ ಒಕ್ಕಲುತನ ಹೆಚ್ಚು ಮಾಡುವುದಕ್ಕೆ ಸಾಧ್ಯವಿಲ್ಲ. ಹೆಚ್ಚು ಬೆಳೆಯುವುದಕ್ಕೂ ಸಾಧ್ಯವಿಲ್ಲ. ನಾನು ಹೇಳುವುದೇನೆಂದರೆ, ಈ ವಿಚಾರಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡಬೇಕು ಮತ್ತು ರಾಜ್ಯಕ್ಕೆ ಕೊಡಬೇಕೆಂದಿರುವ 40 ಆಸ್ಪತ್ರೆಗಳು ಸಾಲದು ಎಂದು ಹೇಳುತ್ತಿದ್ದೇನೆ.

ಈಗಾಗಲೇ ಬೇಕಾದಷ್ಟು ರೂರಲ್ ವೆಟೆರಿನರಿ ಡಿಸ್ಪೆನ್ಸರಿಗಳನ್ನು ಪ್ರಾರಂಭ ಮಾಡಿದ್ದಾರೆ. ಡಿಸ್ಪೆನ್ಸರಿಗಳು ಇದ್ದಕಡೆ 'ಸ್ಟಾಫ್‌ಮನ್' ಇಲ್ಲ. ಡಾಕ್ಟರುಗಳಿಲ್ಲ, ಔಷಧಿಗಳಿಲ್ಲ. ಇದರಿಂದಾಗಿ ಏನಾದರೂ ಸಾಂಕ್ರಾಮಿಕ ರೋಗಗಳು ಬಂದಾಗ ಅದನ್ನು ವಾಸಿ ಮಾಡುವುದಕ್ಕೆ ತುಂಬ ತೊಂದರೆಯಾಗಿದೆ. ಇಂಥ ಸಂದರ್ಭಗಳಲ್ಲಿ ಬಹಳ ಒಳ್ಳೆಯ ಬೆಲೆಯುಳ್ಳ ಔಷಧಿಗಳು ಬೇಕಾಗುತ್ತವೆ. ಕನಿಷ್ಠ ಪಕ್ಷ ಒಂದೊಂದು ಡಿಸ್ಪೆನ್ಸರಿಗೂ ಎಮರ್ಜೆನ್ಸಿ ಎಂದು ತಿಳಿದು ಹೈಯರ್ ಅಂಟಿ ಬಯೊಟಿಕ್ಸ್ ಒದಗಿಸಿಕೊಡಬೇಕೆಂದು ಸರ್ಕಾರದವರಿಗೆ ಸೂಚನೆಯನ್ನು ಕೊಡುತ್ತಿದ್ದೇನೆ. ಕೇವಲ ಪೌಡರ್, ಅಯೋಡಿನ್ ಇಷ್ಟನ್ನು ಕೊಡುವುದರಿಂದ ಏನೂ ಪ್ರಯೋಜನವಾಗುವುದಿಲ್ಲ. ಅದರ ಜೊತೆಗೆ ಹೈಯರ್ ಅಂಟಿಬಯೊಟಿಕ್ಸ್ ಕೂಡ ರೂರಲ್ ವೆಟೆರಿನರಿ ಡಿಸ್ಪೆನ್ಸರಿಗಳಿಗೆ ಒದಗಿಸುವುದು ಬಹಳ ಉತ್ತಮ ಎಂದು ಸರ್ಕಾರದವರಿಗೆ ನಾನು ಸೂಚನೆ ಮಾಡುತ್ತಿದ್ದೇನೆ.

ಈಗಾಗಲೇ ಎಕ್ಸ್‌ಟೆನ್‌ಷನ್ ಆಫೀಸರುಗಳ ಹುದ್ದೆಯನ್ನು ರದ್ದು ಮಾಡುತ್ತಾರೆನ್ನುವ ವರದಿ ಇದೆ. ಏಕೆ ರದ್ದು ಮಾಡುತ್ತಾರೆಂದು ನನಗೆ ಗೊತ್ತಾಗುವುದಿಲ್ಲ. ಈಗ ವ್ಯವಸಾಯಕ್ಕೆ ಎಷ್ಟು ಪ್ರಾಮುಖ್ಯತೆ ಕೊಡುತ್ತಿದ್ದೇವೆಯೋ ಐದಕ್ಕೂ ಅಷ್ಟೇ ಪ್ರಾಮುಖ್ಯತೆಯನ್ನು ಕೊಡಬೇಕೆಂದು ನಾನು ಮೊದಲೇ ತಿಳಿಸಿದೆ. ಎಕ್ಸ್‌ಟೆನ್‌ಷನ್ ಆಫೀಸರ ಹುದ್ದೆಗಳನ್ನು ರದ್ದು ಮಾಡುವುದರಿಂದ ಎಷ್ಟು ಉಳಿತಾಯ ಮಾಡುತ್ತಾರೆಂದು ನನಗೆ ಗೊತ್ತಿಲ್ಲ. ಈ ಹುದ್ದೆಗಳನ್ನು ರದ್ದುಮಾಡುವುದು ಅಷ್ಟು ಸೂಕ್ತವಲ್ಲ. ಒಕ್ಕಲುತನ ಮತ್ತು ಪಶುಸಂಗೋಪನ ಎರಡೂ ಒಟ್ಟಿಗೆ ನಡೆಯಬೇಕು ಎನ್ನುವ ವಿಷಯವನ್ನು ನಾನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

ಫಾಡರ್ ವಿಷಯದಲ್ಲಿ ಒಂದು ಮಾತು ಹೇಳಬೇಕಾಗಿದೆ. ಸರ್ಕಾರದಲ್ಲಿರುವ ಫಾರೆಸ್ಟ್ ಲ್ಯಾಂಡ್ಸ್ ಮತ್ತು ಬೈರಾನ್ ಲ್ಯಾಂಡ್ಸ್ ಕೆಲವು ಜನರಿಗೆ ಕೊಟ್ಟಿದ್ದಾರೆ. ಇನ್ನೂ ಹೆಚ್ಚು ಜಮೀನು ಇದೆ. ದನಗಳಿಗೆ ಮೇವು ಇಲ್ಲದೆ ಹೋದರೆ ಅದನ್ನು ಒದಗಿಸುವುದು ಪ್ರಥಮ ಕರ್ತವ್ಯವಾಗಿದೆ. ಹೋದ ವರ್ಷ ನಾವು ನೋಡಿದ್ದೇವೆ. ನಮ್ಮ ಭಾಗದಲ್ಲಿ ದನಗಳಿಗೆ ಮೇವು ಸಿಕ್ಕದೆ ಒಂದು ಬಂಡಿ ಮೇವಿಗೆ ನೂರು ರೂಪಾಯಿ ಕೊಟ್ಟು ಕೊಂಡುಕೊಳ್ಳಬೇಕಾದ ಪ್ರಸಂಗ ಬಂತು. ಅದಕ್ಕಾಗಿ ನಾನು ಹೇಳುವುದು ಏನೆಂದರೆ ಫಾಡರ್ ಡೆವಲಪ್‌ಮೆಂಟ್ ಕೆಲಸವನ್ನು ಕ್ರಾಷ್ ಪ್ರೋಗ್ರಾಂನಲ್ಲಿ ತೆಗೆದುಕೊಳ್ಳಲು ಹೆಚ್ಚು ಗಮನಕೊಡಬೇಕು. ಹೈಬ್ರಿಡ್ ಗ್ರಾಸ್ ಬೆಳೆಯತಕ್ಕ ರೈತರಿಗೆ ಬೀಜಗಳನ್ನು ಒದಗಿಸಬೇಕು. ಪ್ರತಿಯೊಂದು ಜಿಲ್ಲೆಯಲ್ಲಿ ಕೂಡ ಬೀಜ ತಯಾರು ಮಾಡುವ ಫಾಡರ್ ಸ್ಟೇಷನ್ ಮಾಡಿ, ಬೀಜ ಕೊಡತಕ್ಕ ಪದ್ಧತಿಯನ್ನು ಜಾರಿಯಲ್ಲಿ ತರಬೇಕೆಂದು ಮಾನ್ಯ ಮಂತ್ರಿಗಳಲ್ಲಿ ಸೂಚನೆ ಮಾಡುತ್ತಿದ್ದೇನೆ.

ಫ್ರೀ ಬ್ರೀಡಿಂಗ್ ಬುಲ್ಸ್ ಅನ್ನು ತಾಲ್ಲೂಕು ಬೋರ್ಡುಗಳ ಮುಖಾಂತರ ಇಲಾಖೆಯವರು ಕೊಟ್ಟಿದ್ದಾರೆ. ಇದನ್ನು ಕೆಲವು ವ್ಯಕ್ತಿಗಳಿಗೆ ಮಾತ್ರ ಕೊಟ್ಟಿದ್ದಾರೆ. ಅವುಗಳ ಸರ್ವಿಸ್ ಸಾಮಾನ್ಯ ಜನಗಳಿಗೆ ಸಿಕ್ಕಲಾರದು ಎಂದು ನನಗೆ ಅನುಮಾನವಾಗಿದೆ. ಬ್ರೀಡಿಂಗ್ ಬುಲ್ಸ್ ತೆಗೆದುಕೊಂಡು ಅದನ್ನು ಕೇವಲ ತಮ್ಮ ಮನೆಗಾಗಿ ಉಪಯೋಗಿಸಿ ಕೆಲವು ದಿನಗಳಾದ ಮೇಲೆ ಅದನ್ನು

ಹೂಡುತ್ತಿದ್ದಾರೆ. ಯಾರಾದರೂ ಸರ್ವಿಸ್ ಕೇಳಿದರೆ ಅದಕ್ಕೆ ದುಡ್ಡು ಕೂಡ ಕೇಳುತ್ತಿದ್ದಾರೆ. ಅದನ್ನು ತೆಗೆದುಬಿಟ್ಟು ಕ್ರಾಸ್ ಬ್ರೀಡಿಂಗ್ ಮಾಡಿ, ವ್ಯಕ್ತಿಗಳಿಗೆ ಕೊಡುವ ಬುಲ್ಸ್ ಏನಿದೆ ಅದನ್ನು ಗ್ರಾಮಪಂಚಾಯಿತಿಗಳಿಗೆ ಕೊಡಿರಿ. ಇದಕ್ಕಿಂತ ಉತ್ತಮವಾದ ಸಲಹೆ ಎಂದರೆ ಕ್ರಾಸ್ ಬ್ರೀಡಿಂಗ್ ಸ್ಟೇಷನ್ ಪ್ರಾರಂಭ ಮಾಡುವುದು. ಈಗ ಆರ್ಟಿಫಿಷಿಯಲ್ ಇನ್‌ಸೆಮಿನೇಷನ್ ಸೆಂಟರ್ಸ್ ಅಲ್ಲಲ್ಲಿ ಮಾಡುತ್ತಿದ್ದಾರೆ. ಹೀಗೆ ಮಾಡಿದಾಗ ಅದರ ಉಪಯೋಗವನ್ನೂ ಹೆಚ್ಚಾಗಿ ಜನರು ಪಡೆಯುವಂತೆ ಮಾಡಬೇಕು. ರಾಯಚೂರು ತುಂಗಭದ್ರ ಪ್ರದೇಶದಲ್ಲಿ ಬೇಕಾದಷ್ಟು ಜಮೀನು ಅಭಿವೃದ್ಧಿಯಾಗಲಿಕ್ಕೆ ನೀರಾವರಿಗೆ ಬೇಕಾದಂಥ ಸವಲತ್ತುಗಳಿವೆ. ಅದಕ್ಕಾಗಿ ಈಗಾಗಲೇ ಮುನಿರಾಬಾದಿನಲ್ಲಿ ಕ್ಯಾಟಲ್ ಬ್ರೀಡಿಂಗ್ ಸ್ಟೇಷನ್, ಷೀಪ್ ಬ್ರೀಡಿಂಗ್ ಸ್ಟೇಷನ್, ಪೌಲ್ಟ್ರಿ, ಈ ಮೂರು ಸ್ಟೇಷನ್‌ಗಳನ್ನಿಟ್ಟಿದ್ದಾರೆ ಮತ್ತು ಅಲ್ಲಿ ಬೇಕಾದಂಥ ಹುಲ್ಲು ಕೂಡ ಬೆಳೆಯುತ್ತದೆ. ಬೆಂಗಳೂರಿಗೆ ಹೋದರೆ ಸಕಾಲದಲ್ಲಿ ಕೆಲಸವಾಗುವುದಿಲ್ಲ. ಈಗ ಮೂರು ಜಿಲ್ಲೆಗಳಿಗೆ ಒಂದು ಕೇಂದ್ರವನ್ನು ಮಾಡಿದ್ದಾರೆ. ಅದು ಸಾಲದು, ಆದುದರಿಂದ ಮುನಿರಾಬಾದಿನಲ್ಲೂ ಕೂಡ ಒಂದು ಆರ್ಟಿಫಿಷಿಯಲ್ ಇನ್‌ಸೆಮಿನೇಷನ್ ಸೆಂಟರನ್ನು ತೆರೆಯಬೇಕೆಂದು ಸಲಹೆ ಮಾಡುತ್ತೇನೆ. ಕೆಲವು ಕಡೆಗಳಿಗೆ ಆರ್ಟಿಫಿಷಿಯಲ್ ಇನ್‌ಸೆಮಿನೇಷನ್ ಕೇಂದ್ರವನ್ನು ಮಂಜೂರು ಮಾಡಿದ್ದರೂ ಕೂಡ ಟೆಕ್ನಿಕಲ್ ಸ್ಯಾಂಕ್ಷನ್ ಸಿಕ್ಕಿಲ್ಲ. ಲಿಂಗಸುಗೂರಿಗೆ ಒಂದು ಕೇಂದ್ರ ಮಂಜೂರಾಗಿದ್ದರೂ ಅದು ಕಾರ್ಯಗತವಾಗಿಲ್ಲ. ಇದಕ್ಕೆ ಕಾರಣವೇನೆಂಬುದಕ್ಕೆ ನೋಡಿ ತಕ್ಷಣ ತಕ್ಕ ಕ್ರಮ ಕೈಕೊಳ್ಳಬೇಕು. ಎಲ್ಲಾ ಮೂಲೆಗಳಲ್ಲೂ ಸೇರ್ಮಗೆ ಬೆಲೆಯಿದೆ. ಅದು ರೈತರಿಗೆ ಸಕಾಲದಲ್ಲಿ ದೊರೆಯುವಂತೆ ವ್ಯವಸ್ಥೆ ಮಾಡಬೇಕು.

ನಾಲ್ಕೈದು ವರ್ಷಗಳಿಂದ ಬಗವಟ್ ಗ್ರಾಮಕ್ಕೆ ರೂರಲ್ ವೆಟರ್ನರಿ ಆಸ್ಪತ್ರೆಯನ್ನು ಮಂಜೂರು ಮಾಡಬೇಕೆಂದು ಕೇಳುತ್ತಿದ್ದರೂ ಕೂಡ ಇನ್ನೂ ಕೊಟ್ಟಿರುವುದಿಲ್ಲ. ಆ ಸುತ್ತಮುತ್ತ 20 ಮೈಲಿಗಳ ದೂರದವರೆಗೂ ಒಂದು ಆಸ್ಪತ್ರೆಯೂ ಇಲ್ಲದಿರುವುದರಿಂದ ರೈತರಿಗೆ ತೊಂದರೆಯಾಗಿ, ಮಂಜೂರು ಮಾಡಬೇಕು ಎಂದು ತಾಲ್ಲೂಕು ಬೋರ್ಡಿನಿಂದ ನಿರ್ಣಯ ಸಹ ಮಾಡಿ ಕಳಿಸಿದೆ. ದಯೆಯಿಟ್ಟು ಕೂಡಲೆ ಅಲ್ಲಿಗೆ ಒಂದು ಆಸ್ಪತ್ರೆಯನ್ನು ಕೊಡಬೇಕು. ಈಗ ಕೊಟ್ಟಿರುವ ರೂರಲ್ ಆಸ್ಪತ್ರೆಗಳಲ್ಲಿ ಆರ್ಟಿಫಿಷಿಯಲ್ ಇನ್‌ಸೆಮಿನೇಷನ್ ಕೇಂದ್ರವನ್ನು ತೆರೆಯಬೇಕು, ವೆಟರ್ನರಿ ಆಸ್ಪತ್ರೆಗಳಿಗೆ ಸರಿಯಾಗಿ ಔಷಧಿ ಮುಂತಾದುವನ್ನು ಸಕಾಲದಲ್ಲಿ ಸರಬರಾಜು ಮಾಡಬೇಕು, ಅವು ದಕ್ಷತೆಯಿಂದ ಕೆಲಸಮಾಡಲು ಅವಕಾಶ ಮಾಡಬೇಕು ಎಂದು ಇಷ್ಟು ಹೇಳಿ ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಭಾಷಣವನ್ನು ಮುಕ್ತಾಯ ಮಾಡುತ್ತೇನೆ.

1968 ಏಪ್ರಿಲ್ 15 ರಂದು ಜರುಗಿದ ಅಧಿವೇಶನದಲ್ಲಿ ಸುದೀರ್ಘ ವಿಷಯ ಮಂಡನೆ: "ಸಕ್ಕರೆ ಕಾರ್ಖಾನೆ ಕಬ್ಬು ಪೂರೈಕೆ - ರೈತರ ಏಳಿಗೆಗೆ ಟ್ರಾಕ್ಟರ್ ಮಂಜೂರಾತಿ ಕುಡಿಯುವ ನೀರಿನ ವ್ಯವಸ್ಥೆ - ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಕಾರ್ಯಗಳು ಮುಂತಾಗಿ ಜನರಹಿತ ಜನಪರ ಕೆಲಸಗಳಿಗೆ ಮಹತ್ವನೀಡಿ, ಎಂದು ಸುದೀರ್ಘವಾಗಿ ವಿಷಯ ಮಂಡನೆ ಮಾಡಿ ಸಭೆಯ ಗಮನ ಸೆಳೆಯುತ್ತಾರೆ. ಬನ್ನಿ ಈಗ ನೋಡೋಣ."

ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ):- ಮಾನ್ಯ ಅಧ್ಯಕ್ಷರೇ, ಈಗ ನಮ್ಮ ಮುಂದಿರತಕ್ಕಂಥ ಸಹಕಾರ, ಪಂಚಾಯತ್ ರಾಜ್ ಮತ್ತು ರೂರಲ್ ಡೆವಲಪ್‌ಮೆಂಟ್ ಬೇಡಿಕೆಗಳಿಗೆ ನಾನು ಸಂಪೂರ್ಣವಾಗಿ ಅನುಮೋದನೆಯನ್ನು ಕೊಡುತ್ತಾ ಕೆಲವು ವಿಷಯಗಳನ್ನು ಸರ್ಕಾರದ ಗಮನಕ್ಕೆ ತರಬೇಕೆಂದು ಅಪೇಕ್ಷೆ ಮಾಡಿದ್ದೇನೆ.

ಮೊದಲನೆಯದಾಗಿ ನಾನು ಹೇಳುವುದೇನೆಂದರೆ, ಬಳ್ಳಾರಿ ಜಿಲ್ಲೆಯ ಸಿರಗುಪ್ಪಾ ತಾಲ್ಲೂಕಿನಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ತೆಗೆದಿದ್ದಾರೆ ಅದು ಸುಮಾರು 2-3 ವರ್ಷಗಳ ತನಕ ಕೆಲಸಮಾಡಿದ್ದು ತಮಗೆ ಗೊತ್ತಿರುತ್ತದೆ. ಬೆಲ್ಲದ ಧಾರಣೆ ಬಹಳ ಕಡಿಮೆ ಯಾದ್ದರಿಂದ ರೈತರು ಅನಿವಾರ್ಯವಾಗಿ ಅವರು ಬೆಳೆದಂಥ ಕಬ್ಬನ್ನು ಆ ಕಾರ್ಖಾನೆಗೆ ಕೊಟ್ಟರು. ಅದರೆ ಇವತ್ತಿನವರೆಗೂ ಕಬ್ಬು ಸರಬರಾಜು ಮಾಡಿದಂಥ ರೈತರಿಗೆ ದುಡ್ಡು ಮುಟ್ಟಿಲ್ಲ ಷೇರು ಕ್ಯಾಪಿಟಲ್ ಎಷ್ಟು ಎಂಬುದನ್ನು ಯಾವತ್ತು ಗೊತ್ತುಮಾಡಿಲ್ಲ. ಈಗ ಆ ಸಕ್ಕರೆ ಕಾರ್ಖಾನೆ ಮುಚ್ಚಿಹೋಗಿದೆ.ಎರಡು ಮೂರು ಸಾರಿ ಸರ್ಕಾರದವರಲ್ಲಿ ಏನಾದರೂ ಮಾಡಿ ಮತ್ತೆ ಈ ಸಕ್ಕರೆ ಕಾರ್ಖಾನೆಯನ್ನು ತೆಗೆಸಬೇಕು ಎಂಬುದಾಗಿ ಪ್ರಯತ್ನ ಮಾಡಿದ್ದಾಯಿತು. ಆದರೂ ಇನ್ನೂ ತೆಗೆಯಲಿಲ್ಲ ದೇಶದಲ್ಲಿ ಕಬ್ಬು ಬೆಳೆಯುವವರು ಬಹಳವಾಗಿ ಇದ್ದಾರೆ. ಅವರಿಂದ ಇಂತಹ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಆಗಬೇಕು. ಆ ರೀತಿ ಕಬ್ಬು ಸರಬರಾಜು ಮಾಡಿದಂತವರಿಗೆ ದುಡ್ಡು ವಾಪಸ್ಸು ಕೊಡುವುದಕ್ಕೆ ಪ್ರಯತ್ನ ಮಾಡಬೇಕು. ಆದರೆ ಈ ಸಕ್ಕರೆ ಕಾರ್ಖಾನೆಗತಿ ಏನಾಯಿತು ಅಂದರೆ, ಈ ಬಗ್ಗೆ ಎರಡು ಮೂರುಸಾರಿ ವಿಚಾರ ಮಾಡಿದ್ದರೂ ಇವತ್ತಿನವರೆಗೂ ಅದರ ಬಗ್ಗೆ ಗಮನಕೊಟ್ಟಿಲ್ಲ. ಆದ್ದರಿಂದ ಸರ್ಕಾರದವರು ಕೂಡಲೇ ಅದನ್ನು ವಿಚಾರ ಮಾಡಿ ಆ ಸಕ್ಕರೆ ಕಾರ್ಖಾನೆಯನ್ನು ಕೆಲಸಕಾರ್ಯಗಳು ಪ್ರಾರಂಭವಾಗುವ ಹಾಗೆ ವ್ಯವಸ್ಥೆ ಮಾಡುವುದು ಉತ್ತಮ ವೆಂದು ನಾನು ಸಲಹೆಮಾಡುತ್ತೇನೆ. ಏಕೆಂದರೆ, ಅಲ್ಲಿ ಏನಾದರೂ ಕೆಲಸಕಾರ್ಯಗಳನ್ನು ಮಾಡುವುದಲ್ಲಿ ಮ್ಯಾನೇಜಿರಿಯಲ್ ಡಿಫೆಕ್ಟ್ ಇದೆಯೆಂದು ಕಂಡು ಬಂದರೆ ಅಲ್ಲಿಗೆ ಯಾವುದೇ ರೀತಿಯಿಂದ ತಜ್ಞರನ್ನು ನೇಮಕಮಾಡಿ ಅವರಿಂದ ಪರಿಶೀಲನೆ ಮಾಡಿಸಿ ಕೂಡಲೇ ಆ ಸಕ್ಕರೆ ಕಾರ್ಖಾನೆಯನ್ನು ತೆರೆಯಲು ಪ್ರಯತ್ನ ಮಾಡಬೇಕೆಂದು ನಾನು ಸರ್ಕಾರದವರಲ್ಲಿ ಸಲಹೆ ಮಾಡುತ್ತೇನೆ.

ಈಗ ಕೆಲವು ಪ್ರೈಮರಿ ಸೊಸೈಟಿಗಳಿಗೆ ಟ್ರಾಕ್ಟರುಗಳನ್ನು ಕೊಳ್ಳುವುದಕ್ಕೆ ಪರ್ಮಿಷನ್ ಕೊಟ್ಟಿದ್ದಾರೆ 2-3 ಸೊಸೈಟಿಗಳನ್ನು ನೋಡಿದ್ದೇನೆ. ಮಿಸ್‌ಯೂಸ್ ಆಗುತ್ತಾ ಇವೆ ಹಗಲು ಹೊತ್ತು ಮಾಡತಕ್ಕ ಕಲಸಕ್ಕೆ ಲೆಕ್ಕ ತೋರಿಸುತ್ತಾರೆ ಇಡೀ ರಾತ್ರಿಯಲ್ಲಾ ಟ್ರಾಕ್ಟರುಗಳಿಂದ ಕೆಲಸ ಮಾಡಿಸಿ ಲೆಕ್ಕಗಳನ್ನು ತೋರಿಸುತ್ತಾ ಇಲ್ಲ ಟ್ರಾಕ್ಟರ್ ಯಾವ ರೀತಿ ಇಟ್ಟುಕೊಂಡಿದ್ದಾರೆ, ಯಾವ ತರಹ ಮೆಂಟೈನ್ ಮಾಡುತ್ತಾ ಇದ್ದಾರೆ ರಿಪೇರಿಗೆ ಎಷ್ಟು ಖರ್ಚು ಮಾಡಿದ್ದಾರೆ ಎಂಬುದನ್ನು ನೋಡಿದರೆ ಈ ಸೊಸೈಟಿಗಳಿಂದ ಒಂದು ನಯಾ ಪೈಸಾ ಲಾಭ ಬಂದಿಲ್ಲ ಆದುದರಿಂದ ಪ್ರೈಮರಿ ಸೊಸೈಟಿಗಳಿಗೆ ಟ್ರಾಕ್ಟರುಗಳನ್ನು ಕೊಡುವುದನ್ನು ಸಾಧ್ಯವಾದ ಮಟ್ಟಿಗೆ ನಿಲ್ಲಿಸಬೇಕು. ಇಂಡುವಿಜುಯಲ್ಸ್‌ಗೂ ಕೊಡುತ್ತಾ ಇದ್ದೀರಿ. ಸಿಂಧನೂರು ಮಾನ್ವಿ ಪ್ರದೇಶದಲ್ಲಿ ಟ್ರಾಕ್ಟರ್ ಅಸೋಸಿಯೇಷನ್

ಮಾಡಿಕೊಂಡಿದ್ದಾರೆ ಅವರಿಗೆ ಇನ್ನೂ ಸಹಾಯ ಮಾಡಿ ಅವರು ಚೆನ್ನಾಗಿ ಕೆಲಸ ಮಾಡುವಂತೆ ಸರ್ವಿಸ್ ಸ್ಟೇಷನ್ ಬಿಲ್ಡ್ ಅಪ್ ಮಾಡುವುದಕ್ಕೆ ಸ್ಪೇರ್ ಪಾರ್ಟ್ಸ್ ಕೊಟ್ಟು ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ವ್ಯವಸ್ಥೆ ಮಾಡಬೇಕು.

(Mr. Deputy Speaker in the Chair)

ನಮ್ಮ ಪಂಚಾಯತ್ ಏರಿಯಾದಲ್ಲಿ ಒಂದು ಸೊಸೈಟಿಯನ್ನು ಮಾಡಬೇಕು ಎಂದರೆ ಒಂದು ರೆಸಿಲ್ಯೂಷನ್ ಮಾಡಬೇಕು ಎಂದು ಇದೆ. ಅವರು ಉದ್ದೇಶಪೂರ್ವಕವಾಗಿ ಮಾಡಲಾರದೇ ಇದ್ದಂಥ ಸಂದರ್ಭದಲ್ಲಿ, ಸೊಸೈಟಿಯ ರಿಜಿಸ್ಟಾರ್ ಮತ್ತು ಜಾಯಿಂಟ್ ರಿಜಿಸ್ಟಾರ್ ಅಗತ್ಯ ಇದ್ದಾಗ ಅಲ್ಲಿಗೆ ಹೋಗಿ ಅಂತಹ ಸಂದರ್ಭದಲ್ಲಿ ಆ ನಿಯಮವನ್ನು ವೇವ್ ಮಾಡಿ ಸೊಸೈಟಿ ರಿಜಿಸ್ಟರ್ ಮಾಡಿಕೊಳ್ಳುವುದಕ್ಕೆ ಏರ್ಪಾಡು ಮಾಡಬೇಕು. ಕೆಲವು ಸಂದರ್ಭದಲ್ಲಿ ಹೇಳಬೇಕು ಎಂದರೆ ಬೇರೆ ಗ್ರಾಮದಲ್ಲಿ ಜಮೀನು ಇರುತ್ತದೆ. ಜನರು ಮಾತ್ರ ಆ ಊರಿನಲ್ಲಿ ವಾಸ ಮಾಡುತ್ತಾರೆ ಅಂತಹ ಸಂದರ್ಭದಲ್ಲಿ ಜಮೀನು ಬೇರೆ ತಾಕಿನಲ್ಲಿ ಇದ್ದರೆ, ಆ ಊರಿನಲ್ಲಿರುವ ರೈತರಿಗೆ ಷೇರು ಕೊಡುವುದಕ್ಕಾಗುವುದಿಲ್ಲ ಎಂದು ಹೇಳುತ್ತಾರೆ. ಹೀಗಾಗಿ ಕೆಲವು ಹಳ್ಳಿಗಳಲ್ಲಿ ಇದುವರೆಗೂ ಸೊಸೈಟಿ ಪ್ರಾರಂಭ ಆಗುವುದಕ್ಕೆ ಅವಕಾಶ ಇಲ್ಲ. ಮಿನಿಮಮ್ ಮೆಂಬರ್ 50 ಇರಬೇಕು ಎಂದು ಹೇಳುತ್ತಾರೆ ಅದೇ ಗ್ರಾಮದವರು ಸಿಕ್ಕುವುದಿಲ್ಲ ಆದುದರಿಂದ ಅಡ್ಜಸೆಂಟ್ ಏರಿಯಾದಲ್ಲಿ ಭೂಮಿ ಇದ್ದರೆ, ಅಂತಹ ರೈತರನ್ನು ಮೆಂಬರುಗಳನ್ನಾಗಿ ತೆಗೆದುಕೊಂಡರೆ ಅನುಕೂಲವಾಗುತ್ತದೆ ಇಲ್ಲದಿದ್ದರೆ ತೊಂದರೆಯಾಗುತ್ತದೆ. ಆ ರೀತಿ ಮಾಡಬೇಕೆಂದು ಸಲಹೆ ಮಾಡುತ್ತೇನೆ.

ಇನ್ನು ಹಳ್ಳಿ ಅಭಿವೃದ್ಧಿ ವಿಷಯದಲ್ಲಿ ಹೇಳಬೇಕಾದರೆ ಮಾನ್ಯ ಸದಸ್ಯರು ಅನೇಕ ಜನ ಎನ್.ಆರ್.ಡಬ್ಲ್ಯು. ಸ್ಕೀಮಿನ ವಿಚಾರವಾಗಿ ಮಾತನಾಡಿದ್ದಾರೆ. 5-6 ವರ್ಷದಿಂದ ನನ್ನ ತಾಲ್ಲೂಕಿನಲ್ಲಿ 10-20 ಗ್ರಾಮಗಳಲ್ಲಿ ಕುಡಿಯುವ ನೀರಿನ ಸ್ಕೀಮ್ ತಯಾರು ಮಾಡಿದ್ದಾರೆ ಆದರೆ ಇವತ್ತಿನವರೆಗೂ ಗ್ರ್ಯಾಂಟ್ ಕೇಂದ್ರ ಸರ್ಕಾರದಿಂದ ಬಂದಿಲ್ಲ ಸಾಮಾನುಗಳನ್ನು ಪರ್ಚೇಸ್ ಮಾಡಿ ಹಾಗೇಯೇ ಇಟ್ಟಿದ್ದಾರೆ ಡೀಟೇಲ್ ಎಸ್ಟಿಮೇಟ್ಸ್ ಮಾಡದೇ ಉಳಿದಿದೆ. ಎಷ್ಟು ಸಾರಿ ಟೆಂಡರ್ ಕರೆದರೂ ಕಂಟ್ರಾಕ್ಟರ್ಸ್ ಬರುತ್ತಾ ಇಲ್ಲ. ಸರಿಯಾದ ರೇಟ್ಸ್ ಕೊಡುತ್ತಾರೋ ಇಲ್ಲವೋ ಗೊತ್ತಾಗುವುದಿಲ್ಲ. ಆದ್ದರಿಂದ ಇದಕ್ಕೆ ತಕ್ಕ ಏರ್ಪಾಡು ಮಾಡಿ ಅತಿ ಶೀಘ್ರವಾಗಿ ಕೆಲಸ ಪ್ರಾರಂಭ ಮಾಡಬೇಕು ಎಂದು ಹೇಳುತ್ತೇನೆ.

ಇನ್ನು ಡ್ರಿಂಕಿಂಗ್ ವಾಟರ್ ವೆಲ್ಸ್ ಸಹಾಯ ಮಾಡುತ್ತಿದ್ದಾರೆ. ಕೆಲವು ಕಡೆ ಬಾವಿಗಳಲ್ಲಿ ನೀರು ಬರುತ್ತಾ ಇಲ್ಲ ಅಂತಹ ಕಡೆ ನೀರಿನ ಫೆಸಿಲಿಟಿ ಕೊಡದಿದ್ದರೆ ತುಂಬಾ ಅನ್ಯಾಯವಾಗುತ್ತದೆ. 10 ಮೈಲು ಹೋದರೂ, ನೀರು ಸಿಕ್ಕುತ್ತಾ ಇಲ್ಲ. ಅಂತಹ ಪ್ರದೇಶವನ್ನು ಎಕ್ಸೆಪ್ಷನಲ್ ಕೇಸ್ ಆಗಿ ಟ್ರೀಟ್ ಮಾಡಿ ಟ್ಯೂಬ್ ವೆಲ್ಸ್‌ನ್ನು ಏರ್ಪಾಡು ಮಾಡದೇ ಇದ್ದರೆ ಜನರಿಗೆ ಕುಡಿಯುವ ನೀರು ಸಿಕ್ಕುವುದಿಲ್ಲ. ಜನರು ತುಂಬಾ ತೊಂದರೆಪಡುತ್ತಿದ್ದಾರೆ. ಅಂತಹ ಕಡೆ ಆದಷ್ಟು ತೀವ್ರವಾಗಿ ಏರ್ಪಾಡು ಮಾಡಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.ಇನ್ನು ಪ್ರೈಮರಿ ಹೆಲ್ತ್ ಯೂನಿಟ್

ಟೈಪ್‌ಡಿಸ್ಪೆನ್ಸರಿ ವಿಷಯ. ಇವುಗಳಿಗೆ ಕೊಡತಕ್ಕ ಗ್ರಾಂಟ್ ಕೊಡದೆ ತಾಲ್ಲೂಕ್ ಬೋರ್ಡಿಗೆ ತೊಂದರೆಯಾಗುತ್ತಾ ಇದೆ .ಇನ್ನೊಂದು ಇನ್ ಸ್ಟಿಟ್ಯೂಷನ್ ಓಪನ್ ಮಾಡಬೇಕಾದರೆ ಹಿಂದಿನ ಗ್ರಾಂಟ್ ಸಿಕ್ಕಲಿಲ್ಲ ಮುಂದೆ ಏನು ಮಾಡುವುದು ಎನ್ನುವ ಪರಿಸ್ಥಿತಿ ಕಂಡು ಬರುತ್ತದೆ. ಆದುದರಿಂದ ತತ್‌ಕ್ಷಣ ಸರ್ಕಾರದ ಸಹಾಯಧನವನ್ನು ಪ್ರತಿವರ್ಷ ಸರಿಯಾಗಿ ಕೊಡುವುದಕ್ಕೆ ಏರ್ಪಾಡು ಮಾಡಬೇಕು ಎಂದು ಸಲಹೆ ಮಾಡುತ್ತೇನೆ.ಇನ್ನು ರಾಯಚೂರು ಜಿಲ್ಲೆಯ ವಡ್ಡರಹಳ್ಳಿಯಲ್ಲಿ ಗ್ರಾಮ ಸೇವಕಿಯರ ತರಬೇತಿ ಕೇಂದ್ರ ಇದೆ. ಈ ಕೇಂದ್ರವನ್ನು ಮುಚ್ಚುತ್ತಾರೆಂದು ತಿಳಿದುಬಂದಿದೆ. ಸರ್ಕಾರದ ವಕ್ರ ದೃಷ್ಟಿ ಮಹಿಳೆಯರ ಮೇಲೆ ಏತಕ್ಕೆ ಬಿತ್ತೋ ಗೊತ್ತಿಲ್ಲ ಗಂಗಾವತಿ ಕಡೆ ಹೋದರೆ ಒಬ್ಬ ಗ್ರಾಮ ಸೇವಕಿಯರೂ ಕೆಲಸ ಮಾಡುತ್ತಾ ಇಲ್ಲ ಹೀಗಿರುವಾಗ ಇರುವ ಹೆಣ್ಣು ಮಕ್ಕಳ ತರಬೇತಿ ಕೇಂದ್ರವನ್ನು ಮುಚ್ಚಿದರೆ ಅದರಿಂದ ತುಂಬಾ ತೊಂದರೆಯಾಗುತ್ತದೆ. ಹಿಂದುಳಿದ ಪ್ರದೇಶದಲ್ಲಿ ಮಹಿಳೆಯರ ಕಾರ್ಯಕ್ರಮ ಏರ್ಪಾಡು ಮಾಡುವ ಸಲುವಾಗಿ ಗ್ರಾಮ ಸೇವಕಿಯರನ್ನು ಎಲ್ಲಾ ಬ್ಲಾಕ್‌ಗಳಿಗೂ ಪೋಸ್ಟ್ ಮಾಡುವ ವ್ಯವಸ್ಥೆ ಮಾಡಬೇಕು ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಕೊನೆಯದಾಗಿ ಅತಿ ಮುಖ್ಯವಾದ ತುಂಗಭದ್ರ ಡೆವಲಪ್‌ಮೆಂಟ್‌ವಿಷಯದಲ್ಲಿ ಒಂದೆರಡು ಮಾತನ್ನು ಹೇಳುತ್ತೇನೆ ತುಂಗಾಭದ್ರಾ ಬೋರ್ಡ್ ಏನು ಇದೆ ಅದರ ಡೆವಲಪ್‌ಮೆಂಟ್ ಕಾರ್ಯಗಳು ಬೋರ್ಡಿನ್ ಮೂಲಕ ನಡೆಯುತ್ತಾ ಇದೆ.ನಮ್ಮಲ್ಲಿ ಯಾವ ಡೆವಲಪ್ ಮೆಂಟ್ ಆಗಿದೆ ಎಂದು ದಯವಿಟ್ಟು ಹೇಳಿ. ಡೆವಲಪ್‌ಮೆಂಟ್ ಮಾಡುವ ಕಾಲಕ್ಕೆ ಸರ್ಕಾರದವರು ಒಂದೇ ಸಾರಿ 12 ಸಾವಿರ ಎಕರೆಯನ್ನು ಬೇರೆಯವರಿಗೆ ಕೊಡುತ್ತಾ ಇದೆ. ಇದ್ದಾರೆ. 5ಸಾವಿರ ಎಕರೆಯನ್ನು ಪಾಕೀಸ್ಥಾನದ ರೆಫ್ಯೂಜೀಸ್‌ಗೆ ಕೊಡುತ್ತಾ ಇದ್ದಾರೆ ಕೇಂದ್ರ ಸರ್ಕಾರದ ಕೆಲವು ಆಫೀಸರು ಹೋಗಿ ಪಾಕೀಸ್ಥಾನದ ರೆಫ್ಯೂಜೀಸ್‌ಗೋಸ್ಕರ ಅಲ್ಲಿರತಕ್ಕ ರೈತರಿಂದ 5ಸಾವಿರ ಎಕರೆಯನ್ನು ತೆಗೆದು ಕೊಂಡು ಅವರನ್ನು ಲ್ಯಾಂಡ್‌ಲೆಸ್ ಮಾಡಿದ್ದಾರೆ ಅದರ ಜೊತೆಗೆ ಮತ್ತೆ ಪಾಕೀಸ್ಥಾನದ ರೆಫ್ಯೂಜೀಸ್‌ಗೆ ಸ್ಟೇಟ್ ಫಾರಂ ಮಾಡಬೇಕೆಂದು 7 ಸಾವಿರ ಎಕರೆ ಅಕ್ವೆರ್ ಮಾಡಿಕೊಂಡಿದ್ದಾರೆ. ಅವರು ಹೀಗೆ ಒಂದೇ ಸಲ ಇಷ್ಟು ಜಮೀನನ್ನು ಆಕ್ವೈರ್ ಮಾಡಿಕೊಳ್ಳುತ್ತಿದ್ದಾರೆ. ಒಂದು ಸಾವಿರ ಎರಡು ಸಾವಿರ ಎಕರೆ ಎಕ್ಸಪಿರಿಮೆಂಟ್ ಮಾಡುವುದಕ್ಕೆ ಸಾಲುವುದಿಲ್ಲವೇ ಈಗ ಇರತಕ್ಕ ಸ್ಟೇಟ್‌ಫಾರಂನಲ್ಲಿ ಎಷ್ಟು ಜಾಗ್ರತೆ ಕಲಸ ಆಗುತ್ತಿದೆ ಎನ್ನುವುದು ರೈತಾಪಿ ಜನರಿಗೆ ಗೊತ್ತಿದೆ ಎಷ್ಟೇ ಸಿಬ್ಬಂದಿ ಮತ್ತು ಮೆಷನರಿ ತಂದರೂ ಅಷ್ಟು ಎಕರೆ ಜಮೀನನ್ನು ಅಭಿವೃದ್ಧಿ ಮಾಡಬೇಕಾದರೆ 100, 200 ವರ್ಷಗಳು ಬೇಕಾಗುತ್ತದೆ. ಅಲ್ಲಿರತಕ್ಕ ರೈತರನ್ನು ಲ್ಯಾಂಡ್‌ಲೆಸ್ಮಾಡಿ ದುಡ್ಡು ಕೊಟ್ಟು ಜಮೀನನ್ನು ಆಕ್ವೈರ್ ಮಾಡಿಕೊಂಡು ರಷ್ಯಾದವರು ಮೆಷಿನರಿ ಕೊಡುತ್ತಾರೆ; ನಾವು ಸ್ಟೇಟ್ ಫಾರಂ ಮಾಡುತ್ತೇವೆ ಎಂದು ಹೇಳಿದರೆ ರೈತರಿಗೆ ಏನು ಅನುಕೂಲ ಮಾಡಿದಂತಾಯಿತು? ಈ ರೀತಿ ಜನರ ಒಪ್ಪಿಗೆ ಇಲ್ಲದ ಸ್ಕೀಮನ್ನು ಹಾಕಿಕೊಂಡು ಅವರ ಮೇಲೆ ಹೇರಿ ಅವರ ಜಮೀನನ್ನು ಆಕ್ವೆರ್‌ಮಾಡಿ ಕೊಂಡರೆ ಹೇಗೆ? ಹೀಗೆ 12 ಸಾವಿರ ಎಕರೆಯನ್ನು ಒಂದೇ ಗ್ರಾಮದಲ್ಲಿ ಜನರಿಂದ ತೆಗೆದುಕೊಂಡರೆ ಅದರಿಂದ ಪ್ರಯೋಜನ ಏನು? ಹಾಗೆ

ಡೆವಲಪ್‌ಮೆಂಟ್ ಮಾಡುವ ಕಾಲಕ್ಕೆ ಸದಸ್ಯರಾಗಿದ್ದಂತಹ ನಮ್ಮಂತಹವರಿಗೆ ತಿಳಿಸಿ, ಇದು ಸೂಕ್ತವೇ, ಮಾಡೋಣವೇ, ಬಿಡೋಣವೇ ಎಂದು ನಮ್ಮನ್ನು ಕಾನ್‌ಫಿಡೆನ್ಸ್‌ಗೆ ತೆಗೆದುಕೊಂಡು ಮಾಡಿ. ಅದು ಬಿಟ್ಟು ನೀವು ನಿಮ್ಮಷ್ಟಕ್ಕೆ ಮಾಡಬಾರದು ಎಂದು ಹೇಳುತ್ತೇನೆ. ಇಷ್ಟೊಂದು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

1968, ಏಪ್ರಿಲ್ 8ರಂದು ಜರುಗಿದ 3ನೇ ಅಧಿವೇಶನದಲ್ಲಿ ಲೆವಿ ಕಲೆಕ್ಷನ್ ಕುರಿತಂತೆ ಆಗಿರುವ ಲೋಪದೋಷ ಮತ್ತು ತ್ವರಿತ ಗತಿಯಲ್ಲಿ ಸುಧಾರಣೆಗೊಳಿಸುವ ದಿಸೆಯಲ್ಲಿ ಸರ್ಕಾರಕ್ಕೆ ಸಲಹೆ ಸೂಚನೆ ನೀಡುವ ಸುದೀರ್ಘವಾದ ಭಾಷಣ ಇವರ ವಿಷಯ ಗ್ರಹಿಕೆ ಮತ್ತು ಮಂಡಿಸುವ ಸರಳ ಕನ್ನಡ ಗಮನ ಸೆಳೆಯದೇ ಇರಲಾರದು ಈಗ ನೋಡೋಣ.

ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ).- ಮಾನ್ಯ ಅಧ್ಯಕ್ಷರೇ, ಈಗ ನಮ್ಮ ಮುಂದಿರತಕ್ಕ ಆಹಾರಕ್ಕೆ ಸಂಬಂಧಪಟ್ಟ ಬೇಡಿಕೆಗಳನ್ನು ಸಂಪೂರ್ಣವಾಗಿ ಅನುಮೋದಿಸುತ್ತಾ ಸರ್ಕಾರದ ಮುಂದೆ ಕೆಲವು ಸಲಹೆಗಳನ್ನು ಇಡಬೇಕೆಂದು ನಾನು ಅಭಿಪ್ರಾಯಪಟ್ಟಿದ್ದೇನೆ. ಲೆವಿ ಕಲೆಕ್ಷನ್ ವಿಚಾರದಲ್ಲಿ ಆಗತಕ್ಕಂಥ ಅನ್ಯಾಯಗಳನ್ನು ಈಗಾಗಲೇ ಮಾನ್ಯ ಸದಸ್ಯರನೇಕರು ಪ್ರಸ್ತಾಪ ಮಾಡಿದ್ದಾರೆ. ನಾನಾದರೂ ಕೂಡ ಹೆಚ್ಚು ಹೆಚ್ಚು ಬೆಳೆಯತಕ್ಕಂಥ ರೈತಳಾಗಿ ನನ್ನ ಅನುಭವಕ್ಕೆ ಬಂದಂಥ ಒಂದು ಸತ್ಯಾಂಶವನ್ನು ತಮ್ಮ ಮುಂದೆ ಹೇಳುತ್ತೇನೆ. ಈಗ ನಮ್ಮ ರಾಜ್ಯದಲ್ಲಿ ಸರ್ಕಾರದವರು ಲೆವಿ ಪದ್ಧತಿಯನ್ನು ಏನು ಜಾರಿಗೆ ತಂದಿದ್ದಾರೆ ಇದು ರೈತರನ್ನು ಹೀಯಾಳಿಸತಕ್ಕಂಥ ಪದ್ಧತಿ ಎಂದು ಹೇಳಬಹುದು ಒಂದೂ ಕಡೆ ಸರ್ಕಾದವರು ಹೆಚ್ಚು ಆಹಾರವನ್ನು ಬೆಳೆಯಿರಿ ಎಂದು ಹೇಳುತ್ತಾರೆ ಆ ರೀತಿ ಬೆಳೆಯತಕ್ಕಂಥ ರೈತರಿಗೆ ಸಮಾಜದಲ್ಲಿ ಏನಾದರೂ ಮಾನ ಮರ್ಯಾದೆ ಇದೆಯೇ ಎನ್ನುವ ಪ್ರಸಂಗಕ್ಕೆ ಹೋಗಿದೆ ನಾವು ಬೆಳೆಯತಕ್ಕದ್ದನ್ನು ಇನ್ನೊಬ್ಬರಿಗೆ ಕೊಡುವುದಕ್ಕೆ ಒಪ್ಪಿದ್ದೇವೆ. ಈಗ ತಂದಿರತಕ್ಕ ಲೆವಿ ಪದ್ಧತ ಏನಿದೆ ಇದಕ್ಕೆ ಸಹಕಾರ ಮಾಡಬೇಕು ಎನ್ನುವ ಅಭಿಪ್ರಾಯ ನಮಗೂ ಇದೆ. ಆದರೆ ತಮ್ಮ ಆಫೀಸರುಗಳು ಅಧಿಕಾರಿಗಳು ಮಾಡತಕ್ಕಂಥ ಅನ್ಯಾಯಗಳನ್ನು ತಮ್ಮ ಗಮನಕ್ಕೆ ತಂದಾಗ ಅವುಗಳನ್ನು ಸರಿಪಡಿಸಿದಿದ್ದರೆ ಸಮಾಜದಲ್ಲಿ ರೈತರಿಗೆ ತುಂಬಾ ಅನಾನುಕೂಲವಾಗುತ್ತದೆ ಎಂದು ನಾನು ತಮ್ಮಲ್ಲಿ ಹೇಳಬೇಕಾಗಿದೆ. ಒಂದು ಎಕರೆಯಲ್ಲಿ ಬೆಳೆ ಬೆಳೆಯತಕ್ಕಂಥ ರೈತರಿಂದಲೂ ಲೆವಿಯನ್ನು ವಸೂಲು ಮಾಡಿದಂತಹ ನಿದರ್ಶಗಳಿವೆ. ಒಂದು ಎಕರೆಯಲ್ಲಿ ಬೆಳೆಯತಕ್ಕಂಥ ರೈತರಿಂದ 2.3 ಚೀಲ ಭತ್ತವನ್ನು ವಸೂಲು ಮಾಡಿದ್ದಾರೆ. 40 ಕ್ವಿಂಟಾಲ್ ಭತ್ತ ಇದ್ದರೆ ಸ್ಟಾಕ್ ಡಿಕ್ಲರೇಷನ್ ಮಾಡಬೇಕೆಂದು ಹೇಳಿದ್ದಾರೆ. 20 ಕ್ವಿಂಟಾಲ್ ಇದ್ದರೂ ಸ್ಟಾಕ್ ಡಿಕ್ಲರೇಷನ್ ಮಾಡಿಲ್ಲ ಎಂದು ಹೇಳಿ ಅದನ್ನು ಜಪ್ತಿ ಮಾಡಿ ಅವರಲ್ಲಿ 50 ಪರ್ಸೆಂಟ್ ತೆಗೆದುಕೊಂಡು ಹೋದಂತಹ ನಿದರ್ಶನಗಳು ಇವೆ. ಲೆವಿ ವಸೂಲು ಮಾಡುವ ಕಾಲಕ್ಕೆ ರೈತ ಬೆಳೆದಂಥ ಮಾಲನ್ನು ಕಣದಲ್ಲಿಯೇ, ಅದು ಹಾರ್‌ವೆಸ್ಟ್ ಆದಕೂಡಲೇ ತಹಶೀಲ್ದಾರರು ಮತ್ತು ಇತರ ಅಧಿಕಾರಿಗಳು ಬಂದು ಮಾಲನ್ನು ಅಟಾಚ್ ಮಾಡಿ ಅದನ್ನು ವೊಯ್ಯುತ್ತಿದ್ದಾರೆ. ಆ

ಸಂದರ್ಭದಲ್ಲಿ ನಾವು ರೈತರು ಆ ಅಧಿಕಾರಿಗಳನ್ನು ನೀವು ನಮ್ಮನ್ನು ಲೆವಿ ಕೊಡಿ ಎಂದು ಕೇಳಲೇ ಇಲ್ಲ ನಾವೇನು ಓಡಿ ಹೋಗುತ್ತೇವೆಯೇ, ಬೆಳೆ ಬೆಳೆದಂತಹ ರೈತನಿಗೆ ಲೆವಿ ಕೊಡಬೇಕು ಎನ್ನುವುದು ಗೊತ್ತಿರುವುದಿಲ್ಲವೇ? ಲೆವಿ ಕೊಡುತ್ತೇವೆ, ಏತಕ್ಕೆ ಹಾಗೆ ಭತ್ತವನ್ನು ಪೊಯ್ದಿದ್ದೀರಿ ಎಂದು ಕೇಳಿದರೆ, ಕಂದಾಯ ಕೊಡಬೇಕು, ಮತ್ತು ವಾಟರ್ ರೇಟು ಕೊಡಬೇಕು, ಅದಕ್ಕೋಸ್ಕರ ಭತ್ತವನ್ನು ತೆಗೆದುಕೊಂಡು ಬಂದಿದ್ದೇವೆ ಎಂದು ಹೇಳುತ್ತಾರೆ. ಈ ರೀತಿ ಅಧಿಕಾರಿಗಳು ರೈತರಿಗೆ ಹೆರಾಸ್ ಮಾಡುತ್ತಿದ್ದಾರೆ. ಇದರಿಂದ ಅಧಿಕಾರಿಗಳಿಗೆ, ಆಫೀರುಗಳಿಗೆ ಒಂದು ಡಿಸ್‌ಕ್ರಿಷನರಿ ಪವರ್ಸ್ ಕೊಟ್ಟಹಾಗಾಗುತ್ತದೆ. ತಮಗೆ ಈ ಸಂದರ್ಭದಲ್ಲಿ ಒಂದು ನಿದರ್ಶನವನ್ನು ಹೇಳುತ್ತೇನೆ. ಒಂದು ದಿವಸ ಒಬ್ಬ ರೈತನಿಂದ 400 ಪಲ್ಲ ಬತ್ತವನ್ನು ತಹಶೀಲ್ದಾರರು ಪೊಯ್ದಿದ್ದರು. ನಾನು ಲೆವಿ ಕೊಟ್ಟಿದ್ದೇನೆ. ಹೇಗೆ ನನ್ನ ಬತ್ತವನ್ನು ತೆಗೆದುಕೊಂಡು ಹೋದಿರಿ ಎಂದು ಕೇಳಿದ್ದಕ್ಕೆ, ನೀವು ಕಂದಾಯವನ್ನು ಕೊಟ್ಟಿಲ್ಲ ಎಂದು ಹೇಳಿದರು. ಆಮೇಲೆ ಕಂದಾಯದ ಬಾಕಿ ಎಷ್ಟು ಕೊಡಬೇಕೆಂಬುದನ್ನು ಲೆಕ್ಕಾಚಾರ ಮಾಡಿಕೊಂಡು ಉಳಿದಂತಹ ಬತ್ತವನ್ನು ವಾಪಸ್ಸು ತೆಗೆದುಕೊಂಡು ಹೋದರು. ಈ ರೀತಿ ಅಧಿಕಾರಿಗಳು ರೈತರನ್ನು ಅಸಹನೀಯ ರೀತಿಯಲ್ಲಿ ಟ್ರೀಟ್ ಮಾಡುತ್ತಿದ್ದಾರೆ. ಇದರಿಂದ ರೈತರಿಗೆ ಬೇಸರವಾಗಿದೆ. ನಮ್ಮಲ್ಲಿ ಬೆಳೆಯನ್ನು ಬೆಳೆದಂತಹ ರೈತರು ಸರ್ಕಾರಕ್ಕೆ ಕೊಡಬೇಕಾದ ಲೆವಿಯನ್ನು ಸರ್ಕಾರಕ್ಕೆ ಕೊಟ್ಟಿದ್ದಾರೆ. ನಮ್ಮಲ್ಲಿ ಕೆಲಸ ಮಾಡತಕ್ಕ ನೂರಾರು ಜನ ಕೂಲಿಗಾರರನ್ನು ನಾವೇ ರೈತರೇ ಪೋಷಣೆ ಮಾಡಬೇಕಾಗಿದೆ. ಬೆಳೆದಂತಹ ಕಾಳನ್ನು ರೈತರೇ ತಿನ್ನುವುದಿಲ್ಲ. ಬತ್ತವನ್ನು ತುಂಬಿದಂತ ಹಗೇವುಗಳೇ ತಿನ್ನುವುದಿಲ್ಲ, ಎಂಬುದನ್ನು ಸರ್ಕಾರದವರು ತಿಳಿದುಕೊಳ್ಳಬೇಕು. ರೈತರು ಎಷ್ಟೇ ಬೆಳೆದರೂ ಕೂಡ ಅದು ಇನ್ನೊಂದು ರೀತಿಯಲ್ಲಿ ಜನಗಳಿಗೆ ಹಂಚಿಕೆಯಾಗುತ್ತದೆ. ಆದ್ದರಿಂದ ಮಾನ್ಯ ಮಂತ್ರಿಗಳಲ್ಲಿ ನಾನು ವಿನಂತಿ ಮಾಡಿಕೊಳ್ಳುತ್ತೇನೆ, ಇಂಥಾ ಅನ್ಯಾಯಗಳು ನಡೆಯುತ್ತಿವೆ ಎಂದು ಅವುಗಳನ್ನು ಮಾನ್ಯ ಮಂತ್ರಿಗಳ ಗಮನಕ್ಕೆ ತರುತ್ತಿದ್ದೇನೆ. ಅವುಗಳನ್ನು ಮಾನ್ಯ ಮಂತ್ರಿಗಳು ವಿಚಾರಣೆ ಮಾಡಿ ಅನ್ಯಾಯ ಮಾಡತಕ್ಕ ಅಧಿಕಾರಿಗಳಿಗೆ ಸರಿಯಾದ ಪಾಠವನ್ನು ಕಲಿಸಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಮೂರನೆಯ ವಿಷಯ ಎಂದರೆ ಲೆವಿ ಡಿಮ್ಯಾಂಡ್ ರೆವಿನ್ಯೂ ಆಫೀಸರೇ ತಯಾರು ಮಾಡಲಿ, ಶಾನುಭೋಗರೇ ತಯಾರುಮಾಡಲಿ ಅದರ ಪ್ರಕಾರ ಲೆವಿಯನ್ನು ರೈತರು ಕೊಟ್ಟಿದ್ದಾರೆ. ತುಂಗಭದ್ರಾ ಅಯಕಟ್ಟು ಏರಿಯಾದಲ್ಲಿ ಮಳೆ ಬಿದ್ದ ಕೂಡಲೇ ಇನ್ನೊಂದು ಬೆಳೆಗೆ ಹಣವನ್ನು ಇನ್‌ವೆಸ್ಟ್ ಮಾಡುವ ದೃಷ್ಟಿಯಿಂದ ಡಿ ಫಾರಂ ಕೊಟ್ಟ ಮೇಲೆ ಉಳಿದಂತಹ ಧಾನ್ಯವನ್ನು ಕಣದಲ್ಲಿಯೇ ಮಾರಾಟ ಮಾಡುತ್ತಾರೆ. ಡ್ರೈಕ್ರಾಪ್ ಆಗಲೀ, ವೆಟ್ ಕ್ರಾಪ್ ಆಗಲಿ ಅದೇ ರೀತಿ ಮಾಡುತ್ತಾರೆ. ಏತಕ್ಕೆಂದರೆ ಮುಂದಿನ ಬೆಳೆಯನ್ನು ಬೆಳೆಯಬೇಕಾದರೆ ದುಡ್ಡು ಬೇಕಾಗುತ್ತದೆ. ನಮ್ಮಲ್ಲಿ ಸೇಂಗಾ ಬೀಜವನ್ನು ಬಿತ್ತುವಾಗ ಅದಕ್ಕೂ ಸಹ ದುಡ್ಡು ಬೇಕಾಗುತ್ತದೆ. ನಮ್ಮಲ್ಲಿ ತುಂಗಭದ್ರಾ ಸೇತುವೆಯ ಹತ್ತಿರ ಕೆಲವು ಅಧಿಕಾರಿಗಳು ನಿಂತುಕೊಂಡು ಅಲ್ಲಿ ಬರತಕ್ಕ ಬತ್ತದ ಲಾರಿಗಳಲ್ಲಿ 10-15 ಚೀಲ ಬತ್ತವನ್ನು ತೆಗೆದುಕೊಳ್ಳುತ್ತಿದ್ದಾರೆ. ರೈತರು ಲೆವಿ ಕೊಟ್ಟಂತಹ

ಡಿ ಫಾರಂ ತೋರಿಸಿದರೂ ಕೂಡ ಬಿಡುವುದಿಲ್ಲ. ಹೀಗೇಕೆ ಮಾಡುತ್ತೀರಿ ಎಂದು ನಾವೇನಾದರೂ ಕೇಳಿದರೆ ನಮ್ಮದು ಟಾರ್ಗೆಟ್ ಫುಲ್‌ಫಿಲ್ ಆಗಿಲ್ಲ, ಅದಕ್ಕೋಸ್ಕರ ಈ ರೀತಿ ವಸೂಲು ಮಾಡುತ್ತಿದ್ದೇವೆ ಎಂದು ಹೇಳುತ್ತಾರೆ. ತುಂಗಭದ್ರಾ ಏರಿಯಾದಲ್ಲಿ ಕೆನಾಲ್ ಬ್ರೀಚಾಗಿ ರೈತರ ಗದ್ದೆಗಳಿಗೆ ಬೆಳೆಯಾಗುವ ಕಾಲಕ್ಕೆ ಸರಿಯಾಗಿ ನೀರು ಸಪ್ಲೈ ಆಗಲಿಲ್ಲ. ಒಳ್ಳೆ ಸರಿಯಾದ ಸಮಯದಲ್ಲಿ ಒಂದೆರಡು ಸಾರಿ 15-20 ದಿವಸ ಗದ್ದೆಗಳಿಗೆ ನೀರುಬರದೆ ತೊಂದರೆಯಾಗಿ ಬೆಳೆ ಸ್ವಲ್ಪ ಕಡಿಮೆ ಕೂಡ ಆಯಿತು. ಈ ಹಿಂದೆ ಮಾನ್ಯ ಮುಖ್ಯಮಂತ್ರಿಗಳು ಆ ಪ್ರವೇಶಕ್ಕೆ ಪ್ರವಾಸ ಬಂದಿದ್ದಾಗ ಈ ವಿಚಾರವನ್ನು ನಾವು ಅವರ ಗಮನಕ್ಕೆ ತಂದು ನಮಗೆ ಅನ್ಯಾಯವಾಗಿದೆ. ಆದ್ದರಿಂದ ನಮಗೆ ಲೆವಿ ಮತ್ತು ವಾಟರ್ ರೇಟಿನಲ್ಲಿ ಸ್ವಲ್ಪ ರಿಯಾಯ್ತಿ ಕೊಡಬೇಕೆಂದು ಕೇಳಿಕೊಂಡಿದ್ದರ ಸಲುವಾಗಿ ಕೆಲವು ರಿಯಾಯ್ತಿಗಳನ್ನು ಕೊಡುತ್ತೇವೆ ಎಂದು ಹೇಳಿದ್ದರು. ಆದರೆ ಅವರ ಮಾತಿನಂತೆ ರೈತರಿಗೆ ಆ ರಿಯಾಯ್ತಿಯನ್ನು ಕೊಡಲಿಲ್ಲ. ಸಿಂಧನೂರು ತಾಲ್ಲೂಕಿನಲ್ಲಿ ಒಬ್ಬೊಬ್ಬ ರೈತರು ಒಂದು ಚೀಲ ಎರಡು ಚೀಲ, 3 ಚೀಲಕ್ಕಿಂತ ಹೆಚ್ಚಿಗೆ ಬೆಳೆದಿಲ್ಲ. ಮಾನ್ಯ ಆಹಾರ ಮಂತ್ರಿಗಳನ್ನು ಕೇಳಿದರೆ ಬೆಳೆದರೆ ಮಾತ್ರ ಲೆವಿ ತೆಗೆದುಕೊಳ್ಳುತ್ತೇವೆ ಎಂದು ಹೇಳಿದರು. ತಾಲ್ಲೂಕು ಬೋರ್ಡ್ ಪ್ರೆಸಿಡೆಂಡರು, ತಹಶೀಲ್ದಾರರು, ಪಂಚಾಯ್ತಿ ಸೆಕ್ರೆಟರಿಗಳು ಎಲ್ಲರೂ ಕಲೆತು ಮಂತ್ರಿಗಳಿಗೆ ಅಪೀಲು ಕೊಟ್ಟಾಗ ಆ ಅಪೀಲನ್ನು ಕನ್‌ಸಿಡರ್ ಮಾಡುತ್ತೇವೆ ಎಂದು ಹೇಳಿದ್ದರು. ಆದರೆ ಯಾವ ಒಂದು ಅಪೀಲನ್ನೂ ಕನ್‌ಸಿಡರ್ ಮಾಡಿದಹಾಗೆ ಕಾಣಲಿಲ್ಲ. ಲೆವಿಕೊಡದಿದ್ದರೆ ಪೊಲೀಸಿಗೆ ಕಂಪ್ಲೆಂಟ್ ಕೊಟ್ಟು ಲೆವಿ ವಸೂಲು ಮಾಡುತ್ತೇವೆಂದು ಅಧಿಕಾರಿಗಳು ರೈತರಿಗೆ ಹೇಳುತ್ತಾರೆ. ನಮಗೆ ಅನ್ಯಾಯವಾಗಿದೆ ರಿಯಾಯಿತಿ ಕೊಡಿ ಎಂದು ರೈತರು ಅಷ್ಟೇ ವಿಧವಾಗಿ ಸರ್ಕಾರದವರನ್ನು ಕೇಳಿಕೊಂಡರೂ ಕೂಡ ಲೆವಿ ವಸೂಲು ಮಾಡುವುದನ್ನು ಬಿಡಲಿಲ್ಲ. ಪೊಲೀಸಿಗೆ ಕಂಪ್ಲೆಂಟ್ ಕೊಟ್ಟು ರೈತರಿಗೆ ಹೆರಾಸ್ ಮಾಡಿ ರೈತರಿಂದ ಲೆವಿ ಮಾಡಲು ಮಾಡುವುದಾದರೆ ಅದಕ್ಕಿಂತ ಶಿಕ್ಷೆ ರೈತರಿಗೆ ಮತ್ತೊಂದಿಲ್ಲ ಎಂದು ಹೇಳಬಹುದು. ಮಾನ್ಯ ಮಂತ್ರಿಗಳು ದಯವಿಟ್ಟು ರೈತರಿಗೆ ಪ್ರೊಟೆಕ್ಷನ್ ಕೊಡಬೇಕು. ನಾನು ಅನುಭವದಿಂದ ಈ ವಿಷಯವನ್ನು ಮಾನ್ಯ ಮಂತ್ರಿಯವರ ಗಮನಕ್ಕೆ ತರುತ್ತಿದ್ದೇನೆ. ಇದರ ಬಗ್ಗೆ ತನಿಖೆ ಮಾಡಿ ಸಂಬಂಧಪಟ್ಟವರ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕು. ಗಂಗಾರತಿಯಲ್ಲಿ ಲೆವಿ ಕೊಟ್ಟಿದ್ದಾರೆ. ಸಿಂದಗಿಯಲ್ಲಿ ಬೆಳೆ ಆಗಿಲ್ಲ. ಅಂಥಾ ಪ್ರದೇಶದಲ್ಲಿ ಕೂಡ ರೈತರನ್ನು ಹೆದರಿಸಿ ಪೊಲೀಸಿಗೆ ಕಂಪ್ಲೆಂಟ್ ಕೊಡುತ್ತೇವೆಂದು ಹೇಳಿ ಅವರಿಂದ ಎರಡು ಚೀಲ, ಮೂರು ಚೀಲ ಬತ್ತವನ್ನು ರೈತರಿಂದ ವಸೂಲು ಮಾಡಿದ್ದಾರೆ. ನಮ್ಮ ತುಂಗಭದ್ರಾ ಏರಿಯಾದಲ್ಲಿ ಎಲ್ಲೆಲ್ಲಿ ಬೆಳೆಯಾಗಿದೆಯೋ ಅಂಥಾ ಕಡೆ ರೈತರು ಲೆವಿಯನ್ನು ಕೊಟ್ಟಿದ್ದಾರೆ. ಆದರೆ ಬೆಳೆ ಆಗದೇ ಇರುವ ಕಡೆ ರೈತರನ್ನು ಹೆದರಿಸಿ ಪೊಲೀಸಿಗೆ ಕಂಪ್ಲೆಂಟ್ ಕೊಡುತ್ತೇವೆಂದು ಹೇಳಿ ಲೆವಿ ವಸೂಲು ಮಾಡಿದ್ದಾರೆ. ಅಂಥಾ ಕೇಸುಗಳನ್ನು ವಿಚಾರಣೆ ಮಾಡಿ ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ನಾನು ಮಾನ್ಯ ಮಂತ್ರಿಗಳವರಲ್ಲಿ ಸಲಹೆ ಮಾಡುತ್ತೇನೆ.

ಗ್ರಾಮಾಂತರ ಪ್ರದೇಶಗಳಲ್ಲಿ ಸರಿಯಾಗಿ ಸಕ್ಕರೆಯನ್ನು ಹಂಚುತ್ತಿಲ್ಲ. ಇದರಂತೆ ಹಳೆಯ ----- ಗೋಧಿ ಮತ್ತು ಜೋಳ ಇದ್ದರೆ ಅದನ್ನೇ ಜನರಿಗೆ ತೆಗೆದುಕೊಂಡು ಹೋಗಿ ಎಂದು ಹೇಳಿದೆ ಹಳೆಯ ಸ್ಟಾಕ್ ಏನಾದರೂ ಇದ್ದರೆ ಕಡಿಮೆ ಬೆಲೆಯಲ್ಲಿ ಅದನ್ನು ಡಿಸ್‌ಪೋಸ್ ಮಾಡದೇ ಒಳೆಯ ಮಾಲನ್ನು ಜನರಿಗೆ ಹಂಚುವುದಕ್ಕೆ ವ್ಯವಸ್ಥೆ ಮಾಡಬೇಕೆಂದು ಸರ್ಕಾರದವರಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ಬಿ.ಡಿ. ಜತ್ತಿ:- ಈಗ ಇರುವುದು ಹೊಸ ಸ್ಟಾಕ್, ಹಳೆಯ ಸ್ಟಾಕ್ ಇಲ್ಲ.

ಶ್ರೀಮತಿ ಬಸವರಾಜೇಶ್ವರಿ:- ಹಳೆಯ ಸ್ಟಾಕನ್ನು ದನಗಳಿಗೆ ಉಪಯೋಗಿಸಲು ಕಡಿಮೆ ದರದಲ್ಲಿ ಕೊಟ್ಟುಬಿಡಿ. ಹಳೆಯ ಸ್ಟಾಕನ್ನು ಮನುಷ್ಯರಿಗೆ ಹಂಚುವುದರಿಂದ ಅವರ ಪ್ರಕೃತಿ ಕೆಡಬಹುದೆಂದು ಸಲಹೆ ಕೊಡಬೇಕಾಗಿದೆ.

ಇನ್ನು ಮಾನ್ಯ ಮಂತ್ರಿಗಳು ಓಪನ್ ಮಾರ್ಕೆಟ್‌ನಲ್ಲಿ ಆಹಾರ ಧಾನ್ಯವನ್ನು ಕೊಂಡು ಇನ್ನು ಮೇಲೆ ಲೆವಿ ಪದ್ಧತಿಯನ್ನು ರದ್ದು ಮಾಡುತ್ತೇವೆಂದು ಹೇಳುತ್ತಿದ್ದಾರೆ. ಅದು ಒಳ್ಳೆಯ ಸಲಹೆಯೆಂದು ಹೇಳುತ್ತಿದ್ದೇನೆ. ಸರ್ಕಾರದವರು ಓಪನ್ ಮಾರ್ಕೆಟ್‌ನಲ್ಲಿ ಕೊಳ್ಳುವುದಾದರೆ ನಾವು ಕೊಡುವುದಕ್ಕೆ ಅಭ್ಯಂತರವಿಲ್ಲ. ಮಾರ್ಕೆಟ್ ರೇಟ್‌ನಲ್ಲಿ ಪಕ್ಕದಲ್ಲಿಯೇ ಇರುವ ಸೊಸೈಟಿಗಳಿಗೆ ಕೊಡುವುದಕ್ಕೆ ನಮಗೆ ಅನುಕೂಲವಾಗುತ್ತದೆ. ಈಗ ಸರ್ಕಾರದವರು ರೈತರಿಂದ ಲೆವಿ ರೂಪದಲ್ಲಿ ಕೊಳ್ಳುವ ದರಕ್ಕೂ ಮತ್ತು ಅದನ್ನು ಸಾಮಾನ್ಯ ಜನರಿಗೆ ಹಂಚುವ ದರಕ್ಕೂ 20 ರೂಪಾಯಿಗಳ ವ್ಯತ್ಯಾಸವಿದೆ. ಇದರಿಂದ ಯಾರಿಗೂ ಅನುಕೂಲವಾಗುತ್ತಿಲ್ಲ. ಈ ಪದ್ಧತಿಯನ್ನು ಆದಷ್ಟು ಜಾಗ್ರತೆ ತೆಗೆದುಹಾಕಬೇಕು. ಈ ರೀತಿ ತೆಗೆದುಹಾಕುವ ಬಗ್ಗೆ ನಮ್ಮ ಬೆಂಬಲವಿದೆಯೆಂದು ಹೇಳಬಯಸುತ್ತೇನೆ.

ಇನ್ನು ಸಕ್ಕರೆ ವಿಚಾರವನ್ನು ಎಲ್ಲಾ ಮಾನ್ಯ ಸದಸ್ಯರುಗಳು ಸಹ ಹೇಳಿದ್ದಾರೆ. ಇದೇ ವಿಚಾರವನ್ನು ಪದೇ ಪದೇ ಹೇಳುವುದು ಸರಿಯಲ್ಲ. ಈಗಿನ ನೀತಿ ಸರಿಯಿಲ್ಲ. ಮಾನ್ಯ ಮಂತ್ರಿಗಳು ಕೇಂದ್ರದವರು ನಮಗೆ ಕಡಿಮೆ ಕೊಡುತ್ತಿರುವುದರಿಂದ ಎಲ್ಲಾ ಕಡೆಗೂ ಹಂಚುವುದಕ್ಕೆ ಸಾಧ್ಯವಾಗುತ್ತಿಲ್ಲವೆಂದು ಹೇಳುತ್ತಿದ್ದಾರೆ. ಅರ್ಬನ್ ಏರಿಯಾಗಳಿಗೆ ಮಾತ್ರ ಸರಿಯಾಗಿ ಹಂಚಿಕೆ ಮಾಡುತ್ತೀರಿ. ಆದರೆ ರೂರಲ್ ಏರಿಯಾಗಳಿಗೆ ಅದರಲ್ಲೂ ಗ್ರಾಮಾಂತರ ಪ್ರದೇಶಗಳಿಗೆ 3-4 ತಿಂಗಳಾದರೂ ಸಹ ಒಂದು ಮೂಟೆ ಸಕ್ಕರೆಯನ್ನು ಸಹ ಹಂಚುತ್ತಿಲ್ಲ. ಪಂಚಾಯಿತಿಗಳಿಗೆ ಈ ... ಹಂಚುವುದಕ್ಕಿಂತ ಹಂಚದಿರುವುದೇ ಒಳ್ಳೆಯದೆಂದು ಹೇಳುತ್ತೇನೆ. ಸ್ವಲ್ಪ ಕೊಡುವುದಾದರೂ ಸಹ ಕಾಲಕ್ಕೆ ಸರಿಯಾಗಿ ಕೊಟ್ಟರೆ ಅನುಕೂಲವಾಗುತ್ತದೆಂದು ಹೇಳಿ ಅಧ್ಯಕ್ಷರು ಇಷ್ಟು ಮಾತನಾಡುವುದಕ್ಕೆ ಅವಕಾಶ ಕೊಟ್ಟಿದ್ದಕ್ಕೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀ ನಾಗಪ್ಪ:- ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಮಂತ್ರಿಗಳು ಮಂಡಿಸಿರತಕ್ಕಂಥ ವಿವಿಧ ಇಲಾಖೆಗಳು ಮತ್ತು ಸರ್ಕಾರಿ ವ್ಯಾಪಾರದ ಯೋಜನೆಗಳ ಮೇಲಿನ ಬಂಡವಾಳದ ವೆಚ್ಚ ಈ ಬೇಡಿಕೆಗಳನ್ನು ತೀವ್ರವಾಗಿ ವಿರೋಧಿಸುತ್ತೇನೆ ; ಮತ್ತು ಎರಡನೆಯದಾಗಿ

ಶ್ರೀಮತಿ ಬಸವರಾಜೇಶ್ವರಿಯವರು ಹೇಳಿದಂಥ ಒಂದು ವಿಷಯವನ್ನು ಮಾತ್ರ ನಾನು ಬಹಳವಾಗಿ ಸ್ವಾಗತಿಸುತ್ತೇನೆಂದು ಹೇಳಿದರೆ ತಪ್ಪಾಗಲಾರದು ಕೆಲವು ದಿನಗಳ ಹಿಂದೆ ಶ್ರೀಮಾನ್ ಜತ್ತಿಯವರು ಲೆವಿ ವಿಚಾರದಲ್ಲಿ ಇದೇ ಸಭೆಯಲ್ಲಿ ಒಂದು ಪ್ರಶ್ನೆಗೆ ಉತ್ತರ ಕೊಡುತ್ತಾ ಯಾರಾದರೂ ಲೆವಿ ಕೊಡುವ ಬಗ್ಗೆ ವಿರೋಧ ಮಾಡಿದರೆ ಅವರನ್ನು ಸಮಾಜದ್ರೋಹಿ ಎಂದು ಕರೆಯುತ್ತೇನೆಂದು ಹೇಳಿದರು.

ಶ್ರೀ ಬಿ.ಡಿ. ಜತ್ತಿ:- ಸಮಾಜದ್ರೋಹಿ ಎಂದು ನಾನು ಹೇಳಲಿಲ್ಲ. ಟ್ರಾನ್ಸ್‌ಲೇಟ್ ಮಾಡುವ ಆ ರೀತಿ ತಪ್ಪಾಗಿ ಪ್ರಿಂಟಾಗಿತ್ತು.

ಶ್ರೀ ಎಂ. ನಾಗಪ್ಪ:- ತಾವು ರಾಷ್ಟ್ರದ್ರೋಹಿ ಎಂದು ಹೇಳಲಿಲ್ಲ. ಸಮಾಜದ್ರೋಹಿ ಎಂದು ಹೇಳಿದಿರಿ ಎಂಬುದಾಗಿ ನಾನು ಹೇಳಿದದು.

ಉಪಾಧ್ಯಕ್ಷರು:- ಸಮಾಜ ವಿರೋಧಿ ಎಂಬುದು ಸರಿಯಾದ ಪದ. ಸಮಾಜದ್ರೋಹಿ ಅಲ್ಲ.

ಶ್ರೀ ಎಂ. ನಾಗಪ್ಪ:- ಸಮಾಜ ವಿರೋಧಿ ಎಂದು ಮಾನ್ಯ ಜತ್ತಿಯವರು ಆ ದಿನ ಹೇಳಿದರು. ಲೆವಿ ವಸೂಲುಮಾಡುವ ಬಗ್ಗೆ ಸರ್ಕಾರದವರು ಪೊಲೀಸಿನವರ ಸಹಾಯ ತೆಗೆದುಕೊಳ್ಳುವುದಾದರೆ ನಾವು ನೋಡುತ್ತೇವೆಂದು ಶ್ರೀಮತಿ ಬಸವರಾಜೇಶ್ವರಿಯವರು ಹೇಳಿದರು.

ಶ್ರೀಮತಿ ಬಸವರಾಜೇಶ್ವರಿ:- ನೋಡುತ್ತೇವೆಂದು ನಾನು ಹೇಳಲಿಲ್ಲ.

# ಸಾಮಾಜಿಕ ಬರಗಾಲ

ನಾಡಿಗೆಬಂದೆರಗಿದ ಬರಗಾಲ ಅಭಾವಪದ್ಧತಿ ಕುರಿತಂತೆ ಶ್ರೀಮತಿ ಬಸವರಾಜೇಶ್ವರಿಯವರು **1964**ರಲ್ಲಿ ಮಂಡಿಸಿದ ದೀರ್ಘವಾದ ಭಾಷಣ ಅವರ ಜನಪರ ನಿಲುವು–ಜನಪರ ಆಶಯಗಳಿಗೆ ಸಾಕ್ಷಿಯಾಗಿ ನಿಲ್ಲುತ್ತದೆ ಬರಗಾಲ, ಅತಿವೃಷ್ಠಿ ಮುಂತಾದವುಗಳು ಬಂದಾಗ ಕೈಗೊಳ್ಳುವ ಪರಿಹಾರ ಕ್ರಮಗಳ ಜೊತೆಗೆ ಖಾಯಂ ಫೆಮಿಲಿ ರಿಲೀಫ್ ಫಂಡ್ ಜೊತೆ ಜೊತೆಗೆ 'ಫ್ಲಡ್ ರಿಲೀಫ್‌ಫಂಡ್' ಯೋಜನೆಯನ್ನು ಜಾರಿಗೆ ತರುವುದಕ್ಕಾಗಿ ಒತ್ತಾಯಿಸುವ ಅವರ ಭಾಷಣ–ಚರ್ಚೆಯ ಪೂರ್ಣಪಾಠವನ್ನು ನೋಡೋಣ.

**ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ):-** ಸ್ವಾಮಿ ಅಧ್ಯಕ್ಷರೆ, ಇವತ್ತಿನ ದಿವಸ ನಮ್ಮ ಮುಂದಿರತಕ್ಕಂಥ ಸ್ಕೇರ್ಸಿಟಿ ವಿಚಾರವಾಗಿ ಎರಡು ವಿಷಯಗಳನ್ನು ಸರ್ಕಾರದ ಗಮನಕ್ಕೆ ತರಬೇಕೆಂದು ಹೇಳಿ ಅಪೇಕ್ಷೆ ಪಟ್ಟಿದ್ದೇನೆ.

ಕೆಲವು ಕಡೆ ಸರಿಯಾಗಿ ಮಳೆ ಬರದೇನೆ ಉಳುಮೆಯಾಗಿಲ್ಲ. ಇನ್ನು ಮಳೆ ಬಂದರೂ ಕೂಡ ಸರಿಯಾದ ಬೆಳೆ ಆಗುವ ಸಂಭವವಿಲ್ಲ. ಆದ್ದರಿಂದ ಇವತ್ತಿನ ದಿವಸ ನಮ್ಮ ದೇಶದಲ್ಲಿ ಇಂಥ ಒಂದು ಅಭಾವ ಪರಿಸ್ಥಿತಿ ಬಂದಿದೆ. ಮುಂಗಾರು ಮಳೆ ಬಹಳ ಲೇಟ್ ಆಗಿ ಬಂದಿದೆ, ಮಳೆಗಳು ಆದರೂ ಕೂಡ ಜನರಿಗೆ ಬಹಳ ತ್ರಾಸು ಆಗಿದೆ.

ಇವತ್ತಿನ ದಿವಸ ನಮ್ಮ ಸರ್ಕಾರದವರು ಕೇಂದ್ರ ಸರ್ಕಾರಕ್ಕೆ ಹೋಗಿ ಅಕ್ಕಿ ಮತ್ತು ಗೋಧಿಯನ್ನು ತಂದಿದ್ದಾರೆ. ಅದನ್ನು ವಿತರಣೆ ಮಾಡುವ ಬಗ್ಗೆ ಅನೇಕ ಸದಸ್ಯರು ತಮ್ಮ ಅಮೂಲ್ಯವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಆ ಪ್ರಕಾರವಾಗಿ ವಿತರಣೆ ಮಾಡುತ್ತಾರೆ. ಎಲ್ಲಾ ಸ್ಕೇರ್ಸಿಟಿ ಪ್ರದೇಶಗಳಿಗೂ ಬೇಕಾದಷ್ಟು ಅಕ್ಕಿ ಮತ್ತು ಗೋಧಿಯನ್ನು ಸಪ್ಲೈ ಮಾಡುತ್ತಾರೆಂದು ನಾನು ನಂಬಿದ್ದೇನೆ. ಏಕೆಂದರೆ ತಾವು ಹೆಚ್ಚು ಹೆಚ್ಚಾಗಿ ಗೋಧಿ, ಅಕ್ಕಿ ಸರಬರಾಜು ಮಾಡಿದ್ದೇ ಆದರೆ, ಜೋಳದ ಧಾರಣೆ ಕೆಲಮಟ್ಟಿಗೆ ಕಡಿಮೆಯಾಗಬಹುದು. ಅದರಿಂದ ಕೆಲಮಟ್ಟಿಗೆ ಒಳಗೆ ಹೋಗಿರತಕ್ಕಂಥ ಜೋಳ ಹೊರಕ್ಕೆ ತರುವ ಸಂಭವವಿದೆ. ಆದ್ದರಿಂದ ಅದನ್ನು ತಾವು ಜನಗಳಿಗೆ ತೀವ್ರ ಗತಿಯಿಂದ ಸರಬರಾಜು ಮಾಡುವುದಕ್ಕೆ ಪ್ರಾರಂಭ ಮಾಡಬೇಕೆಂದು ಈ ಸಂದರ್ಭದಲ್ಲಿ ತಿಳಿಸುತ್ತಾಇದ್ದೇನೆ.

ಈಗ ಶಾಶ್ವತ ಪರಿಹಾರಗಳ ಬಗ್ಗೆ ಕೆಲವು ವಿಷಯಗಳನ್ನು ಸರಕಾರದ ಗಮನಕ್ಕೆ ತರಬೇಕೆಂಬ ಇಚ್ಛೆಇದೆ. ನಾನು ಮೊದಲಿನಿಂದಲೂ ಹೇಳುತ್ತಾ ಇದ್ದೆ: ಸ್ಟೇಟ್ ಲೆವೆಲ್ಲಿನಲ್ಲಿ ಇದಕ್ಕಾಗಿ ಒಂದು ಖಾಯಂ ಫಂಡ್ ಮಾಡಬೇಕೆಂದು. ಈ ಫ್ಯಾಮಿನ್ ರಿಲೀಫ್ ಫಂಡು ಬರಗಾಲಕ್ಕೆ ಉಪಯೋಗಿಸತಕ್ಕಂಥ ಹಣವಾಗಿರಬೇಕು. ಇದರ ಜೊತೆಗೆ ಫಂಡ್ ರಿಲೀಫ್ ಫಂಡನ್ನೂ ಮಾಡಬೇಕು.

**ಶ್ರೀ ಎಂ.ವಿ.ಕೃಷ್ಣಪ್ಪ:-** ಮೂವತ್ತು ಮೂರು ಲಕ್ಷ ರೂಪಾಯಿ ಒಂದು ಫ್ಯಾಮಿನ್ ರಿಲೀಫ್ ಫಂಡ್ ಆಗುತ್ತಾ ಇದೆ.

**ಶ್ರೀಮತಿ ಬಸವರಾಜೇಶ್ವರಿ:-** ಈ ೭.ಡ್ಡು ವಗೈರೆಗೆ ಖರ್ಚು ಮಾಡತಕ್ಕಂಥ ಹಣವನ್ನೆಲ್ಲಾ ಕ್ರೋಢೀಕರಿಸಿ ಶಾಶ್ವತವಾದ ಪರಿಹಾರವನ್ನು ಕಂಡು ಹಿಡಿಯುವುದಕ್ಕೆ ತಾವು ಮಾರ್ಗ ಮಾಡಿ ಕೊಡಬೇಕು.

ತಾವು ಈಗ ನಲವತ್ತು ಕೋಟಿ ರೂಪಾಯಿಯ ಒಂದು ಯೋಜನೆಯನ್ನು ಇಂಡಿಯ ಸರಕಾರದ ಮುಂದೆ ಇಟ್ಟಿದ್ದೀರಾ ಎಂಬ ಅಭಿಪ್ರಾಯವನ್ನು ಕೊಟ್ಟಿದ್ದೀರ. ಈಗ ನೀರಾವರಿ ಇದ್ದ ಸ್ಥಳಗಳನ್ನು ಅಷ್ಟು ಸೌಕರ್ಯಗಳು ಬೇಕಿಲ್ಲ. ಎಲ್ಲೆಲ್ಲಿ ಮೈನರ್ ಇರಿಗೇಷನ್ ವರ್ಕಿಗೆ ಬಾವಿಗಳು ಬೇಕಾಗುತ್ತವೆ. ಅಲ್ಲಿ ಹೇರಳವಾಗಿ ಹಣ ಬೇಕಾಗುತ್ತದೆ. ಬಾವಿಗಳನ್ನು ನೀರಾವರಿಗೆ ಮಾಡಿಕೊಡುವುದರಿಂದ ರೈತರಿಗೆ ಬಹಳ ಮಟ್ಟಿಗೆ ಸಣ್ಣ ಸಣ್ಣ ಹಿಡುವಳಿದಾರರಿಗೆ, ಬಹಳ ಅನುಕೂಲವಾಗುತ್ತದೆ. ನಮ್ಮಲ್ಲಿ ಬಂದಿರತಕ್ಕ ಕಷ್ಟ ಎಂದರೆ ಸುಮಾರು ಎರಡು ಎಕರೆ ಇರತಕ್ಕ ಹಿಡುವಳಿದಾರರು ಬಾವಿಗೆ ಲೋನ್ ಕೇಳುವುದಕ್ಕೆ ಹೋದರೆ ಸಿಕ್ಕುವುದಿಲ್ಲ. ಇಪತ್ತಿನವರೆಗೂ ಕಂದಾಯದ ಮೇಲೆ ಇಷ್ಟು ಪಟ್ಟು ಎಂದು ಹೇಳಿ ಲೋನ್ ಕೊಡುವುದರಿಂದ ಮೂರು ಸಾವಿರ ರೂಪಾಯಿಗಳ ಲೋನ್ ಕೊಡುತ್ತೇವೆ ಎಂದು ಏನು ಹೇಳುತ್ತೀರಿ ಅದು ಬಡ ಜನರಿಗೆ ಸಿಕ್ಕುತ್ತಾ ಇಲ್ಲ. ಅದನ್ನು ಮಾರ್ಕೆಟ್ ರೇಟ್ ನಂತೆ ಕೊಡಬೇಕೆಂದು ಈ ಸಮಯದಲ್ಲಿ ಹೇಳುತ್ತೇನೆ. ಇಲ್ಲದೇ ಇದ್ದರೆ ಸಣ್ಣ ರೈತರಿಗೆ ತರಹ ಬಾವಿಗಳನ್ನು ಮಾಡಿಕೊಂಡು ತಮ್ಮ ಆರ್ಥಿಕಾಭಿವೃದ್ಧಿಯನ್ನು ಹೆಚ್ಚು ಮಾಡಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಮತ್ತು ಆಹಾರವನ್ನು ಕೂಡ ಹೆಚ್ಚಾಗಿ ಬೆಳೆಯುವುದಕ್ಕೆ ಸಾಧ್ಯವಿಲ್ಲ. ಹೆಚ್ಚು ಆಹಾರ ಬೆಳೆಯಬೇಕು ಎಂದು ಹೇಳುವುದು ಒಂದು ದೂರದ ಮಾತಾಗಿ ಉಳಿಯುತ್ತದೆ.ಸುಮಾರು ಎರಡು ಕೋಟಿ ರೂಪಾಯಿಗಳವರೆಗೂ ಐ.ಪಿ.ಸೆಟ್‌ಗಳನ್ನು ಖರೀದಿ ಮಾಡುವುದಕ್ಕೆ ಎಲೆಕ್ಟ್ರಿಸಿಟಿ ಬೋರ್ಡಿನವರಿಗೆ ಕೊಟ್ಟಿದ್ದೀರಿ. ಆದರೆ ಅದರ ವಿತರಣೆ ಮಾತ್ರ ಎಲ್ಲರಿಗೂ ಬಹಳ ಅಸಮಾಧಾನಕರವಾದ ರೀತಿಯಲ್ಲಿ ನಡೆಯುತ್ತಾ ಇದೆ. ಪವರ್ ಇದ್ದರೂ ಕೂಡ ಅವರು ವೈರ್ ಇಲ್ಲ ಅದು ಇಲ್ಲ ಇದು ಇಲ್ಲ ಎಂದು ಹೇಳುತ್ತಾ ಇದ್ದಾರೆ, ಆದ್ದರಿಂದ ಈ ವಿಷಯದಲ್ಲಿ ನನ್ನ ಸಲಹೆ ಏನೆಂದರೆ ಬ್ಲಾಕ್ ಡೆವಲಪ್‌ಮೆಂಟ್ ಆಫೀಸರುಗಳು ಬಹಳ ಮಂದಿ ಇದ್ದಾರೆ, ಅವರಿಗೆ ಅಷ್ಟಾಗಿ ಕೆಲಸವೂ ಕೂಡ ಇಲ್ಲ. ಆದ್ದರಿಂದ ಅವರನ್ನು ಈ ಟೈಂನಲ್ಲಿ ಉಪಯೋಗಿಸಿಕೊಂಡು ಪ್ರತಿ ಹಳ್ಳಿಯಲ್ಲೂ ಅವರು ತಿರುಗಾಡಿ ಎಲ್ಲಿ ಬಾವಿಗಳನ್ನು ತೆಗೆದಿದ್ದಾರೆ ಎಲ್ಲಿ ಬಾವಿಗಳಿಗೆ ಪಂಪ್ ಸೆಟ್ಟುಗಳು ಬೇಕೆನ್ನುವುದರ ಬಗ್ಗೆ ಒಂದು ಕನ್‌ಸಾಲಿಡೇಟೆಡ್ ರಿಪೋರ್ಟ್ ಕೊಟ್ಟರೆ ಒಳ್ಳೆಯದಾಗುತ್ತದೆ. ಆ ರೀತಿ ಒಂದು ರಿಪೋರ್ಟ್‌ನ್ನು ತರಿಸಿಕೊಂಡು ಪ್ರತಿ ಜಿಲ್ಲೆಗೂ ಪಂಪ್‌ಸೆಟ್ಟುಗಳನ್ನು ಒದಗಿಸುವುದಕ್ಕೆ

ಪ್ರಯತ್ನ ಮಾಡಬೇಕೆಂದು ಈ ಸಮಯದಲ್ಲಿ ಹೇಳುತ್ತೇನೆ. ಅದೂ ಅಲ್ಲದೆ ನಮ್ಮಲ್ಲಿ ಕೇವಲ ಎರೇ ಜಮೀನು ಬಹಳ ಇದೆ. ಇದರಲ್ಲಿ ಆಹಾರ ಹೆಚ್ಚಾಗಿ ಬೆಳೆಯಬೇಕು, ಜೋಳ ಹೆಚ್ಚಾಗಿ ಬೆಳೆಯಬೇಕೆಂದರೆ ನಮಗೆ ಬಂದಿರುವ ಕಷ್ಟ ಎಂದರೆ ಗೊಬ್ಬರಕ್ಕಿಂತ ಹೆಚ್ಚಾಗಿ ಗರಿಕೆ ಒಂದು ದೊಡ್ಡ ಪ್ರಶ್ನೆಯಾಗಿದೆ.ಎಲ್ಲಿಯವರೆಗೆ ಈ ಗರಿಕೆಯನ್ನು ಇರ್ಯಾಡಿಕೇಟ್ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲವೊ ಅದುವರೆಗೆ ಎಷ್ಟು ಬೆಳೆಯಬೇಕೆಂದು ಅಪೇಕ್ಷೆ ಪಡುತ್ತೇವೆಯೋ ಅಷ್ಟು ಬೆಳೆಯುವುದಕ್ಕೆ ಸಾಧ್ಯವಿಲ್ಲದ ಮಾತಾಗುತ್ತದೆ. ಈ ಗರಿಕೆಯನ್ನು ಪೂರ್ತಿಯಾಗಿ ನಿರ್ಮೂಲ ಮಾಡುವುದಕ್ಕೆ ಎಲ್ಲಾ ರೈತರಿಗೂ ಸಾಧ್ಯವಿಲ್ಲ ಟ್ರಾಕ್ಟರ್‌ಗಳನ್ನು ಉಪಯೋಗಿಸಬೇಕೆಂದರೆ ಎಕರೆಗೆ ನಲವತ್ತು ರೂಪಾಯಿ ಕೊಡಬೇಕಾಗುತ್ತದೆ. ಆದ್ದರಿಂದ ಇದರ ಇರ್ಯಾಡಿಕೇಷನ್‌ಗೆ ಒಂದು ಪ್ರೋಗ್ರಾಂನ್ನು ಹಾಕಿಕೊಳ್ಳಬೇಕು. ಹಾಗೆ ಮಾಡಿದ್ದೇ ಅದರೆ ಅದರಿಂದ ಗೊಬ್ಬರವನ್ನು ಹಾಕುವುದಕ್ಕೂ ಕೂಡ ಬಹಳ ಅನುಕೂಲವಾಗುತ್ತದೆ. ಚೆನ್ನಾಗಿ ಬೆಳೆ ಬೆಳೆಯುವುದಕ್ಕೂ ಕೂಡ ಅನುಕೂಲವಾಗುತ್ತದೆ ಎಂದು ಈ ಸಮಯದಲ್ಲಿ ಹೇಳುತ್ತಾ ಇದ್ದೇನೆ. ಇದರ ಜೊತೆಗೆ ಎಲ್ಲಾ ಕಡೆಯಲ್ಲೂ ಕಾಂಟೂರ್ ಬಂಡಿಂಗ್‌ನ್ನು ಏನ್ನೋ ತಾವು ಹಾಕಿಸಬೇಕೆಂದು ಯೋಜನೆ ಮಾಡಿದ್ದೀರಿ ಆದರೆ ಅದರ ಪ್ರೊಸೀಜರ್ ತುಂಬಾ ಕಷ್ಟವಾಗಿದೆ ಅದನ್ನು ಮಾಡತಕ್ಕ ಸಿಬ್ಬಂದಿ ಅಂತೂ ಇಲ್ಲವೇ ಇಲ್ಲ. ಇಡೀ ತಾಲ್ಲೂಕಿಗೆ ಒಬ್ಬರು ಇಬ್ಬರು ಆಫೀಸರು ಇದ್ದಾರೆ ಹೀಗಿರುವಾಗ ಕೊಟ್ಟಂತಹ ದುಡ್ಡು ಲ್ಯಾಪ್ಸ್ ಆಗುತ್ತಾ ಇದೆ. ಈ ಒಡ್ಡುಗಳು ನಮ್ಮಲ್ಲಿ ಅಂತೂ ಬೇಕು ಬೇಕು. ಕೆಂಪು ಜಮೀನಿಗೆ ಹಾಕುತ್ತಾ ಇದ್ದಾರೆ ಕರೀ ಜಮೀನಿಗೆ ಬೇಡ ಎನ್ನುತ್ತಾರೆ, ಆ ರೀತಿ ಅಲ್ಲ ಅದನ್ನು ಎಲ್ಲಾ ಜಮೀನಿಗೂ ಹಾಲಿಸಲೇಬೇಕು ಹದಿನೈದು ಇಂಚು ಮಳೆ ಇರತಕ್ಕ ಜಮೀನಿಗೆ ಈ ಬಂಡಿಂಗನ್ನು ಹಾಕುವುದರಿಂದ ಹೆಚ್ಚು ಆಹಾರ ಬೆಳೆಯುವುದಕ್ಕೂ ಸಹ ಅನುಕೂಲವಾಗುತ್ತದೆ ಮತ್ತು ಚೆನ್ನಾಗಿ ಬೆಳೆ ಬೆಳೆಯಬಹುದು. ಆದ್ದರಿಂದ ಕಾಂಟೂರ್ ಬಂಡಿಂಗ್‌ನ್ನು ಎಲ್ಲಾ ಕಡೆಗೂ ಎಕ್ಸ್‌ಟೆಂಡ್ ಮಾಡಬೇಕು. ಇದರ ಒಂದು ಪ್ರೊಸೀಜರ್ ಏನಿದೆ ಇದು ಬಹಳ ತ್ರಾಸದಾಯಕವಾಗಿದೆ ಅದರಿಂದ ಬಹಳ ವಿಳಂಬವಾಗುತ್ತಾ ಇದೆ, ಆದ್ದರಿಂದ ಹೆಚ್ಚು ಸಿಬ್ಬಂದಿಯನ್ನು ಕೊಟ್ಟು ಈ ಎಲ್ಲಾ ಕೆಲಸಗಳನ್ನೂ ಮಾಡಬೇಕು. ಮತ್ತು ಸ್ಕೇರ್ಸಿಟಿ ಏರಿಯಾದಲ್ಲಿ ಕಾಂಟೂರ್ ಬಂಡಿಂಗ್ ಪ್ರೋಗ್ರಾಂನ್ನು ಇಟ್ಟುಕೊಳ್ಳಬೇಕೆಂದು ಈ ಸಮಯದಲ್ಲಿ ಹೇಳುತ್ತೇನೆ. ಕೇವಲ ಇನ್‌ಕಂಪ್ಲೀಟೆಡ್ ರೋಡ್ಸ್ ತೆಗೆದುಕೊಳ್ಳುವುದು ಮಾತ್ರವಲ್ಲದೆ ಅದರ ಜೊತೆಗೆ ಎಲ್ಲೆಲ್ಲಿ ಸರ್ವೆ ಆಗಿದೆ. ಎಲ್ಲೆಲ್ಲಿ ಕಾಂಟೂರ್ ಬಂಡಿಂಗ್ ಮಾಡಬೇಕು ಎಂಬುದು ನಿರ್ಧಾರವಾಗಿದೆ ಅಂತಹ ಕಡೆಗಳಲ್ಲಿ ಇವೆರಡು ಕೆಲಸಗಳನ್ನೂ ಒಟ್ಟಿಗೆ ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ಏಕೆಂದರೆ ಅಲ್ಲಿರತಕ್ಕ ಜನರಿಗೆ ಕೆಲಸಗಳನ್ನು ಕೊಡುವುದಕ್ಕೂ ಸಹ ಅನುಕೂಲವಾಗುತ್ತದೆ. ಮತ್ತು ರೈತರು ಹೆಚ್ಚು ಆಹಾರ ಬೆಳೆಯಬೇಕೆಂದು ಎಲ್ಲರೂ ಹೇಳುತ್ತಾ ಇದ್ದಾರೆ. ಈ ದಿವಸ ನೀರಾವರಿ ಯೋಜನೆಗಳನ್ನು ಹೆಚ್ಚು ಹೆಚ್ಚಾಗಿ ಮಾಡುತ್ತಾ ಇದ್ದಾರೆ. ನೀರಾವರಿ ಬಾವಿಗಳನ್ನು ತೆಗೆಸುತ್ತಾ ಇದ್ದಾರೆ.

ಆದರೆ ಇವತ್ತು ರೈತರಿಗೆ ಸಿಕ್ಕುತ್ತಾ ಇರತಕ್ಕ ಗೊಬ್ಬರ ಮಾತ್ರ ಸರಿಯಾಗಿ ಸಿಕ್ಕುತ್ತಾ ಇಲ್ಲ. ಕೆಮಿಕಲ್ ಫರ್ಟಿಲೈಸರ್ಸ್ ಧಾರಣೆ ಬಹಳ ಹೆಚ್ಚಾಗಿದೆ. ಪ್ರತಿಯೊಬ್ಬ ರೈತನೂ ಅದನ್ನು ಕೊಳ್ಳುವುದಕ್ಕೆ ಸಾಧ್ಯವಿಲ್ಲ. ಇದನ್ನು ನಾನು ಪ್ರತಿ ಸಲವೂ ಹೇಳುತ್ತಾ ಇದ್ದೇನೆ. ಸೂಪರ್ ಫಾಸ್‌ಫೇಟ್‌ಗೆ ಗವರ್ನ್ಮೆಂಟ್ ಇಂಡಿಯಾದವರು ಸಬ್ಸಿಡಿ ಕೊಡುತ್ತಾ ಇದ್ದಾರೆ. ತಾವು ಇಪ್ಪತ್ತೈದು ಪರ್ಸೆಂಟ್‌ಕೊಟ್ಟು ಅದನ್ನು ಸಪ್ಲೈ ಮಾಡಿರಿ ಎಂದರೆ ಅದನ್ನು ಮಾಡಿಲ್ಲ. ಆದ್ದರಿಂದ ದಯವಿಟ್ಟು ಸಬ್ಸಿಡೈಸ್ಡ್ ರೇಟ್‌ನಲ್ಲಿ ಸೂಪರ್ ಫಾಸ್‌ಫೇಟ್‌ನ್ನು ಮತ್ತು ಕೆಮಿಕಲ್ ಮೆನ್ಯೂರ್‌ನ್ನು ರೈತರಿಗೆ ಒದಗಿಸುವ ಏರ್ಪಾಡನ್ನು ಮಾಡಬೇಕೆಂದು ಶ್ರೀಮಾನ್ ಸುಬ್ರಹ್ಮಣ್ಯಂ ಅವರು ಆರನೇ ತಾರೀಖು ಬರುತ್ತಾರೆ ಇದನ್ನೆಲ್ಲಾ ಅವರ ಮುಂದೆ ಇಡಬೇಕೆಂದು ಈ ಸಮಯದಲ್ಲಿ ತಿಳಿಸುತ್ತೇನೆ.

ಡೀಸಲ್ ರೇಟ್ ಬಹಳ ಜಾಸ್ತಿಯಾಗುತ್ತಾ ಇದೆ. ಡೀಸಲ್ ಪಂಪ್ ಸೆಟ್ಸ್ ಮತ್ತು ಎಲೆಕ್ಟ್ರಿಕ್ ಪಂಪ್ ಸೆಟ್ಸ್ ಎರಡನ್ನೂ ಸಹ ಕೊಡುತ್ತಾ ಇದ್ದಾರೆ. ಈಗಿನ ರೇಟ್‌ನಂತೆ ಡೀಸಲ್ ಸೆಟ್ಸ್‌ನ್ನು ಉಪಯೋಗಿಸಬೇಕೆಂದರೆ ಬಹಳ ಕಷ್ಟವಾಗುತ್ತದೆ, ಅದನ್ನೂ ಕೂಡ ರಿಯಾಯಿತಿ ದರದಲ್ಲಿ ಒದಗಿಸುವಂತೆ ಕೇಂದ್ರ ಸರ್ಕಾರದವರೆಗೆ ತಿಳಿಸಬೇಕೆಂದು ಈ ಸಮಯದಲ್ಲಿ ಹೇಳುತ್ತೇನೆ. ನಮ್ಮ ಕಾನ್‌ಸ್ಟಿಟ್ಯೂಯನ್ಸಿಯಲ್ಲಿ ಮುಕ್ಕಾಲು ಭಾಗ ತುಂಗ ಭದ್ರಾನದಿ ನೀರು ಬರುತ್ತಾಇದೆ. ಮಾನ್ಯ ಸದಸ್ಯರಾದ ಶ್ರೀಮಾನ್ ಗೋಪಾಲ ಗೌಡರು ನೀರು ಹರಿಯುತ್ತಾ ಇದೆ, ಯಾರೂ ಉಪಯೋಗಿಸಿಕೊಂಡಿಲ್ಲ, ಅಣೆಕಟ್ಟುಗಳನ್ನು ಕಟ್ಟಿ ಇಷ್ಟೆಲ್ಲಾ ದುಡ್ಡು ದುರುಪಯೋಗವಾಗಿದೆ ಎಂದು ಹೇಳುತ್ತಾ ಇದ್ದರು ಮಾನ್ಯ ಸದಸ್ಯರಿಗೆ ನಾನು ಈ ಸಂದರ್ಭದಲ್ಲಿ ಹೇಳಬೇಕೆಂದರೆ ನಮ್ಮ ಕಾನ್‌ಸ್ಟಿಟ್ಯೂಯನ್ಸಿಯಲ್ಲಿ ಜನರನ್ನು ನೀರನ್ನು ಬಹಳ ಚೆನ್ನಾಗಿ ಉಪಯೋಗಿಸಿಕೊಂಡಿದ್ದಾರೆ. ಅಲ್ಲಿ ತುಂಬಾ ಚೆನ್ನಾಗಿ ಬೆಳೆ ಬೆಳೆದಿದ್ದಾರೆ ಅವರಿಗೆ ಯಾವ ರೀತಿಯಲ್ಲೂ ಕೂಡ ನೀರಿನ ಅಭಾವ ಇಲ್ಲ, ಆದರೆ ಸಿಂಧನೂರಿನಲ್ಲಿ ಮಾತ್ರ.

**ಶ್ರೀ ಎಸ್. ಗೋಪಾಲಗೌಡ:**– ನಾನು ರಾಯಚೂರು ಭಾಗದಲ್ಲಿ ಪ್ರವಾಸ ಮಾಡಿ ನೋಡಿದ್ದೇನೆ. ಅಲ್ಲಿ ಯಾವ ರೀತಿ ನೀರಿನ ಉಪಯೋಗವಾಗುತ್ತಾ ಇದೆ ಎಂಬುದು ನನಗೆ ಗೊತ್ತಿದೆ. ಐದು ಲಕ್ಷ ಎಕರೆ ತರೀನಲ್ಲಿ ಎರಡೂವರೆ ಲಕ್ಷ ಎಕರೆ ಕೂಡ ಇನ್ನೂ ಆಗಿಲ್ಲ.

**ಶ್ರೀಮತಿ ಬಸವರಾಜೇಶ್ವರಿ:**– ನಾನು ನಮ್ಮ ಕ್ಷೇತ್ರದ ವಿಚಾರವನ್ನು ಹೇಳುತ್ತಾ ಇದ್ದೇನೆ. ಸಿಂಧನೂರಿನ ವಿಷಯ ಬೇರೆ. ಅದು ದೇವರ ವಿಕೋಪಕ್ಕೆ ಈಡಾಗಿದೆ. ಅಲ್ಲಿ ಸ್ವಲ್ಪ ನಿಧಾನವಾಗುತ್ತಾಇದೆ. ಆದರೂ ಕೂಡ ಇನ್ನು ಸ್ವಲ್ಪ ದಿವಸದಲ್ಲೇ ಆ ಏರಿಯಾ ಡೆವಲಪ್ ಆಗತಕ್ಕ ಸಂಭವ ಇದೆ, ಮಾನವಿ ಮತ್ತು ಗಂಗಾವತಿ ಪ್ರದೇಶಗಳನ್ನು ಮಾನ್ಯ ಸದಸ್ಯರು

ನೋಡಿದ್ದಿದ್ದರೆ ಈ ತರಹ ಟೀಕೆ ಮಾಡುವುದಕ್ಕೆ ಅವಕಾಶವಿರಲಿಲ್ಲ. ಆ ಪ್ರದೇಶಗಳು ಬಹಳ ಚೆನ್ನಾಗಿ ಡೆವಲಪ್ ಆಗುತ್ತಾ ಇವೆ. ಇನ್ನು ಕಂದಾಯ ವಸೂಲಿ ಬಗ್ಗೆ ಅನೇಕ ಮಾನ್ಯ ಸದಸ್ಯರು ಹೇಳಿದ್ದಾರೆ. ಇಂದಿನ ಒಂದು ಪರಿಸ್ಥಿತಿಯಲ್ಲಿ ತಕಾವಿ ಸಾಲವಾಗಲಿ ಅಥವಾ ಇನ್ನಿತರ ಯಾವುದೇ ಸಾಲಗಳಾಗಲಿ ಅಷ್ಟು ತೀವ್ರತೆಯಿಂದ ವಸೂಲು ಮಾಡಬಾರದು ಎಂದು ಈ ಸಮಯದಲ್ಲಿ ಹೇಳುತ್ತೇನೆ. ಇಷ್ಟು ಹೇಳಿ ಮಾನ್ಯ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಸಹಕಾರ ಕ್ಷೇತ್ರ

**1964 ನಾಲ್ಕನೇ ಅಧಿವೇಶನದಲ್ಲಿ ಆಯವ್ಯಯ ಮಂಡನೆಯಾದ ಸಂದರ್ಭ ಅನುದಾನ ಬೇಡಿಕೆ ಕುರಿತಂತೆ ಅದರಲ್ಲೂ ಸಹಕಾರ ಮತ್ತು ಸಂಭಂವಿಸಿದಂತೆ ಅವರು ಅದ್ಭುತವಾಗಿ ವಿಷಯ ಮಂಡನೇ ಮಾಡಿದರು ಅದರ ಪೂರ್ಣಪಾಠ ಈಗ ನೋಡೋಣ.**

**ಶ್ರೀಮತಿ ಬಸವರಾಜೇಶ್ವರಿ (ಪಾನ್ಸ):**- ಮಾನ್ಯ ಅಧ್ಯಕ್ಷರೆ, ಸಭೆಯ ಮುಂದಿರುವ ಬೇಡಿಕೆಗಳನ್ನು ಅನುಮೋದಿಸುತ್ತ ಕೆಲವು ವಿಷಯಗಳನ್ನು ಹೇಳುತ್ತೇನೆ. ನಮ್ಮ ದೇಶದಲ್ಲಿ ಸಹಕಾರ ಪದ್ಧತಿ ಪ್ರಾರಂಭವಾಗಿ ಎಷ್ಟೋ ರೈತರಿಗೆ ಅನುಕೂಲವಾಗುತ್ತಿದೆ. ಪಂಚಾಯತಿಗಳಲ್ಲಿ ಸರ್ವಿಸ್‌ಕೋ-ಅಪರೇಟಿವ್ಸ್‌ಘುರು ಆಗಿ ರೈತರಿಗೆ ಅನುಕೂಲವಾಗುತ್ತದೆ. ಆದರೆ ಎಷ್ಟುಮಟ್ಟಿನ ಅನುಕೂಲ ಸಿಕ್ಕಬೇಕೋ ಅಷ್ಟು ಸಿಕ್ಕುತ್ತಿಲ್ಲ. ಕೆಲವು ಸಹಕಾರ ಸಂಘಗಳಲ್ಲಿ ಇಪ್ಪತ್ತು ಮೂವತ್ತು ಸಾವಿರ ರೂಪಾಯಿ ಕೇಳಿದರೆ ಹತ್ತು ಸಾವಿರ ರೂಪಾಯಿ ಮಂಜೂರು ಮಾಡುತ್ತಿರುವುದರಿಂದ ನಿರುತ್ಸಾಹವಾಗಿದೆ. ಕೆಲವರು ನೂರು ರೂಪಾಯಿ ಸಾಲ ಕೇಳಿದಾಗ ಕೇವಲ ಇಪ್ಪತ್ತೈದು ರೂಪಾಯಿ ಕೊಟ್ಟಿರುವ ಸಂದರ್ಭಗಳಿವೆ. ಆದುದರಿಂದ ರೈತರು ಎಷ್ಟು ಸಾಲ ಕೇಳುತ್ತಾರೋ ಅಷ್ಟು ಕೊಡುವುದಕ್ಕಾಗಿ ಸರ್ವಿಸ್ ಕೋ-ಆಪರೇಟಿವ್ ಸಂಘಗಳಿಗೆ ಹಣಕೊಡಬೇಕೆಂದು ಸಲಹೆ ಮಾಡುತ್ತೇನೆ.

ಲಾರ್ಜ್‌ಸ್ಕೇಲ್ ಕೋ-ಅಗರೇಟಿವ್ ಸರ್ವಿಸ್‌ಗಳಿಗೆ, ನಾಲ್ಕಾರು ಗ್ರಾಮಗಳನ್ನು ಸೇರಿಸಿ ಮಾಡಿದ್ದಾರೆ. ಇವುಗಳಲ್ಲಿ ಒಂದು ತೊಂದರೆ ಇದೆ. ಯಾವುದಾದರೂ ಎರಡು ಗ್ರಾಮಗಳಲ್ಲಿ ಬೆಳೆಯಿಲ್ಲದೆ ಅವರು ಡಿಫಾಲ್ಟರ್ ಆದರೆ ಮಿಕ್ಕವರಿಗೂ ಅನುಕೂಲ ಸಿಕ್ಕುವುದಿಲ್ಲ. ಆದುದರಿಂದ ಬೇರೆ ಬೇರೆ ಒಂದೊಂದು ಗ್ರಾಮಕ್ಕೂ ಸರ್ವಿಸ್ ಕೋ-ಆಪರೇಟಿವ್ ಮಾಡಿ ಎಂದು ಜನರು ಕೇಳುತ್ತಿದ್ದಾರೆ. ಇದನ್ನು ಗಮನಿಸಿ ಒಂದೊಂದು ಗ್ರಾಮಕ್ಕೂ ಪ್ರತ್ಯೇಕವಾಗಿ ಮಾಡಬೇಕೆಂದು ಸಲಹೆ ಮಾಡುತ್ತೇನೆ.

ಬಳಕೆಗಾರರ ಸಂಘಗಳ ವಿಚಾರವನ್ನು ಶ್ರೀಮಾನ್ ಎ.ಎಸ್.ಪಾಟೀಲ್ ಅವರು ಹೇಳಿದರು. ಹಳ್ಳಿಗಳಲ್ಲಿ ರೈತನಿಗೆ ಬೇಕಾದ ಸಾಮಾನುಗಳು ಸಿಕ್ಕುತ್ತಿಲ್ಲ. ಸಿಕ್ಕದರೂ ದಳ್ಳಾಳಿಗಳ ಕೈಗೆ ಸಿಕ್ಕಿ ಬೆಲೆ ಹೆಚ್ಚಾಗುತ್ತದೆ ಸಣ್ಣ ಕೈಗಾರಿಕೆ ಸಂಘಗಳು, ಸರ್ವಿಸ್ ಕೋ-ಆಪರೇಟಿವ್ಸ್; ಕನ್‌ಸ್ಯೂಮರ್ಸ್ ಸೊಸೈಟಿಗಳು ಎಂದಿವೆ, ಅವುಗಳಿಗೆ ಒಂದೊಂದಕ್ಕೂ ಬೇರೆ ಬೇರೆ ಷೇರು ವಸೂಲು ಮಾಡಿದರೆ ಕೊಡುವುದಕ್ಕೆ ರೈತರಿಗೆ ಕಷ್ಟವಾಗುತ್ತದೆ. ಒಂದು ಮಟ್ಟದಲ್ಲಿ ಹಳ್ಳಿಗಳಲ್ಲಿ ಮಲ್ಟಿಪರ್‌ಪಸ್ ಸೊಸೈಟಿಗಳೆಂದು ಮಾಡಿ ರೈತರಿಗೆ ಬೇಕಾದ ಗೊಬ್ಬರ ಮತ್ತು ಇತರ ಸಾಮಾನ್ಯಗಳಿಗೆ ಸಾಲ ಕೊಡಬೇಕು. ಸಣ್ಣ ಕೈಗಾರಿಕೆ

ಸೊಸೈಟಿ, ಉಲ್ಲನ್ ಸೊಸೈಟಿ, ಕನ್‌ಸ್ಯೂಮರ್ಸ್ ಸೊಸೈಟಿ ಇವೆಲ್ಲದರ ಅನುಕೂಲವನ್ನೂ ಮಾಡುವುದಕ್ಕೆ ಮಲ್ಟಿಪರ್ಪಸ್ ಸೊಸೈಟಿಯಿಂದ ಖಂಡಿತವಾಗಿಯೂ ಅನುಕೂಲವಾಗುತ್ತದೆ. ಹೀಗೆ ಮಾಡಿದರೆ ಅಲ್ಲಿನ ಸೆಕ್ರೆಟರಿಯನ್ನೂ ಸರಕಾರವೇ ನೇಮಕ ಮಾಡಬೇಕು. ಹೀಗೆ ಮಾಡಿದರೆ ಸಹಕಾರ ಸಂಘಗಳ ಶಕ್ತಿ ಬೆಳೆಯಲು ಅನುಕೂಲವಾಗುತ್ತದೆ. ಕೆಲ ಕಾಲವಾದ ಮೇಲೆ ಸೆಕ್ರೆಟರಿಯ ಸಂಬಳವನ್ನು ಸೊಸೈಟಿಯೇ ಕೊಡಬಹುದು. ಈ ಸಭೆಯಲ್ಲಿ ಬಂದ ಕೆಲವು ಪ್ರಶ್ನೆಗಳನ್ನು ನೋಡಿದರೆ ಸಹಕಾರ ಸಂಘಗಳಲ್ಲಿ ಹಣ ಅಪವ್ಯಯವಾಗುತ್ತಿದೆಯೆಂಬುದು ವ್ಯಕ್ತವಾಯಿತು. ಈ ದೃಷ್ಟಿಯಿಂದ ಕೂಡ ಸರ್ಕಾರದಿಂದ ಸೆಕ್ರೆಟರಿಯನ್ನು ನೇಮಕ ಮಾಡಬೇಕೆಂದು ಹೇಳುತ್ತೇನೆ.

ಎನ್.ಇ.ಎಸ್.ಬ್ಲಾಕ್‌ಗಳ ವಿಚಾರದಲ್ಲಿ ಎರಡು ಮಾತು ಹೇಳಬೇಕಾಗಿದೆ. ನಮ್ಮ ಪ್ರದೇಶದಲ್ಲಿ ಹೆಣ್ಣುಮಕ್ಕಳ ಕೆಲಸ ಯಾವ ಮಟ್ಟಕ್ಕೂ ನಡೆಯುತ್ತಿಲ್ಲ. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣದ ಕೆಲಸ ಏನೂ ಆಗುತ್ತಿಲ್ಲ. ಏಕೆಂದರೆ ಅಲ್ಲಿ ಮುಖ್ಯ ಸೇವಕಿಯೂ ಇಲ್ಲ, ಗ್ರಾಮ ಸೇವಕಿಯೂ ಇಲ್ಲ. ಎಷ್ಟು ಹಣವಿತ್ತೋ ಅಷ್ಟು ಖರ್ಚಾಗಿಲ್ಲ, ಆಗುತ್ತಿಲ್ಲ. ಆದುದರಿಂದ ಮುಖ್ಯ ಸೇವಕಿ ಮತ್ತು ಗ್ರಾಮ ಸೇವಕಿಯರನ್ನು ಬೇರೆ ಕೇಂದ್ರಗಳಿಂದ ಕರೆಸಿ ತಮ್ಮ ಕ್ಷೇತ್ರದಲ್ಲಿ ಮಹಿಳೆಯರ ಮತ್ತು ಮಕ್ಕಳ ಕೆಲಸದ ವಿಷಯದಲ್ಲಿ ಹೆಚ್ಚಿನ ಕಾರ್ಯಮಾಡಿಸಬೇಕು.

ರೂರಲ್ ವಾಟರ್ ಸಪ್ಲೈ ಬಗ್ಗೆ ಹೇಳುವುದಾದರೆ, ಮೂರನೆಯ ಯೋಜನೆಯ ಅಂತ್ಯದಲ್ಲಿ ನಾವಿದ್ದೇವೆ. ಆದರೂ ಈ ಹೊತ್ತು ಹಳ್ಳಿಗಳಲ್ಲಿ ಕುಡಿಯುವ ನೀರಿನ್ನೊದಗಿಸಿಲ್ಲವೆಂದರೆ ಅದು ಒಳ್ಳೆಯದಲ್ಲ. ನಮ್ಮ ಕಡೆ 70–80 ಗ್ರಾಮಗಳಲ್ಲಿ ಕುಡಿಯುವ ನೀರಿಲ್ಲದೆ ಕಷ್ಟಪಡುತ್ತಿದ್ದಾರೆ. ಹೊಂಡಗಳಲ್ಲಿ ಮತ್ತು ಕೆರೆಗಳಲ್ಲಿ ನೀರನ್ನು ತೆಗೆದುಕೊಳ್ಳುವುದು ಕಷ್ಟ. ಸರಕಾರವನ್ನು ಕೇಳಿದರೆ ಬಾವಿಗಳಿಗಾಗಿ ಹಣ ಕೊಟ್ಟಿದ್ದೇವೆಂದು ಹೇಳುತ್ತಾರೆ. ಅಲ್ಲಿ ಬಾವಿಗಳನ್ನು ತೆಗೆಯುವುದಕ್ಕೆ ಏನು ತೊಂದರೆಯಿದೆ ಎಂಬುದನ್ನು ನೋಡಬೇಕು. ನಮ್ಮ ಕಡೆಯಂತೂ ಬಾವಿ ತೆಗೆಯಬೇಕಾದರೆ ಬಹಳ ಕಷ್ಟ ; ನೆಲದಲ್ಲಿ ತಕ್ಷಣ ಬಂಡೆಗಳು ಸಿಕ್ಕುತ್ತವೆ. ಆದ ಕಾರಣ ಹಿಂದೆ ಗೊತ್ತುಮಾಡಿರುವ ರೇಟನ್ನೇ ಕೊಟ್ಟರೆ ಕೆಲಸ ಮಾಡಲು ಸಾಧ್ಯವಾಗುವುದಿಲ್ಲ. ಆದರಿಂದ ಕೆಲಸ ನಡೆಯದೆ ಕೊಟ್ಟಹಣ ಲ್ಯಾಪ್ಸ್ ಆಗುತ್ತದೆ. ಅಲ್ಲ ಮದ್ದು ಗುಂಡು ಡೈನಮೈಟ್ ಹಾಕಿ ಬಾವಿ ತೆಗೆಯಬೇಕಾಗಿದೆ. ಆದುದರಿಂದ ಸರ್ಕಾರದವರು ಹಿಂದಿನ ರೇಟುಗಳನ್ನು ಬದಲಾಯಿಸಿ ಬೇರೆ ರೇಟುಗಳನ್ನು ಕೊಡಬೇಕು. ಹೀಗೆ ಮಾಡಿ ಇದಕ್ಕಾಗಿ ಎಷ್ಟು ಹಣವಿದೆಯೋ ಅದನ್ನು ಖರ್ಚಾಗುವಂತೆ ಮಾಡಬೇಕು.

ಪ್ರೊಟೆಕ್ಟೆಡ್ ವಾಟರ್ ಸಪ್ಲೈ ವಿಚಾರದಲ್ಲಿ ಸರ್ಕಾರದವರು ಕಳುಹಿಸಿದ ಆದೇಶ ನಮಗೆ ಮುಟ್ಟಿತು. ಎಲ್ಲೆಲ್ಲಿ ಮಾಡಬೇಕೆಂಬ ಬಗ್ಗೆ ನಾವು ಅಂದಾಜು ತಿಳಿಸಿದ್ದೇವೆ. ಕೇಂದ್ರ ಸರ್ಕಾರದಲ್ಲಿ ಒತ್ತಾಯ ಮಾಡಿ ಹಣವನ್ನು ತರಿಸಿ ಎಲ್ಲೆಲ್ಲಿ ಸಾಧ್ಯವೋ ಅಲ್ಲಿ ಈ ನೀರು ಸರಬರಾಜು ಏರ್ಪಾಡು ಮಾಡಿದರೆ ಹಳ್ಳಿಯ ಜನರಿಗೆ ಅನುಕೂಲವಾಗುತ್ತದೆ.

ನಮ್ಮ ಕಡೆ ಕೆಲವು ಹಳ್ಳಗಳ ಮತ್ತು ನದಿಗಳ ಪ್ರವಾಹದಿಂದ ಹಳ್ಳಿಗಳು ಕೊಚ್ಚಿಕೊಂಡು ಹೋಗುತ್ತಿವೆ. ಇಂಥ ಕಡೆ ಮನೆಗಳನ್ನು ಕಳೆದುಕೊಂಡವರು ಮನೆಗಳನ್ನು ಕಟ್ಟಿಸಬೇಕೆಂದರೆ ಎನ್.ಇ.ಎಸ್. ಬ್ಲಾಕ್‌ನಲ್ಲಿ ಹಣ ಸಿಕ್ಕುತ್ತಿಲ್ಲ. ಇದರಿಂದ ಕೆಲವು ಜನರಿಗೆ ತೊಂದರೆಯಾಗಿದೆ. ಹಿಂದು ಮುಂದು ನೋಡದೆ ಪ್ರವಾಹ ಪೀಡಿತ ಊರುಗಳಿಗೆ ಇದಕ್ಕಾಗಿ ಖರ್ಚು ಮಾಡುವುದಕ್ಕೆ ಸರಿಯಾದ ವ್ಯವಸ್ಥೆ ಮಾಡಬೇಕು. ಎಂತಹ ತುರ್ತು ಪರಿಸ್ಥಿತಿ ಇದ್ದರೂ ಜನರಿಗೆ ಇರುವುದಕ್ಕೆ ಮನೆ ಕೂಡ ಕಟ್ಟಿಸುವುದಿಲ್ಲವೆಂದರೆ ಅದು ಒಳ್ಳೆಯದಲ್ಲ. ಅಲ್ಲದೆ ಹಳ್ಳಿಗಳು ಬೆಳೆಯುತ್ತವೆ, ಜನಸಂಖ್ಯೆ ಹೆಚ್ಚಾಗುತ್ತಿದೆ. ಪ್ರತಿ ದಿವಸವೂ ಮನೆಗಳ ಅವಶ್ಯಕತೆ ಹೆಚ್ಚಾಗುತ್ತಿದೆ. ಶ್ರೀಮಾನ್ ಕೊಂಡಜ್ಜಿ ಬಸಪ್ಪ ನವರು ಹೇಳಿದ ಹಾಗೆ ಎಷ್ಟು ಜಮೀನನ್ನು ಇದಕ್ಕಾಗಿ ಅಕ್ವೈರ್ ಮಾಡಬೇಕು ಅಷ್ಟನ್ನು ಮಾಡಿ ಮನೆಗಳನ್ನು ಕಟ್ಟಿಸಿ ಹಳ್ಳಿಗಳಿಗೆ ಅಭಿವೃದ್ಧಿಗೆ ಸಹಾಯ ಮಾಡಬೇಕು. ಇಲ್ಲದಿದ್ದರೆ ಒತ್ತಡ ಹೆಚ್ಚಾಗಿ ಜನರಿಗೆ ತೊಂದರೆಯಾಗಿ ಕೋರ್ಟುಗಳಿಗೆ ಹೋಗಿ ಅನೇಕ ತೊಂದರೆಗಳಿಗೊಳಗಾಗುತ್ತಾರೆ. ಕಡೆಯದಾಗಿ, ಶ್ರೀಮಾನ್ ರಂಗೇಗೌಡರು ಹಳ್ಳಿಗಳ ಸಹಕಾರ ಸಂಘಗಳಲ್ಲಿ ಎರಡು ಮೂರು ಜನ ಡಿಫಾಲ್ಟರುಗಳಾದರೆ ಆ ಹಳ್ಳಿಗೆ ಹಣ ಸಿಕುವುದಿಲ್ಲವೆಂದು ಹೇಳಿದರು. ಇದುವರೆಗೆ ಶೇಕಡ 90ರಷ್ಟು ಹಣ ವಾಪಸ್ಸು ಬಾರದಿದ್ದರೆ ಮುಂದೆ ಅಲ್ಲಿಗೆ ಸಾಲ ಕೊಡುತ್ತಿರಲಿಲ್ಲ. ಆದರೆ ಈ ಸರ್ಕಾರದವರು ಶೇಕಡ 60ರಷ್ಟು ಬಂದರೂ ಕೊಡುತ್ತೇವೆ ಎಂದು ನಿರ್ಣಯ ಮಾಡಿದ್ದಾರೆ, ಇದು ಸ್ವಾಗತಾರ್ಹವಾದುದು. ಇದರಿಂದ ರೈತರಿಗೆ ಬಹಳ ಅನುಕೂಲವಾಗುತ್ತದೆ. ಒಟ್ಟಿನಲ್ಲಿ ಹಳ್ಳಿಗಳಿಗೆ ಹೆಚ್ಚಿನ ಪ್ರೋತ್ಸಾಹ ಕೊಡುತ್ತಾರೆಂದು ನಂಬಿ, ನನಗೆ ಇಷ್ಟು ಹೇಳಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದನೆಗಳನ್ನರ್ಪಿಸುತ್ತೇವೆ.

# ಶಿಕ್ಷಣ

**ಬಜೆಟ್ ಮಂಡನೆ ಮಂಜೂರಾತಿ ಮತ್ತು ಬೇಡಿಕೆ ಕುರಿತಂತೆ ಅವರ ಮಾತಿನ ವೈಖರಿಯನ್ನು ಒಮ್ಮೆ ನೋಡೋಣ.**

**ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ).**- ಮಾನ್ಯ ಅಧ್ಯಕ್ಷರೇ, ನಮ್ಮ ಮುಂದಿರತಕ್ಕಂತಹ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ಬೇಡಿಕೆಗಳನ್ನು ಅನುಮೋದಿಸುತ್ತಾ ಕೆಲವು ವಿಚಾರಗಳನ್ನು ಸರ್ಕಾರದ ಗಮನಕ್ಕೆ ತರಲಿಚ್ಛಿಸುತ್ತೇನೆ. ಮೊದಲನೇಯದಾಗಿ ಪ್ರೈಮರಿ ಎಜುಕೇಶನ್ ಬಗ್ಗೆ ಹೇಳುವುದಾದರೆ, ಹಲವಾರು ಹಳ್ಳಿಗಳಲ್ಲಿ ಇವತ್ತಿನ ದಿವಸ ಪ್ರೈಮರಿ ವಿದ್ಯಾಭ್ಯಾಸವು ಎನ್ನತಕ್ಕಂಥದ್ದು ಬಹಳ ಕೆಳಮಟ್ಟಕ್ಕೆ ಇಳಿದಿದೆ. ಇವತ್ತು ಹಳ್ಳಿಗಳಲ್ಲಿ ಇರುವಂತಹ ಟೀಚರುಗಳು ಚೆನ್ನಾಗಿ ಕೆಲಸ ಮಾಡುತ್ತಾ ಇಲ್ಲ. ಇನ್‌ಸ್ಪೆಕ್ಷನ್ ಬಹಳ ಕಡಿಮೆ. ಯಾರು ಬರುತ್ತಾರೆ, ಯಾರು ಹೋಗುತ್ತಾರೆ, ಎಂದು ಗೊತ್ತಾಗುವುದಿಲ್ಲ. ಅದಕ್ಕಾಗಿ ನನ್ನ ಸಲಹೆ ಏನೆಂದರೆ, ಇನ್‌ಸ್ಪೆಕ್ಟರ್ ಬಂದಾಗ ಅಲ್ಲಿ ಸ್ಥಳದಲ್ಲಿರತಕ್ಕ ಸರ್ಪಂಚರನ್ನು ಮತ್ತು ಸ್ಕೂಲ್ ಕಮಿಟಿಯನ್ನು ಕರೆಸಿ, ಅಲ್ಲಿ ಇರತಕ್ಕ ನ್ಯೂನತೆಗಳನ್ನು ಕಂಡುಹಿಡಿಯಲು ಇನ್‌ಸ್ಪೆಕ್ಟಿಂಗ್ ಆಫೀಸರ್ ಜೊತೆಗೆ ಇನ್‌ಸ್ಪೆಕ್ ಮಾಡಬೇಕು ಮತ್ತು ಸ್ಥಳೀಯ ಜನರನ್ನು ಭೇಟಿ ಮಾಡಿ ಸ್ಕೂಲುಗಳಲ್ಲಿರತಕ್ಕ ತೊಂದರೆಗಳು, ಟೀಚರುಗಳ ಕಿರುಕುಳಗಳನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳಬಹುದು.

ಮತ್ತು ಪ್ರೈಮರಿ ಸ್ಕೂಲ್ ಕಟ್ಟಡಕ್ಕಾಗಿ, ತಾವು ಒಂದು ಸಾವಿರ ಕೊಡುತ್ತಿದ್ದೀರಿ ತಾಲ್ಲೂಕು ಬೋರ್ಡಿನವರು ಒಂದು ಸಾವಿರ ಎಂಟು ನೂರು ಕೊಡುತ್ತಿದ್ದಾರೆ. ಆದರೆ ಕಟ್ಟಡಕ್ಕೆ 5 ಸಾವಿರದವರೆಗೆ ಆಗುತ್ತದೆ. ಕೆಲವು ಲೋಕಲ್ ಕಾಂಟ್ರಿಬ್ಯೂಶನ್ ಇಂದ ಪ್ರತಿಯೊಂದು ಹಳ್ಳಿಗಳಲ್ಲೂ ಸ್ಕೂಲುಗಳನ್ನು ಕಟ್ಟಿದ್ದಾರೆ. ಕೆಲವು ಕಡೆ ಲೋಕಲ್ ಕಾಂಟ್ರಿಬ್ಯೂಶನ್ ಸಾಧ್ಯ ಇಲ್ಲದೆ ಇವತ್ತು ಶಾಲಾ ಕಟ್ಟಡಗಳು ಹಾಗೆ ನಿಂತು ಹೋಗಿವೆ. ಈಗ 5 ಪರ್‌ಸೆಂಟು ಲ್ಯಾಂಡ್ ರೆವಿನ್ಯೂವನ್ನು ಡಿವಿಜನಲ್ ಕಮೀಶನರ್ ಇಟ್ಟಿರುತ್ತಾರೆ. ಅದರಲ್ಲೂ ಇನ್‌ಕಂಪ್ಲೀಟ್ ಮಾಡಿರತಕ್ಕ ಕಟ್ಟಡಗಳಿವೆಯೋ, ಅವುಗಳಿಗೆ ಮಾತ್ರ ಈಗ 5 ಪರ್‌ಸೆಂಟ್ ಲ್ಯಾಂಡ್ ರೆವಿನ್ಯೂವನ್ನು ಉಪಯೋಗಿಸಬೇಕೆಂದು ಇಟ್ಟಿದ್ದಾರೆ. ಅದರ ಬದಲು ಎಲ್ಲಿ ಕಾಂಟ್ರಿಬ್ಯೂಶನ್ ಕೊಡುವುದಕ್ಕೆ ಸಾಧ್ಯವಾಗುವುದಿಲ್ಲವೋ, ಅಂಥ ಕಡೆ ಇದನ್ನು ಉಪಯೋಗಿಸಿ ಕಟ್ಟುವುದಕ್ಕೆ ಏರ್ಪಾಡು ಮಾಡಬೇಕೆಂದು ನಾನು ಹೇಳುತ್ತೇನೆ.

ಇನ್ನು ಪ್ರೈಮರಿ ಶಿಕ್ಷಣದಲ್ಲಿ ಈ ಚಿಕ್ಕಮಕ್ಕಳ ಪಠ್ಯಪುಸ್ತಕಗಳು ತುಂಬಾ ಭಾರವಾಗಿದೆ. 3–4 ಭಾಷೆಗಳನ್ನು ಚಿಕ್ಕವಯಸ್ಸಿನಲ್ಲೇ ಇಟ್ಟರೆ ಬಹಳ ತೊಂದರೆಯಾಗುತ್ತದೆ. ಮತ್ತು ಈಗ ಇಂಗ್ಲೀಷ್ ಮೀಡಿಯಂನ ಎರಡನೆ ಪುಸ್ತಕ ಫಾರಿನ್‌ನಿಂದ ಬರಬೇಕಾಗಿದೆ. ಒಂದೊಂದು ಪುಸ್ತಕಕ್ಕೆ 7–8 ರೂಪಾಯಿ. ಇದು ಯಾರಿಗೆ ಸಾಧ್ಯ, ಯಾರಿಗೆ ಅಸಾಧ್ಯವೆಂಬುದನ್ನು ವಿಚಾರ ಮಾಡಬೇಕು. ಇದು ಪರದೇಶಗಳಿಂದ ಏಕೆ ತರಿಸಬೇಕು? ಇಲ್ಲಿ ಯಾರೂ ಬರೆಯುವವರು ಇಲ್ಲವೆ? ಇದನ್ನ ಇವತ್ತು ನಾನು ತರಲಿಲ್ಲ, ಬೇಕಾದರೆ ತಂದು ತೋರಿಸುತ್ತೇನೆ; ಅದು ಏನಾದರೂ ಓದಿದರ ಅರ್ಥವಾಗಿರುತ್ತದೆಯೇ ಎಂಬುದನ್ನು ನೋಡಿ. ದಯವಿಟ್ಟು ಇಂಥ ಪುಸ್ತಕಗಳನ್ನು ಯಾವುದಕ್ಕೋಸ್ಕರ ಮಾಡುವುದು ಎಂಬುದನ್ನು ನೋಡಿ, ಇನ್ನು ಮುಂದಾದರೂ ಹಾಗೆ ಮಾಡಬಾರದೆಂದು ನಾನು ಕೇಳಿಕೊಳ್ಳುತ್ತೇನೆ.

ಮತ್ತು ಹೈಸ್ಕೂಲ್ ವಿದ್ಯಾಭ್ಯಾಸದ ಬಗ್ಗೆ ಹೇಳುವುದಾದರೆ, ಈಗಾಗಲೇ ಮಾನ್ಯ ಸದಸ್ಯರನೇಕರು ಮಾತನಾಡಿದ್ದಾರೆ. ಈ ಹಿಂದಿ ಪುಸ್ತಕಗಳನ್ನು ನೀವು ಯಾವಾಗ ಕೊಟ್ಟಿರಿ? ಪರೀಕ್ಷೆಗೆ ಮೂರು ನಾಲ್ಕು ತಿಂಗಳು ಇರುವಾಗ ಎಸ್. ಎಸ್. ಎಲ್. ಸಿ. ಯವರಿಗೆ ಈ ಹಿಂದಿ ಪುಸ್ತಕಗಳನ್ನು ಒದಗಿಸಿದರೆ. ಎಷ್ಟೋ ಜನ ಇದರೊಳಗೆ ಫೈಲ್ ಆಗಿ ನಂತರ ಅವರಿಗೆ ಗ್ರೇಸ್ ಮಾರ್ಕ್ಸ್ ಕೊಟ್ಟರೆ ಅದು ಸರಿಕಾಣುವುದಿಲ್ಲ. ಇನ್ನು ಮುಂದಾದರೂ ಆ ರೀತಿ ಮಾಡಬಾರದೆಂದು ನಾನು ಕೇಳಿಕೊಳ್ಳುತ್ತೇನೆ.

ರಾಯಚೂರು, ಗುಲ್ಬರ್ಗ ಮತ್ತು ಬಿದರೆ ಜಿಲ್ಲೆಗಳಲ್ಲಿ ಹೈಸ್ಕೂಲ್ ಓದುವ ಮಹಿಳೆಯರಿಗೆ ತೊಂದರೆಯಾಗುತ್ತದೆ. ಕೊಪ್ಪಳದಲ್ಲಿ 120 ಮಂದಿ ಹುಡುಗಿಯರು ಇದ್ದರೂ ಸಹ ಬೇರೆ ಒಂದು ಅವರಿಗೆ ಹೈಸ್ಕೂಲ್ ಇಲ್ಲ. ಈ ಕಡೆಗೆ ಸರ್ಕಾರದವರು ಹೆಚ್ಚು ಲಕ್ಷ್ಯ ಕೊಡಬೇಕು. ಸಿಂಧನೂರು ಮತ್ತು ಮಾನ್ವಿಯಲ್ಲಿ ಹೆಣ್ಣು ಮಕ್ಕಳಿಗಾಗಿ ಹೈಸ್ಕೂಲ್‌ಗಳನ್ನು ಪ್ರಾರಂಭ ಮಾಡಬೇಕು. ಅಲ್ಲಿ ಮುಸ್ಲೀಮ್ ಹುಡುಗಿಯರು ಪರದಾ ಹಾಕಿಕೊಳ್ಳುವುದರಿಂದ ಒಂದೇ ಸ್ಕೂಲಿನಲ್ಲಿ ಓದಲು ಇಷ್ಟಪಡುವುದಿಲ್ಲ. ಆದ್ದರಿಂದ ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾದ ಸ್ಕೂಲ್ ತೆರೆಯಬೇಕು ಮತ್ತು ಅವರಿಗಾಗಿ ಹಾಸ್ಟೆಲ್‌ಗಳನ್ನು ಕಟ್ಟಿಸಿಕೊಟ್ಟರೆ ಹೆಣ್ಣುಮಕ್ಕಳು ಓದುವುದಕ್ಕೆ ಅನುಕೂಲವಾಗಿತ್ತದೆಂದು ಸರ್ಕಾರದವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಯೂನಿವರ್ಸಿಟಿ ಎಜುಕೇಷನ್ ಬಗ್ಗೆ ಹೇಳಬೇಕೆಂದರೆ ಈಗಾಗಲೇ ಮಹಾರಾಜ ಮತ್ತು ಯುವರಾಜ ಕಾಲೇಜುಗಳಲ್ಲಿ ಯು. ಜಿ. ಸಿ. ಸ್ಕೇಲ್‌ನ್ನು ಅಲ್ಲಿಯ ಲೆಕ್ಚರಗಳಿಗೆ ಕೊಡುತ್ತಿದ್ದೀರಿ. ಅದೇ ಗೌರ್ನಮೆಂಟ್ ಕಾಲೇಜುಗಳಲ್ಲಿ ಕೆಲಸ ಮಾಡುತ್ತಿರುವ ಲೆಕ್ಚರರ್‌ಗಳಿಗೆ ಏತಕ್ಕೆ ಕೊಡುತ್ತಿಲ್ಲ.?

**ಶ್ರೀ ಕೆ.ವಿ. ಶಂಕರಗೌಡ (ವಿದ್ಯಾಶಾಖೆಯ ಮಂತ್ರಿಗಳು).**– ಮಹಾರಾಜ ಮತ್ತು ಯುವರಾಜ ಕಾಲೇಜಿನಲ್ಲಿರುವ ಲೆಕ್ಚರರ್‌ಗಳಿಗೆ ಯು. ಜಿ.ಸಿ. ಸ್ಕೇಲ್‌ಗಳನ್ನು ಕೊಡುತ್ತಿಲ್ಲ.

**ಶ್ರೀಮತಿ ಬಸವರಾಜೇಶ್ವರಿ.**– ನನ್ನ ಗಮನಕ್ಕೆ ಬಂದಿದ್ದರಿಂದ ಹೇಳಿದೆ. ಇನ್ನು ಪ್ರಮೋಷನ್ ವಿಚಾರದಲ್ಲಿ ಲೆಕ್ಚರರ್‌ಗಳಾಗಿ 10–15 ವರ್ಷ ಸರ್ವಿಸ್ ಮಾಡಿದ್ದರೂ ಸಹ ಅವರಿಗೆ ಪ್ರಮೋಷನ್ ಕೊಡುತ್ತಿಲ್ಲವೆಂದು ತಿಳಿದಿಬಂದಿದೆ. ಎಲ್ಲಾ ಇಲಾಖೆಗಳಲ್ಲೂ ಪ್ರಮೋಷನ್ ಕೊಡುವಂತೆ ಇವರಿಗೂ ಏತಕ್ಕೆ ಕೊಡಬಾರದು? 10–15 ವರ್ಷ ಸರ್ವಿಸ್ ಆದ ಲೆಕ್ಚರರ್‌ಗಳಿಗೆ ಪ್ರಮೋಷನ್ ಕೊಟ್ಟರೆ ಅವರು ಉತ್ಸಾಹದಿಂದ ಕೆಲಸ ಮಾಡುತ್ತಾರೆ.

ಇನ್ನು ಪಿ. ಯು. ಸಿ. ಯಲ್ಲಿ ಕನ್ನಡ ಮೀಡಿಯಮ್‌ನ್ನು ಜಾರಿಗೆ ತಂದಿದ್ದೀರಿ. ಕನ್ನಡದಲ್ಲಿ ಪಾಠ ಹೇಳಿಕೊಡುವ ಎಲ್ಲಾಸಬ್ಜೆಕ್ಟ್‌ಗಳಲ್ಲೂ ವಿದ್ಯಾರ್ಥಿಗಳು ಪಾಸ್ ಆಗುತ್ತಾರೆ ಅದೇ ಇಂಗ್ಲೀಷ್‌ನಲ್ಲಿ 26–27 ಜನ ವಿದ್ಯಾರ್ಥಿಗಳು ಪರೀಕ್ಷೆಗೆ ಕೂತರೆ 20–21 ಜನ ವಿದ್ಯಾರ್ಥಿಗಳು ಫೇಲಾಗಿರುತ್ತಾರೆ. ಆದ್ದರಿಂದ ಎಲ್ಲಾ ಕಡೆಗಳಲ್ಲೂ ಕನ್ನಡ ಮೀಡಿಯಮ್‌ನ್ನು ಜಾರಿಗೆ ತರಬೇಕು. ಇದರ ಬಗ್ಗೆ ಹೆಚ್ಚಿನ ಲಕ್ಷ್ಯವನ್ನು ಕೊಡಬೇಕೆಂದು ಹೇಳುತ್ತೇನೆ. ಮತ್ತು ಒಂದೊಂದು ಸೆಕ್ಷನ್‌ನಲ್ಲಿ 150ರಿಂದ 200ರರವರೆಗೆ ಹುಡುಗರು ಇರುತ್ತಾರೆಂದು ತಿಳಿದುಬಂದಿದೆ. ಇಷ್ಟು ಜನ ಹುಡುಗರಿಗೆ ಒಬ್ಬ ಲೆಕ್ಚರರ್ ಪಾಠ ಹೇಳುವುದರಿಂದ ಹುಡುಗರಿಗೆ ತೊಂದರೆಯಾಗುತ್ತದೆ. 70–80 ಜನ ಹುಡುಗರು ಒಂದೊಂದು ಸೆಕ್ಷನ್‌ನಲ್ಲಿರುವುದರಿಂದ ತೊಂದರೆಯಾಗುವುದಿಲ್ಲ. 150ರಿಂದ 200 ಜನ ಹುಡುಗರಿಗೆ ಒಬ್ಬ ಪಾಠ ಹೇಳಿ ಕೊಡುವುದೆಂದರೆ ಬಹಳ ತೊಂದರೆಯಾಗುತ್ತದೆ. ಈ ಕಡೆ ಸ್ವಲ್ಪ ಲಕ್ಷ್ಯ ಕೊಟ್ಟು ಸರಿಪಡಿಸಬೇಕು.

ಇನ್ನು ನಮ್ಮ ರಾಯಚೂರು ಜಿಲ್ಲೆಗೆ ವ್ಯವಸಾಯದ ಕಾಲೇಜು ಬೇಕು ಎನ್ನುವ ವಿಷಯ ಎಲ್ಲರಿಗೂ ತಿಳಿದಿದೆ. ಇಂಜನಿಯರಿಂಗ್ ಕಾಲೇಜನ್ನು ಗುಲ್ಬರ್ಗಾಕ್ಕೆ ಕೊಡುವಾಗ ರಾಯಚೂರಿಗೆ ಮೆಡಿಕಲ್ ಕಾಲೇಜ್ ಕೊಡುತ್ತೇವೆಂದು ಹೇಳಿದರು. ಮತ್ತೆ ಕಾಲೇಜ್ ಕೊಡಬೇಕೆಂದು ಕೇಳಿದಾಗ ವ್ಯವಸಾಯದ ಕಾಲೇಜನ್ನು ಕೊಡುತ್ತೇವೆಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿದರು. ರಾಯಚೂರಿಗೆ ಒಂದು ವ್ಯವಸಾಯದ ಕಾಲೇಜನ್ನು ಕೊಡುತ್ತೇವೆಂದು ಹೇಳಿದ್ದರೂ ಸಹ ಇದುವರೆಗೆ ಪ್ರಾರಂಭಮಾಡಿಲ್ಲ. ಇದರಿಂದ ನಮಗೆ ಅಸಮಾಧಾನವಾಗಿದೆ. ಯೂನಿವರ್ಸಿಟಿಯವರು ಒಪ್ಪಲಿಲ್ಲವೆಂದು ಒಂದು ಸಾರಿ ಹೇಳಿದರು. ದುಡ್ಡಿಗೆ ತೊಂದರೆಯಿರುವುದರಿಂದ ಅದರ ಬಗ್ಗೆ ವಿಚಾರ ಮಾಡಲು ಒಂದು ಸಬ್ ಕಮಿಟಿಯನ್ನು ಕರೆದಿದ್ದೇವೆಂದು ಹೇಳಿದರು. ಇರುವ ತೊಂದರೆಗಳನ್ನೆಲ್ಲಾ ನಿವಾರಿಸಿ ಮಾನ್ಯ ಮುಖ್ಯಮಂತ್ರಿಗಳು ಒಂದು ವ್ಯವಸಾಯದ ಕಾಲೇಜನ್ನು ನಮ್ಮ ರಾಯಚೂರು

ಜಿಲ್ಲೆಗೆ ಕೊಡಬೇಕು. ಸಂಬಂಧಪಟ್ಟ ಇಲಾಖೆಯವರು ಯಾವ ಜಾಗದಲ್ಲಿ ಸ್ಥಳ ಬೇಕೆಂದು ಕೇಳುತ್ತಾರೋ ಆ ಜಾಗವನ್ನ ನಾವು ಕೊಡಿಸುತ್ತೇವೆ. ಜಾಗಕ್ಕೆ ನಾವು ಜವಾಬ್ದಾರರು.

ಇನ್ನು ಹಾಸ್ಟಲ್ ವಿಚಾರ ಹೇಳಬೇಕೆಂದರೆ ಮೆಡಿಕಲ್ ಕಾಲೇಜಿನ ಹಾಸ್ಟೆಲ್‌ನಲ್ಲಿ ನೀರಿನ ಸೌಕರ್ಯವಿಲ್ಲದೆ ಹುಡುಗರಿಗೆ ತೊಂದರೆಯಾಗುತ್ತಿದೆಯೆಂದು ನನ್ನ ಗಮನಕ್ಕೆ ಬಂದಿದೆ.

ಹುಡುಗರಿಗೆ ಊಟ ಮಾಡಲು ಒಂದು ಡೈನಿಂಗ್ ಹಾಲ್ ಇಲ್ಲ. ಒಂದು ಗ್ಲಾಸ್ ನೀರು ಬೇಕಾದರೆ 5 ಪೈಸೆ ಕೊಡಬೇಕಾಗಿದೆ. ಮೆಡಿಕಲ್ ಕಾಲೇಜ್ ಹಾಸ್ಟೆಲ್‌ಗಾಗಿ ಸರ್ಕಾರದವರು 5-10 ಖರ್ಚುಗಳು ಆಗಬೇಕಾಗಿದೆ. ಒಂದು ನಿಧಿಯನ್ನು ಕಲ್ಪಿಸಿ ಕೊಡಬೇಕು. ಇಲ್ಲದಿದ್ದರೆ ವಿದ್ಯಾರ್ಥಿಗಳು ಹೋಟೆಲ್‌ಗೆ ಊಟಕ್ಕೆ ಹೋಗಬೇಕಾಗುತ್ತದೆ. ಇದನ್ನು ನಿವಾರಣೆ ಮಾಡಬೇಕೆಂದು ಹೇಳುತ್ತೇನೆ.

ಇನ್ನು ನಮ್ಮ ರಾಯಚೂರು ಜಿಲ್ಲೆಯಲ್ಲಿ ಹೈಸ್ಕೂಲ್‌ಗಳ ಕೊರತೆಯಿರುವುದರಿಂದ ತಾಲ್ಲೂಕ್ ಬೋರ್ಡಿನವರು ಕೆಲವು ಹೈಸ್ಕೂಲ್‌ಗಳನ್ನು ಕಟ್ಟಿಸಲು ಜಾಗವನ್ನು ಖರೀದಿ ಮಾಡಿದ್ದಾರೆ. ಆದ್ದರಿಂದ ತಾಲ್ಲೂಕ್ ಬೋರ್ಡಿನವರು ಕಟ್ಟಿಸುವ ಹೈಸ್ಕೂಲ್‌ಗಳಗೆ ಪ್ರಥಮತಃ ಗಮನಕೊಟ್ಟು ಬಿಲ್ಡಿಂಗ್ ಗ್ರಾಂಟನ್ನು ತೀವ್ರವಾಗಿ ಮಂಜೂರು ಮಾಡಬೇಕು. ಕೌತಾಲ್, ಗೂಂಜೂಟ ಮತ್ತು ಮುದ್‌ಗಲ್‌ನಲ್ಲಿ ಹೈಸ್ಕೂಲ್ ಕಟ್ಟಡಗಳನ್ನು ಕಟ್ಟಿಸಲು ತಾಲ್ಲೂಕ್ ಬೋರ್ಡಿನವರು ಜಾಗವನ್ನು ಖರೀದಿ ಮಾಡಿದ್ದಾರೆ. ಅವರಿಗೆ ಜಾಗ್ರತೆ ಬಿಲ್ಡಿಂಗ್ ಗ್ರಾಂಟನ್ನು ಮಂಜೂರು ಮಾಡಬೇಕು. ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಮಾನ್ಯ ಉಪಸಭಾಧ್ಯಕ್ಷರೇ ರಾಷ್ಟ್ರೀಯ ಶಿಕ್ಷಣ ನೀತಿ 1986 ಕರಡಿನ ಮೇಲೆ ನಡೆಯುತ್ತಿರುವ ಚರ್ಚೆಯಲ್ಲಿ ನಾನು ಇದೀಗ ಪಾಲ್ಗೊಳ್ಳುತ್ತಿದ್ದೇನೆ.

ಒಬ್ಬ ವ್ಯಕ್ತಿಯ ಸರ್ವೋತ್ತೋಮುಖ ಅಭಿವೃದ್ಧಿಗೆ ಶಿಕ್ಷಣವೇ ಜೀವಾಳ ಇಂತಹ ಸರ್ವೋತ್ತೋಮುಖ ಅಭಿವೃದ್ಧಿಯ ಪಥದತ್ತ ಸಾಗುತ್ತಿದ್ದೇವೆ ಈ ನಿಟ್ಟಿನಲ್ಲಿ ಸಹಕಾರ ನೀಡುವ ನೂತನ ಶಿಕ್ಷಣ ನೀತಿ ಪರಿಚಯಿಸುವ ದಿಟ್ಟ ನಿರ್ಧಾರ ತೆಗೆದುಕೊಂಡ ಮಾನ್ಯ ಪ್ರಧಾನ ಮಂತ್ರಿಗಳಾದ ಶ್ರೀ ರಾಜೀವ್ ಗಾಂಧಿಯವರನ್ನು ಈ ಸಂದರ್ಭದಲ್ಲಿ ನಾನು ಅಭಿನಂದಿಸಲು ಇಚ್ಛಿಸುತ್ತೇನೆ ಈ ನೂತನ ನೀತಿ ಪರಿಚಯಿಸುವಲ್ಲಿ ಇಂಬಾಗಿನಿಂತ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರಾದ ಮಾನ್ಯ ಪಿ.ವಿ. ನರಸಿಂಹರಾವ್‌ಜಿ ಅವರಿಗೂ ಅಭಿನಂದನೆ ಸಲ್ಲಿಸುತ್ತೇನ ಶಿಕ್ಷಣ ನೀತಿ ಬಗ್ಗೆ ಇತ್ತೀಚೀಗೆ ನಡೆದ ಸಭೆಯಲ್ಲಿ ಕೂಲಂಕುಶ ಚರ್ಚೆ ಮಾಡಲಾಗಿದೆ ಈ ಸಭೆಯಲ್ಲಿ ಪಾಲ್ಗೊಂಡಿದ್ದ

ವಿವಿಧ ರಾಜ್ಯಗಳ ಸಚಿವರು ತಮ್ಮ ಅಮೂಲ್ಯ ಸಲಹೆ ಸೂಚನೆಗಳನ್ನು ನೀಡಿದ್ದಾರೆ ಈ ಕರುಡು ನಿರ್ಣಯವನ್ನು ಇದೇ ಆಗಸ್ಟ್ ತಿಂಗಳಲ್ಲಿ ನಡೆಯುವ ಅಧಿವೇಶನದ ಮುಂದಿಡಲು ಸಭೆಯಲ್ಲಿ ಸಲಹೆ ಮಾಡಲಾಗಿದೆ ಮೂತನ ಶಿಕ್ಷಣ ನೀತಿಯ ಕೆಲವು ಪ್ರಮುಖ ಲಕ್ಷಣಗಳು ಇಂತಿವೆ:

1) ಮಹಿಳೆಯರಿಗೆ , ಪರಿಶಿಷ್ಟ ವರ್ಗ, ಪರಿಶಿಷ್ಟ ಜಾತಿ, ಬುಡಕಟ್ಟು ಸಮುದಾಯ ಅಲ್ಪ ಸಂಖ್ಯಾತ ಮತ್ತು ಅಂಗವಿಕರಿಗೆ ಸಮಾನ ಶೈಕ್ಷಣಿಕ ಅವಕಾಶ.

2) 1990 ರ ವೇಳೆಗೆ ಪ್ರಾಥಮಿಕ ಹಂತದ ಸಾರ್ವತ್ರಿಕ ನೊಂದಾವಣೆ ಪೂರ್ಣಗೊಳಿಸುವುದು 1995 ರ ವೇಳೆಗೆ ಹಿರಿಯ ಪ್ರಾಥಮಿಕ ಶಾಲಾ ನೊಂದಾವಣೆ ಪೂರ್ಣಗೊಳಿಸುವುದು.

3) ಹೊಸ ದೃಷ್ಟಿ ಕೋನ ಆಧಾರಿತ ಶಿಕ್ಷಣ,

4) ಶಿಕ್ಷಕರಿಗೆ ಪ್ರೋತ್ಸಾಹ ಇತ್ಯಾದಿ, ಇತ್ಯಾದಿ

ಸ್ವಾತಂತ್ರ್ಯ ಹೋರಾಟ ಅವಧಿಯಿಂದಲೂ ಸಾಕ್ಷರತೆ ಪ್ರಧಾನ ಆದ್ಯತೆಗಳಲ್ಲಿ ಒಂದಾಗಿ ಗುರುತಿಸಲ್ಪಟ್ಟಿದೆ ಸ್ವಾವಲಂಬಿ ಮತ್ತು ಸ್ವತಂತ್ರ ಸಮಾಜದ ನಿರ್ಮಾಣಕ್ಕೆ ಅನಕ್ಷರತೆ ಮತ್ತು ದಾರಿದ್ರ್ಯ ತೊಲಗಬೇಕು ಎನ್ನುವುದು ಮಹಾತ್ಮಗಾಂಧೀಜಿಯವರ ಭವಿಷ್ಯತ್ತಿನ ದೃಷ್ಟಿಕೋನವಾಗಿತ್ತು.

ಭಾರತದ ಸಾಕ್ಷರತೆ ಬೆಳವಣಿಗೆ ಪ್ರಮಾಣ ತೀರ ಕಡಿಮೆಯಿದೆ ಅನ್ನುವುದು ಏಷಿಯನ್ ಮತ್ತು ಪೆಸಿಫಿಕ್ ಪ್ರದೇಶಗಳಲ್ಲಿ ಯುನೆಸ್ಕೊ ನಡೆಸಿದ ಸರ್ವೆಯಿಂದ ತಿಳಿದು ಬಂದಿದೆ ಭಾರತದ ಸಾಕ್ಷರತೆ ಮಟ್ಟ ಅಫ್ಘಾನಿಸ್ತಾನ,ಬಾಂಗ್ಲಾದೇಶ, ನೇಪಾಳ, ಪಾಕಿಸ್ತಾನಕ್ಕಿಂತಲು ಭಿನ್ನವಾಗಿಲ್ಲ ಅನ್ನುವುದು ತಿಳಿದು ಬಂದಿದೆ ಇನ್ನೊಂದೆಡೆ ಕೊರಿಯಾ,ಫಿಲಿಫೈನ್ಸ್,ಸಿಂಗಾಪುರ, ವಿಯಟ್ನಾಂ ಮತ್ತು ಮಾಲ್ಡೀವ್ಸ್ ನಂತಹ ಸಣ್ಣ ಪುಟ್ಟ ರಾಷ್ಟ್ರಗಳು ಶೇ 80 ರ ಸಾಕ್ಷರತಾ ಸಾಧನೆ ದಾಟಿ ಮುನ್ನಡೆದಿವೆ.

1951 ರಲ್ಲಿ ಪ್ರತಿ ಇಬ್ಬರಲ್ಲಿ ಒಬ್ಬ ಅನಕ್ಷರಸ್ಥ ಇರುವುದು ತಿಳಿದುಬರುತ್ತದೆ ಇದು 1981 ರ ವೇಳೆಗೆ ಇನ್ನಷ್ಟು ಕೆಟ್ಟ ಹಂತ ತಲುಪುತ್ತದೆ ಈ ವೇಳೆ ಅನಕ್ಷರತೆ ದ್ವಿಗುಣಗೊಂಡಿರುವುದು ತಿಳಿದು ಬರುತ್ತದೆ ಪ್ರಸ್ತುತ ದೇಶದ ಸಾಕ್ಷರತಾ ಮಟ್ಟ ಆಧರಿಸಿ ನಡೆದ ಸಮೀಕ್ಷೆ ಪ್ರಕಾರ ಈ ಶತಮಾನದ ಹಂತದ ವೇಳೆಗೆ ಭಾರತ ಅನಕ್ಷರಸ್ಥರ ಬಹುದೊಡ್ಡ ದೇಶವಾಗಿ ಕಾಣಿಸಿಕೊಳ್ಳಲಿದೆ ಇದಕ್ಕೆ ಹೆಚ್ಚುತ್ತಿರುವ ಜನಸಂಖ್ಯೆ ಪ್ರಮುಖ ಕಾರಣವೆನಿಸಿದೆ

ಅನಕ್ಷರತೆಯ ಈ ಪಿಡುಗು ತಪ್ಪಿಸಲು ನಮ್ಮ ಸರ್ಕಾರ ಈಗ ಕಟಿ ಬದ್ಧವಾಗಿದೆ ಅದಕ್ಕಾಗಿಯೇ 1990 ರ ವೇಳೆಗೆ ಪ್ರಾಥಮಿಕ ಹಂತದ ಸಾರ್ವತ್ರಿಕ ನೊಂದಾವಣೆ ಪೂರ್ಣಗೊಳಿಸಲು ನಿಶ್ಚಯಿಸಿದೆ 1985 ರವೇಳೆಗೆ ಮಾಧ್ಯಮಿಕ ಶಾಲೆಯ ನೊಂದಾವಣೆ ಗುರಿಯನ್ನು ತಲುಪಲು ನಿರ್ಧರಿಸಲಾಗಿದೆ.

# ಸರ್ವರಿಗೂ ಶಿಕ್ಷಣ

ನೂತನ ಶಿಕ್ಷಣ ನೀತಿ ಅಸಮಾನತೆಯನ್ನು ತೊಡೆದುಹಾಕುವ ಗುರಿಹೊಂದಿದೆ ಮಹಿಳೆಯರ ಸ್ಥಾನಮಾನ ಸುಧಾರಣೆಯ ನಿಟ್ಟಿನಲ್ಲಿ ಈ ಶಿಕ್ಷಣ ನೀತಿ ಸಾಮರ್ಥ್ಯ ಮಧ್ಯವರ್ತಿ ರೀತಿ ಕೆಲಸ ನಿರ್ವಹಿಸಲಿದೆ ಹಿಂದಿನ ಜಡ ಆಚರಣೆಗಳನ್ನು ಪುಡಿಮಾಡಲಿದೆ ಮಹಿಳೆಯರ ಅಭಿವೃದ್ಧಿ ದೃಷ್ಟಿಯಿಂದ ಮಹತ್ವದ ಪಾತ್ರ ವಹಿಸಲಿದೆ.

ಹೊಸ ಮೌಲ್ಯಗಳ ಉನ್ನತಿಗೂ ಈ ನೂತನ ಶಿಕ್ಷಣ ನೀತಿ ಪೂರಕವಾಗಿದೆ ವಿವಿಧ ಕೊರ್ಸ್‌ಗಳನ್ನು ಪರಿಚಯಿಸುವ ಮೂಲಕ ಮಹಿಳಾ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಲಿದೆ ಮಹಿಳಾ ಪ್ರಗತಿಗೆ ಪೂರಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಶಿಕ್ಷಣ ಸಂಸ್ಥೆಗಳಿಗೆ ಪ್ರೋತ್ಸಾಹ ಲಭ್ಯವಾಗಲಿದೆ.

ಮಹಿಳಾ ಅನಕ್ಷರತೆ ತೊಡೆದು ಹಾಕುವ ನಿಟ್ಟಿನಲ್ಲಿ ಅನೇಕ ಪೂರಕ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ ಶಿಕ್ಷಣದಲ್ಲಿನ ತಾರತಮ್ಯ ಧೋರಣೆಗೆ ತಡೆಹಾಕಲಾಗಿದೆ. ವೃತ್ತಿ ಶಿಕ್ಷಣದಲ್ಲಿ ಮಹಿಳೆಯರಿಗೆ ಆದ್ಯತೆ ಕಲ್ಪಿಸಲಾಗಿದೆ. ಅಸಂಪ್ರದಾಯಿಕ ಉದ್ಯೋಗ ಮತ್ತು ಮುಂದೆ ಕಾಣಿಸಿಕೊಳ್ಳಲಿರುವ ತಾಂತ್ರಿಕ ಕ್ಷೇತ್ರದಲ್ಲಿ ಮಹಿಳೆಯ ಸಹಭಾಗಿತ್ವವನ್ನು ನೀರಿಕ್ಷಿಸಲಾಗಿದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಅಂಗವಿಕಲರು ಮತ್ತು ಅಲ್ಪಸಂಖ್ಯಾತರಿಗೆ ಕಲ್ಪಿಸಿರುವ ಅವಕಾಶ ಶಿಕ್ಷಣ ರಂಗದ ಇನ್ನೊಂದು ಮೈಲಿಗಲ್ಲು ಎನಿಸಿದೆ ಪ್ರಾಥಮಿಕ ಶಿಕ್ಷಣ ಈ ನೂತನ ನೀತಿಯ ಪ್ರಥಮ ಆದ್ಯತೆಯಾಗಿದೆ ಇದು ಮಕ್ಕಳನ್ನು ಕೇಂದ್ರಿಕರಿಸಿದೆ ಪ್ರೌಢ ಶಿಕ್ಷಣ ವಿಜ್ಞಾನ, ಮಾನವೀಯ ಮೌಲ್ಯಗಳು ಮತ್ತು ಸಮಾಜ ವಿಜ್ಞಾನದ ಪ್ರಗತಿಯ ದೃಷ್ಟಿಯಿಂದ ಮಹತ್ವದ ಪಾತ್ರ ನಿರ್ವಹಿಸಿ ಉನ್ನತ ಶಿಕ್ಷಣ ಅವಕಾಶ ಹೆಚ್ಚಿಸುವ ದೃಷ್ಟಿಯಿಂದ ಮತ್ತು ಶಿಕ್ಷಣದ ಪ್ರಜಾಪ್ರಭುತ್ವೀಕರಣದ ದೃಷಿಯಿಂದ ಮುಕ್ತ ವಿಶ್ವವಿದ್ಯಾಲಯ ವ್ಯವಸ್ಥೆಯನ್ನು ಆರಂಭಿಸಲಾಗಿದೆ ಈ ಉದ್ದೇಶ ಸಾಧನೆಗಾಗಿ 1985 ರಲ್ಲಿ ಇಂದಿರಾಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯ ಸ್ಥಾಪಿಸಲಾಗಿದೆ ಇದನ್ನು ಇನ್ನಷ್ಟು ಬಲಗೊಳ್ಳಲಿದೆ ಇದು ರಾಷ್ಟ್ರದ ಯಾವುದೇ ಮೂಲೆಯ ಯಾವುದೇ ವ್ಯಕ್ತಿಗೂ ಕೂಡಾ ಶುಲಭ ಶಿಕ್ಷಣ ಒದಗಿಸಲಿದೆ.

ಮಹಾತ್ಮಗಾಂಧಿಯವರು ಕ್ರಾಂತಿಕಾರಿ ಚಿಂತನೆಗಳನ್ನು ಆಧರಿಸಿ ಗ್ರಾಮೀಣ ವಿಶ್ವವಿದ್ಯಾಲಯ ಮಾದರಿ ಬಗ್ಗೆ ಪರಿಶೀಲನೆ ನಡೆಸಲಾಗುತ್ತಿದೆ.

ನಮ್ಮ ಕಾಲೇಜುಗಳು ಪ್ರತೀವರ್ಷ ಶ್ರೇಷ್ಠ ಗುಣಮಟ್ಟದ ಅನೇಕ ವಿದ್ಯಾರ್ಥಿಗಳನ್ನು ರೂಪಿಸುತ್ತಿದೆ. ನಮ್ಮ ಜೀವನದ ನಿಜವಾದ ಸಾಂಸ್ಕೃತಿಕ ಮೌಲ್ಯಗಳನ್ನು ಕಾಲೇಜು ಶಿಕ್ಷಣ ಪ್ರತಿಬಿಂಬಿಸುತ್ತದೆ. ನಮ್ಮ ರಾಷ್ಟ್ರದಲ್ಲಿ ಸಹಸ್ರಾರು ಶಾಲೆಗಳಿವೆ ಆದರೆ ಉನ್ನತ ಶಿಕ್ಷಣ ಪಡೆದ ವ್ಯಕ್ತಿಗಳು ವಿರಳ.

ಈಗ ಜಾರಿ ಇರುವ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯು ರಾಷ್ಟ್ರದ ಶ್ರೀಮಂತ ಮತ್ತು ವೈವಿಧ್ಯಮಯ ಸಂಸ್ಕೃತಿ, ಸಂಪ್ರದಾಯಗಳ ನಡುವೆ ಹೊಂದಾಣಿಕೆ ತರುವ ಕೊಂಡಿಯಾಗಬೇಕಿದೆ ಜ್ಞಾನದ ಎಲ್ಲಾ ಕೊನೆ ಶ್ರೀಮಂತ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಅಂತ್ಯಗೊಳ್ಳಬೇಕೆಂದು ಮಹಾತ್ಮಗಾಂಧಿ ಹೇಳಿದ್ದರು ಅವರ ಪ್ರಕಾರ ಶಿಕ್ಷಣ ಎಂದರೆ ಆತ್ಮ ಜ್ಞಾನವನ್ನು ಒಡಮೂಡಿಸುವಂತಹದ್ದು ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ನೂತನ ಶಿಕ್ಷಣ ನೀತಿಯಲ್ಲಿ ನೈತಿಕ ಮೌಲ್ಯಗಳಿಗೆ ಹೆಚ್ಚಿನ ಹೊತ್ತು ನೀಡಲಾಗಿದೆ.

ಕಾರ್ಯಾನುಭವಕ್ಕೆ ಈ ನೂತನ ನೀತಿಯಲ್ಲಿ ವಿಶೇಷ ಮಹತ್ವ ನೀಡಲಾಗಿದೆ ಕರ್ನಾಟಕದ 12ನೇ ಶತಮಾನದ ಕ್ರಾಂತಿಪುರುಷ ಬಸವಣ್ಣ 'ಕಾಯಕವೇ ಕೈಲಾಸ' ಎಂದರು ಕಾಯಕವೇ ಪೂಜೆ ಇದನ್ನು ಅರಿತು ಈ ಹೊಸ ನೀತಿ ರೂಪಿಸಲಾಗಿದೆ.

ನಮ್ಮ ರಾಷ್ಟ್ರದ ಭವಿಷ್ಯತ್ತು ಶಾಲಾ ಕೊಠಡಿಗಳಲ್ಲಿ ನೆಲೆನಿಂತಿದೆ ಈ ಭವಿಷ್ಯತ್ತಿನ ಶಿಲ್ಪಿ ಶಿಕ್ಷಕ ಆತ ಭವಿಷ್ಯತ್ತಿನ ಏಳಿಗೆಯನ್ನು ರೂಪಿಸುವ ರುವಾರಿ.

ಏನ್ನನ್ನು ಕಲಿಸಬೇಕು? ಅವರಿಗೆ ನೀಡುವ ವೇತನ ತೀರ ನಿಕೃಷ್ಟವಾಗಿದೆ ಗೌರವ ಗರಿಷ್ಠ ಆದರೆ ಸಂಬಳ ಕನಿಷ್ಠ ನಿಮಗೆ ಆ ಹುದ್ದೆಯ ಬಗ್ಗೆ ಗೌರವ ಇಲ್ಲದಿದ್ದರೆ ಆಸ್ಥಾನ ಆಯ್ಕೆ ಅಸಾಧ್ಯ ಎಲೆ ಮರೆಯ ಕಾಯಿಯಂತೆ ಇದ್ದು ರಾಷ್ಟ್ರ ಕಟ್ಟುವ ಶಿಕ್ಷಕನ ಪಾತ್ರ ಪ್ರಶಂಸನೀಯ ಶ್ರೇಷ್ಠ ದಂಡನಾಯಕರು ಪ್ರಚಾರಗಿಟ್ಟಿಸುತ್ತಾರೆ. ಆದರೆ ಎಲೆ ಮರೆಯಲ್ಲಿರುವ ಸೈನಿಕ ಯುದ್ಧ ಗೆಲ್ಲುತ್ತಾನೆ.

ಖ್ಯಾತ ಶಿಕ್ಷಣ ತಜ್ಞರು ಹೊಸ ವ್ಯವಸ್ಥೆಯ ರಚನಕಾರರು ಆದರೆ ಅದನ್ನು ಜಾರಿಗೊಳಿಸುವವರು ಅಪರಿಚಿತವಾಗಿರುವ ಅಭದ್ರತೆ ಮತ್ತು ಕಠಿಣ ಪರಿಸ್ಥಿತಿ ಮಧ್ಯೆ ಬದುಕುತ್ತಿದ್ದಾನೆ. ಆತನ ಕಲ್ಯಾಣಕ್ಕಾಗಿ ಪ್ರಯತ್ನ ನಡೆದಿರುವುದು ತುಂಬಾ ವಿರಳ ದಿನನಿತ್ಯದ ಕೆಲಸದಲ್ಲಿ ಶಿಕ್ಷಕನಿಗೆ ಆಗಾಧ ತಾಳ್ಮೆ ಬೇಕಾಗುತ್ತದೆ. ತರಗತಿಗಳಲ್ಲಿ ಕೆಲವು ಪುಂಡ ಯುವಕರು ನೀಡುವ ಕೀಟಲೆಗಳನ್ನು ಆತ ಸಹಿಸಬೇಕಾಗುತ್ತದೆ. ಇದೆಲ್ಲದರ ಮಧ್ಯೆ ಆತ ನಿತಂತರ ಸ್ಫೂರ್ತಿ ಕಾಯ್ದುಕೊಂಡು ಸಾಗಬೇಕಾಗುತ್ತದೆ ಬಾಲಕ ಬಾಲಕೀಯರ ಸಾಮರ್ಥ್ಯ ಹೊರಹಾಕಲು ಆತ ತನ್ನ ಜ್ಞಾನದ ಖಜಾನೆಯಲ್ಲಿರುವ ಸರಕನ್ನು ಹೊರಹಾಕಬೇಕಾಗುತ್ತದೆ. ಆತ ಹೊತ್ತಿಸಿದ ದೀಪ ಕೆಲಕಾಲದ ಬಳಿಕ ಉರಿಯ ತೊಡಗುತ್ತವೆ. ಆಗ ಅದರ ಸೊಗಸು ಆತನಿಗೆ ದಕ್ಕುತ್ತದೆ. ಇದೇ ಆತನ ಪಾಲಿನ ಗೌರವವಾಗಿ ಉಳಿಯುತ್ತದೆ. ಜ್ಞಾನವನ್ನು ವ್ಯಕ್ತಿಯಿಂದ ಪಡೆಯಬಹುದು. ಆದರೆ ಪ್ರೀತಿಯನ್ನು ಹೃದಯದಿಂದಲೇ ಪಡೆಯಬೇಕಾಗುತ್ತದೆ ಶಿಕ್ಷಕನ್ನನ್ನು ಗೌರವಿಸದೆ ಯಾವವೊಬ್ಬ ವ್ಯಕ್ತಿ ಕೂಡ ಉನ್ನತಿ ಸಾಧಿಸಲಾರ

"ತನ್ನ ಪಾಲಿಗೆ ರಾಜ ಅನ್ಯರ ಪಾಲಿಗೆ ಸೇವಕ"

ಇದನ್ನರಿತೆ ಹಿಂದೆ ಹೇಳಿದ್ದು

ಗುರು ಬ್ರಹ್ಮ ಗುರು ವಿಷ್ಣು
ಗುರು ದೇವೊ ಮಹೇಶ್ವರಹ
ಗುರು ಸಾಕ್ಷಾತ್ ಪರಬ್ರಹ್ಮ
ತಸ್ಮೈ ಶ್ರೀ ಗುರುವೇ ನಮಹಃ

ಶಿಕ್ಷಕ ಇಂದಿಗೂ ನಿಜಾರ್ಥದಲ್ಲಿ ದೇವರಾಗಿದ್ದಾನೆ. ಅಷ್ಟೇ ಅಲ್ಲ ಆತ ಓರ್ವ ಉತ್ತಮ ಗೆಳೆಯ ತತ್ವಜ್ಞಾನಿ, ಮಾರ್ಗದರ್ಶಿಯೂ ಆಗಿದ್ದಾನೆ.

ಆದ್ದರಿಂದ ಶಿಕ್ಷಕನ ಹುದ್ದೆಗೆ ನೇಮಕಾತಿ ಮಾಡುವಾಗ ಪ್ರಾಮಾಣಿಕತೆಗೆ ಆದ್ಯತೆ ನೀಡಬೇಕು. ನಿಜವಾದ ಅರ್ಹತೆ ಖಾತ್ರಿಪಡಿಸಿಕೊಂಡ ಬಳಿಕ ನೇಮಕಾತಿ ಮಾಡಬೇಕು. ನಮ್ಮ ನೂತನ ಶಿಕ್ಷಣ ನೀತಿಯಲ್ಲಿ ಈ ವಿಷಯ ಅಗ್ರ ಮನ್ನಣೆಗೆ ಪಾತ್ರವಾಗಿದೆ.

ನೂತನ ನೀತಿಯಲ್ಲಿ ವಿಶೇಷ ಆದ್ಯತೆಗೊಳಗಾದ ಇನ್ನೊಂದು ವಿಷಯವೆಂದರೆ ಮೌಲ್ಯಮಾಪನ ಭಾರತೀಯ ಶೈಕ್ಷಣಿಕ ವ್ಯವಸ್ಥೆಯಲ್ಲಿ ಕಳೆದ ಅರ್ಧ ಶತಮಾನದಿಂದಲೂ ಪರಿಕ್ಷಾ ವ್ಯವಸ್ಥೆ ಕೆಟ್ಟ ವ್ಯವಸ್ಥೆಯೆಂದು ಪರಿಗಣಿಸಲ್ಪಟ್ಟಿದೆ. ಇದನ್ನು ವಿಶ್ವ ವಿದ್ಯಾಲಯ ಶಿಕ್ಷಣ ಆಯೋಗ ದೃಢಿಕರಿಸಿದೆ. ನಮ್ಮ ರಾಷ್ಟ್ರದಲ್ಲಿನ ಪರೀಕ್ಷಾ ವಿಧಾನ ಕುರಿತು ಟೀಕೆಗಳ ಮಹಾಪೂರವೇ ಹರಿದಿದೆ. ಈ ಬಗ್ಗೆ ಪತ್ರಿಕೆಗಳಲ್ಲಿ ಸಾಕಷ್ಟು ಲೇಖನಗಳು ಪ್ರಕಟಗೊಂಡಿದೆ. ಈ ಕುರಿತು ವಿದ್ವಾಂಸರು ಅಲ್ಲಿ ಅಯೋಗ್ಯ ಮಕ್ಕಳಿಲ್ಲ ಅಯೋಗ್ಯ ಟೆಸ್ಟ್‌ಗಳಿವೆ ಮತ್ತು ಅಯೋಗ್ಯ ಪರೀಕ್ಷೆಗಳಿವೆ" ಎಂದು ಹೇಳಿದ್ದಾರೆ.

ವಿಕಾಸನ ಎಂಬ ಶಬ್ದ ಸಮಗ್ರತೆ ಸೂಚಿಸುವ ಪದವಾಗಿದೆ. ಅದು ಮೌಲ್ಯವರ್ಧಿತ ತೀರ್ಪನ್ನು ಸೂಚಿಸುತ್ತದೆ. ಇಲ್ಲಿ ಮಾಧ್ಯಮಿಕ ಶೈಕ್ಷಣಿಕ ಆಯೋಗ್ಯ ಹೇಳುವ ಪ್ರಕಾರ ವಿದ್ಯಾರ್ಥಿಯೊಬ್ಬನ ಉತ್ತೀರ್ಣತೆಯನ್ನು ವಾರ್ಷಿಕ ಪರೀಕ್ಷೆ ಆಧರಿಸಿ ತೀರ್ಮಾನಿಸಬಾರದು ಅದು ನಿರಂತವಾಗಿ ನಡೆಯುವ ಟೆಸ್ಟ್‌ಗಳು ಮತ್ತು ವಿದ್ಯಾರ್ಥಿ ತೋರುವ ಚಟುವಟಿಕೆ ಆಧರಿಸಿ ತೀರ್ಮಾನಗೊಳ್ಳಬೇಕು.

ನೂತನ ಶಿಕ್ಷಣ ನೀತಿ ಈ ಕೆಳಗಿನ ಅಂಶಗಳ ಬಗ್ಗೆ ವಿಶೇಷ ಆದ್ಯತೆ ನೀಡಿದೆ ಮೌಲ್ಯಮಾಪನ ಪ್ರಕ್ರಿಯೆ ಮತ್ತು ಪರೀಕ್ಷಣಾ ಸುಧಾರಣೆಯ ಗುರಿಗಳು ಇಂತಿವೆ:

1) ಹೆಚ್ಚುವರಿ ಮೂಲ ಅವಕಾಶ ಮತ್ತು ವ್ಯಕ್ತಿ ನಿಷ್ಠ ಸಂಗತಿಗಳನ್ನು ತೆಗೆದುಹಾಕುವುದು.

2) ಕಂಠಪಾಠಕ್ಕೆ ಆದ್ಯತೆ ತಪ್ಪಿಸುವುದು.

3) ನಿರಂತರ ಮತ್ತು ಸಮಗ್ರ ಮೌಲ್ಯಮಾಪನ

4) ಶಿಕ್ಷಕ ವಿದ್ಯಾರ್ಥಿ ಮತ್ತು ಪೋಷಕರಿಂದ ಮೌಲ್ಯಮಾಪನ ಪ್ರಕ್ರಿಯೆ ಪರಿಣಾಮಕಾರಿ ಬಳಕೆ.

5) ಪರೀಕೆ ವ್ಯವಸ್ಥೆಯಲ್ಲಿ ಸುಧಾರಣೆ.

6) ಮೂಲ ಬಳಕೆ ಸಾಮಾಗ್ರಿಗಳು ಮತ್ತು ವಿಧಾನ ಶಾಸ್ತ್ರದಲ್ಲಿ ಬದಲಾವಣೆ.

7) ಮಾದ್ಯಮಿಕ ಹಂತದಿಂದಲೇ ಸೆಮಿಸ್ಟರ್ ಪದ್ಧತಿ ಪರಿಚಯಿಸುವುದು.

8) ಅಂಶಗಳ ಬದಲಿಗೆ ಶ್ರೇಣಿ ಬಳಕೆ.

ಶಿಕ್ಷಣ ನೀತಿಯ ರಾಷ್ಟ್ರೀಯ ಪಠ್ಯ ಕ್ರಮದ ಚೌಕಟ್ಟು ಭಾರತೀಯ ಇತಿಹಾಸ,ಸಂವಿಧಾನದ ಹಕ್ಕು ಬಾಧ್ಯತೆಗಳು ಇತ್ಯಾದಿಯನ್ನು ಒಳಗೊಂಡಿರುತ್ತದೆ. ಇದು ನಮ್ಮ ರಾಷ್ಟ್ರದ ಐಕ್ಯತೆಯನ್ನು ಬಲಗೊಳಿಸುತ್ತದೆ. ಶಿಕ್ಷಣ ನೀತಿಯ ಕರುಡು ಸುಲಭ ಬದಲಾವಣೆಯ ಪ್ರಸಾಪವನ್ನೊಳಗೊಂಡಿದೆ ಈ ಬಗ್ಗೆ ಸಂಬಂಧಪಟ್ಟ ರಾಜ್ಯಗಳೇ ತೀರ್ಮಾನ ಕೈಗೊಳ್ಳಬಹುದಾಗಿದೆ ಇಲ್ಲಿ ಒಂದು ಅಪಾಯವಿದೆ. ಕೇಂದ್ರ ಸರ್ಕಾರ ತಮ್ಮ ಮನದಂತೆ ಸಾಗಲು ರಾಜ್ಯಗಳಿಗೆ ಅನುಮತಿ ನೀಡದಿದ್ದರೆ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಪೂರ್ವಾಗ್ರಹ ಮನೆಮಾಡುತ್ತದೆ.

ಶಿಕ್ಷಣ ಭಾಷಾನೀತಿ ಕುರಿತಂತೆ ಪ್ರತಿಪಕ್ಷದ ಸದಸ್ಯರಲ್ಲಿ ಕೆಲವು ಅನುಮಾನಗಳು ಉಳಿದು ಕೊಂಡಿವೆ. ಈ ನೀತಿ ಅವರ ಒಲವಿನ ಪ್ರಕಾರ ತ್ರಿಭಾಷ ಸೂತ್ರವನ್ನು ಒಳಗೊಂಡಿದೆ ನಿರ್ದಿಷ್ಟ ಭಾಷ ಕಲಿಕೆಗೆ ಒತ್ತಾಯಿಸಿ ವಿದ್ಯಾರ್ಥಿಗಳ ಮೇಲೆ ಒತ್ತಡ ಏರುವ ಪ್ರಶ್ನೆ ಇಲ್ಲಿ ಉದ್ಭವಿಸುವುದಿಲ್ಲ.

ಶ್ರೇಷ್ಠ ಗುಣಮಟ್ಟದ ಶಿಕ್ಷಣ ಗುರಿ ತಲುಪುವ ನಿಟ್ಟಿನಲ್ಲಿ ನವೋದಯ ಶಾಲೆಗಳನ್ನು ಆರಂಭಿಸಲಾಗುತ್ತಿದೆ. ಆದರೆ ನಿಧಾನಗತಿಯಲ್ಲಿ ಈ ಶಾಲೆಗಳು ಕೂಡ ಇತರೆ ಸಾರ್ವಜನಿಕ ಶಾಲೆಗಳ ರೀತಿ ಜೊಳ್ಳಾಗದಂತೆ ಮುನ್ನೆಚ್ಚರಿಕೆ ವಹಿಸಬೇಕು.

ಶಿಕ್ಷಣಕ್ಕಾಗಿ ನಮ್ಮ ರಾಷ್ಟ್ರೀಯ ವರಮಾನದ ಶೇ 3 ರಷ್ಟು ಆದಾಯವನ್ನು ಮಾತ್ರ ವ್ಯಯ ಮಾಡುತ್ತಿದ್ದೇವೆ. ನಮ್ಮ ಅನಕ್ಷರಸ್ಥರ ಸಂಖ್ಯೆ ಪರಿಗಣಿಸಿದರೆ ಈಗ ವ್ಯಯ ಮಾಡುತ್ತಿರುವ ಮೊತ್ತ ತೀರ ಕಡಿಮೆ ಇದು ಸಮಸ್ಯೆಯ ಬೃಹದತೆಯನ್ನು ಸಾರುತ್ತದೆ. ಅಗತ್ಯ ಪ್ರಮಾಣದ ಹಣ ಮೀಸಲಿಡದಿದ್ದರೆ ನಮ್ಮ ರಾಷ್ಟ್ರದ ಶೈಕ್ಷಣಿಕ ಪ್ರಗತಿ ಸಾಧಿಸುವುದಾದರೂ ಹೇಗೆ?

7ನೇ ಯೋಜನೆಯಲ್ಲಿ ಶಿಕ್ಷಣಕ್ಕಾಗಿ 5,000 ಕೋಟಿ ರೂಪಾಯಿ ಮೀಸಲಿಡಲಾಗಿದೆ. ಆದರೆ ಈ ಯೋಜನೆ ಅವಧಿಯಲ್ಲಿ ಉದ್ದೇಶಿತ ಶೈಕ್ಷಣಿಕ ಪ್ರಗತಿ ಸಾಧಿಸಲು ಕನಿಷ್ಠ 21,000 ಕೋಟಿ ರೂಪಾಯಿ ಅಗತ್ಯವಿದೆಯೆಂದು ಇತ್ತೀಚೆಗೆ ಮದ್ರಾಸಿನಲ್ಲಿ ನಡೆಸ ಶೈಕ್ಷಣಿಕ ಸಮ್ಮೇಳನವೊಂದು ಅಂದಾಜು ಮಾಡಿದೆ. ಈಗ ಇರುವ ಸವಾಲುಗಳನ್ನು ಎದುರಿಸಲು ಇನ್ನಷ್ಟು ಹೆಚ್ಚಿನ ಹಣ ಬಿಡುಗಡೆ ಮಾಡುವ ಅಗತ್ಯವಿದೆ. ಜೊತೆಗೆ ಶಿಸ್ತಿನ ಯೋಜನೆ ಉತ್ತಮ ನಿರ್ವಹಣೆ ಮತ್ತು ರಾಜಕೀಯ ಇಚ್ಛಾಶಕ್ತಿ ಇರಬೇಕಾಗುತ್ತದೆ. ಸಂವಿಧಾನದ ಪೂರ್ವಪೀಠಿಕೆ ಉಲ್ಲೇಖದ ಪ್ರಕಾರ ಸಮಾಜದಲ್ಲಿ ಸಮಾನತೆ ನೆಲೆಗೊಳ್ಳಬೇಕಾದರೆ ಮುಕ್ತತೆಯ ತತ್ವ ಗುಣಮಟ್ಟ ಮತ್ತು ನ್ಯಾಯ ಆಧರಿಸಲ್ಪಡಬೇಕು

ಇದರೊಂದಿಗೆ ನನ್ನ ಮಾತು ಮುಗಿಸುತ್ತೇನೆ.

# ಸಮಾಜ ಕಲ್ಯಾಣ

**ಗ್ರಾಮಾಂತರ ಪ್ರದೇಶಗಳಿಗೆ ಸರ್ಕಾರದ ಮೊದಲನೆಯ ಹಣ ಹರಿದು ಬರುವುದಿಲ್ಲ? ಸ್ಪಷ್ಟ ನಿಲುವು ಶ್ರೀಮತಿ ಬಸವರಾಜೇಶ್ವರಿಯವರದು.**

**ಸಮಾಜ ಕಲ್ಯಾಣ ಇಲಾಖೆಯ ಮುಂದಿರುವ ಬೇಡಿಕೆಗಳನ್ನ ಅನುಮೊದಿಸುತ್ತ ಸಲಹೆ ನೀಡಿದ ರೀತಿ, ವಿಷಯ ಮಂಡನೆಯು ಅವರ ಸಾಮಾಜಿಕ ಕಳಕಳಿಗೆ ನಿದರ್ಶನ ದಂತಿದೆ. 1967-68ರಲ್ಲಿ ಆಯವ್ಯಯ ಮುಂಗಡ ಪತ್ರದ ಬೇಡಿಕೆ ಮತ್ತು ಪೂರೈಕೆ ಸಂದರ್ಭದಲ್ಲಿ ಮಂಡನೆ ಮಾಡಿದ ಭಾಷಣ.**

**ಶ್ರೀ ಬಸವರಾಜೇಶ್ವರಿ (ಮಾನ್ವಿ).-** ಮಾನ್ಯ ಅಧ್ಯಕ್ಷರೇ, ಈಗ ನಮ್ಮ ಮುಂದಿರತಕ್ಕ ಸಮಾಜ ಕಲ್ಯಾಣ ಶಾಖೆಗೆ ಸಂಬಂಧಪಟ್ಟ ಡಿಮ್ಯಾಂಡುಗಳನ್ನು ಅನುಮೋದಿಸುತ್ತಾ ಸರ್ಕಾರಕ್ಕೆ ಕೆಲವು ಸಲಹೆಗಳನ್ನು ಕೊಡಬೇಕೆಂದು ಅಪೇಕ್ಷೆ ಮಾಡುತ್ತೇನೆ. ಸೋಷಿಯಲ್ ವೆಲ್‌ಫೇರ್ ಇಲಾಖೆಯ ಬಗ್ಗೆ ನನ್ನ ಅನುಭವಕ್ಕೆ ಬಂದ ಕೆಲವು ವಿಷಯಗಳನ್ನು ಸರ್ಕಾರದ ಗಮನಕ್ಕೆ ತರಲು ಅಪೇಕ್ಷೆ ಮಾಡುತ್ತೇನೆ. ಎರಡನೆಯ ಪಂಚವಾರ್ಷಿಕ ಯೋಜನೆಯ ಅವಧಿಯವರೆಗೂ ನಾನು ಸೋಷಿಯಲ್ ವೆಲ್‌ಫೇರ್ ಬೋರ್ಡಿನಲ್ಲಿ ಕೆಲಸ ಮಾಡಿದ್ದೇನೆ. ಮತ್ತು ಈಗ ಕೂಡ ಬೋರ್ಡಿನ ಮೆಂಬರಾಗಿದ್ದೇನೆ. ನಮ್ಮ ಕಡೆ ಮಹಿಳೆಯರು ಮತ್ತು ಮಕ್ಕಳ ಕಲ್ಯಾಣಕ್ಕೋಸ್ಕರ ಮಹಿಳಾ ಮಂಡಲಿಗಳು ಚೆನ್ನಾಗಿ ಕೆಲಸ ಮಾಡಿತ್ತಿದ್ದುವು. ಪೂರ್ತಿ ಗ್ರಾಂಟ್ ಸಿಕ್ಕುತ್ತಿತ್ತು. ಪ್ರತಿಯೊಂದು ಬ್ಲಾಕಿಗೂ 10 ಮಹಿಳಾ ಮಂಡಲಿಗಳು ಕೆಲಸ ಮಾಡುತ್ತಿದ್ದವು ಪ್ರತಿಯೊಂದುಕ್ಕೂ ಬಿ.ಡಿ.ಓ.ಗಳ ಕಂಟ್ರೋಲ್ ಇತ್ತು. ಕಮಿಟಿಗಳು ಇದ್ದವು. ನಿಗಾವಣಿ ಚೆನ್ನಾಗಿತ್ತು. ಪ್ರತಿಯೊಂದು ಕೇಂದ್ರದಲ್ಲಿಯೂ ಕೂಡ ಮುಖ್ಯ ಸೇವಕಿಯರು. ತಾಲ್ಲೂಕು ಲೆವೆಲ್‌ನಲ್ಲಿ ಗ್ರಾಮ ಸೇವಕಿಯರು ಇದ್ದರು. ಮಹಿಳಾ ಮಂಡಲಿಗಳು ಇದ್ದವು. ಕ್ರಾಫ್ಟ್ ಸೆಂಟರುಗಳನ್ನು ಶಿಶುವಿಹಾರಗಳನ್ನು ಚೆನ್ನಾಗಿ ನಡೆಸಿಕೊಂಡು ಬಂದುವು. ಎರಡನೆಯ ಪಂಚವಾರ್ಷಿಕ ಯೋಜನೆಯ ಅನಂತರ ಮಹಿಳಾ ಮಂಡಲಿಗಳನ್ನು ರದ್ದು ಮಾಡಬೇಕು. ವಾಲಂಟರಿ ಇನ್‌ಸ್ಟಿಟ್ಯೂಷನ್ಸ್ ರಿಜಿಸ್ಟರ್ ಮಾಡಬೇಕು ಎಂದು ಆದೇಶ ಬಂತು. ಈ ಮಹಿಳಾ ಮಂಡಲಿಗಳನ್ನು ರಿಜಿಸ್ಟರ್ ಮಾಡಿಸಬೇಕು, ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟಿನಿಂದ ಗ್ರಾಂಟ್ ಇನ್‌ಏಯ್ಡ್ ರೂಲ್ಸ್ ಪ್ರಕಾರ ಗ್ರಾಂಟ್ ಕೊಡಬೇಕು. ಅವರು ಆ ಮಂಡಲಿಗಳನ್ನು ನಡೆಸಬೇಕು ಎಂದು ಅಭಿಪ್ರಾಯ ಪಟ್ಟರು. ನಮ್ಮ ಮೂರು ಜಿಲ್ಲೆಗಳಲ್ಲಿಯೂ ಮಹಿಳಾ ಮಂಡಲಿಗಳು 50 ಪರ್ಸೆಂಟ್ ಮ್ಯಾಚಿಂಗ್ ಗ್ರಾಂಟ್ ಕೊಡಬೇಕು ಎನ್ನುವ ನಿಯಮ ಬಂತು. ನನ್ನ ಒಂದು ಏಳು-ಎಂಟು ವರ್ಷಗಳ ಅನುಭವದಲ್ಲಿ ಹೇಳಬೇಕಾಗಿದ್ದರೆ ಅಲ್ಲಿ ಮಹಿಳಾ

ಮಂಡಲಿಗಳು ಶಕ್ತಿ ಮೀರಿ ಕೆಲಸ ಮಾಡಿವೆ. ಯಾವಾಗ ಈ ರೀತಿ ಸರ್ಕಾರದವರು ಮಹಿಳಾ ಮಂಡಲಿಗಳನ್ನು ರಿಜಿಸ್ಟರ್ ಮಾಡಬೇಕು 50 ಪರ್ಸೆಂಟ್ ಹಣವನ್ನು ಮ್ಯಾಚಿಂಗ್ ಮಾಡಬೇಕೆಂದು ಒಂದು ನಿಯಮವನ್ನು ಮಾಡಿದರೋ ಅದರಿಂದ ಆ ಮಹಿಳಾ ಮಂಡಲಿಗಳೆಲ್ಲವೂ ಮುಚ್ಚುವ ಪರಿಸ್ಥಿತಿ ಬಂದಿದೆ. ಸರ್ಕಾರದವರು ಕೊಡ ತಕ್ಕ ಗ್ರಾಂಟ್ ಸಿಕ್ಕುವುದಿಲ್ಲ ಮ್ಯಾಚಿಂಗ್ ಮಾಡಬೇಕು. ಸಣ್ಣ ಸಣ್ಣ ಮಕ್ಕಳಿಗೆ ಶಿಶುವಿಹಾರಗಳನ್ನು ನಡೆಸಬೇಕು, ಕ್ರಾಫ್ಟ್ ಸೆಂಟರುಗಳನ್ನು ಮಾಡಿ ಅವುಗಳನ್ನ ನಡೆಸಿಕೊಂಡು ಹೋಗಬೇಕು. ಎಂದರೆ ಮಹಿಳಾ ಮಂಡಲಿಗಳು ಈ ಕೆಲಸವನ್ನು ನಡೆಸುವುದಕ್ಕೆ ಸಾಧ್ಯವಾಗುವುದಿಲ್ಲ. ವಾಲಂಟಿಯರ್ ಆಗಿ ನಾವೇ ಹೋಗಿ ಕರೆದುಕೊಂಡು ಬಂದರೂ ಬಾರದೇ ಇರುವ ಹೆಣ್ಣು ಮಕ್ಕಳು ದುಡ್ಡು ಕೊಟ್ಟು ಬನ್ನಿ ಎಂದರೆ ಯಾರು ಬರುತ್ತಾರೆ? ಇದರಿಂದಾಗಿ ಮಹಿಳಾ ಮಂಡಲಿಗಳ ಚಟುವಟಿಕೆಗಳು ನಡೆಯುತ್ತಿಲ್ಲ. ಯಾವ ಕೇಂದ್ರದಲ್ಲೂ ಕೂಡ ಗ್ರಾಮ ಸೇವಕಿಯರು ಮತ್ತು ಮುಖ್ಯ ಸೇವಕಿಯರು ಇಲ್ಲ. ಮಹಿಳಾ ಕಾರ್ಯ ಕರ್ತರೂ ನಿಂತುಹೋಗಿದ್ದಾರೆ. ದಯವಿಟ್ಟು ಇದನ್ನು ಸಕಾರದವರು ಪರಿಶೀಲನೆ ಮಾಡಬೇಕು. ಈಗ ಗ್ರಾಂಟ್ ಏನಿದ್ದರೂ ಅರ್ಬನ್ ಏರಿಯಾಕ್ಕೆ ಮಾತ್ರ ಸಿಕ್ಕುತ್ತದೆ. ರೂರಲ್ ಏರಿಯಾಕ್ಕೆ ಸಿಕ್ಕುವುದಿಲ್ಲ ಅದರಿಂದ ರೂರಲ್ ಏರಿಯಾಕ್ಕೆ ಈ ಗ್ರಾಂಟಿನಿಂದ ಉಪಕಾರವಾಗುವುದಿಲ್ಲ. ಇದರ ಸಲುವಾಗಿ ಸೋಷಿಯಲ್ ವೆಲ್‌ಫೇರ್ ಮಂತ್ರಿಗಳೇ ನೇರವಾಗಿ ಇದನ್ನು ವಹಿಸಿಕೊಂಡು ಅವರ ಮೂಲಕವೇ ಮಹಿಳಾ ಮಂಡಲಿಗಳಿಗೆ ಪೂರ್ತಿ ಗ್ರಾಂಟ್ ಕೊಟ್ಟು ಮಹಿಳಾ ಮಂಡಲಿಗಳು ತಮ್ಮ ಮುಂದಿನ ಕಾರ್ಯಕ್ರಮವನ್ನು ನಡೆಸುವುದಕ್ಕೆ ಪ್ರಯತ್ನ ಮಾಡಿದರೆ ಚೆನ್ನಾಗಿರುತ್ತದೆ ಎಂದು ನಾನು ಸರ್ಕಾರದಲ್ಲಿ ವಿನಂತಿಸಿಕೊಳ್ಳುತ್ತೇನೆ.

ಹರಿಜನ ಗಿರಿಜನರ ಮನೆಗಳ ವಿಷಯವಾಗಿ ಕೆಲವು ಸದಸ್ಯರು ಪ್ರಸ್ತಾಪ ಮಾಡಿದ್ದರು. ಹರಿಜನರ ಮನೆಗಳು ಹರಕು ಮುರುಕು ಕೆಲಸವಾಗಿದೆ. ಒಂದು ತಾಲ್ಲೂಕಿನವರಿಗೆ ಮನೆ ಕಟ್ಟಲು ಹಣ ಸಿಕ್ಕಿದೆ. ಇನ್ನೊಂದು ತಾಲ್ಲೂಕಿನಲ್ಲಿ ಅವರಿಗೆ ಮನೆ ಕಟ್ಟಲು ಹಣ ಸಿಕ್ಕಿಲ್ಲ. ಇದರಿಂದ ತುಂಬಾ ಜನರಿಗೆ ಅನಾನುಕೂಲವಾಗಿದೆ. ಹಿಂದಕ್ಕೆ ಕೊಡುತ್ತಿದ್ದ 400 ರೂಪಾಯಿ ಕೆಲವರಿಗೆ ಸಿಕ್ಕಿವೆ. ಆದರೆ ಈಗ ಸೊಸೈಟಿ ಮಾಡಿ ಅದರ ಮೂಲಕ ಸಾಲ ಕೊಡುವ ವ್ಯವಸ್ಥೆ ಮಾಡಿದ ಮೇಲೆ ಕೆಲವರಿಗೆ ಹಣ ಸಿಕ್ಕಿದೆ ಕೆಲವರಿಗೆ ಸಿಕ್ಕಿಲ್ಲ. ನಾನು ಸೂಚಿಸುವುದು ಏನೆಂದರೆ ಮನೆ ಕಟ್ಟಲು ಇರತಕ್ಕ ಈ ಹಣವನ್ನು ಅವರಿಗೋಸ್ಕರ ಮೀಸಲಾಗಿ ಇಡಬೇಕು. ಅನೇಕ ಸಲ ಅವರಿಗೆ ಹಣ ಕೊಟ್ಟರೂ ಕೂಡ ಅವರಿಗೆ ಜಾಗ ಸಿಕ್ಕುವುದಿಲ್ಲ, ಮನೆ ಕಟ್ಟತಕ್ಕ ಸ್ಥಳದ ಅಕ್ಕಪಕ್ಕದ ಜಮೀನು ಅಕ್ವೈಯರ್ ಮಾಡಬೇಕಾಗುತ್ತದೆ. ಖರೀದಿ ಮಾಡುವುದಕ್ಕಾಗುವುದಿಲ್ಲ. ಅಲ್ಲದೆ ಜಮೀನು ಅಕ್ವೈಯರ್ ಮಾಡುವುದು ಕೂಡ ಸಾಧ್ಯವಾಗುವುದಿಲ್ಲ. ಸಂದರ್ಭ ಹೀಗೆ ಇರುವುದರಿಂದ ಹಣ ಮಂಜೂರ ಆಗಿದ್ದರೂ ಕೂಡ ಅವರಿಗೆ ಮನೆ ಕಟ್ಟಲು ಸಾಧ್ಯವಾಗಿಲ್ಲ. ಹರಿಜನರ ಮನೆಗಳನ್ನು

ಕಟ್ಟುವುದಕ್ಕಾಗಿ ನಿರ್ದಿಷ್ಟವಾಗಿ ಒಂದು ಎಕರೆ ಜಮೀನು-ಅದು ಸರಕಾರಿ ಜಮೀನು ಇರಲೀ, ಪ್ರೈವೇಟ್ ಜಮೀನು ಇರಲಿ-ಮೀಸಲಾಗಿ ಇಟ್ಟು ಅದನ್ನು ಅಕ್ವೈಯರ್ ಮಾಡಿಕೊಂಡರೆ ಈ ಮನೆ ಕಟ್ಟುವ ಸ್ಕೀಂ ಯಶಸ್ವಿಯಾಗುತ್ತದೆ. ಅವರಿಗೆ ಕೇವಲ ದುಡ್ಡುಕೊಟ್ಟರೂ ಸಹ ಅದರಿಂದ ಏನೂ ಪ್ರಯೋಜನವಾಗುವುದಿಲ್ಲ ಎಂಬುದನ್ನು ಮಾನ್ಯ ಸಚಿವರ ಗಮನಕ್ಕೆ ತರುತ್ತೇನೆ.

ಇನ್ನು ಅಬಾಲಿಷನ್ ಆಫ್ ವೇರಿಯಸ್ ಎಕನಾಮಿಕ್ ಡೆವಲಪ್ಮೆಂಟ್ ಅಂಡ್ ಅದರ್ ಸ್ಕೀಮ್ಸ ಈ ಯೋಜನೆಯ ಮೂಲಕ ಕೆಲವು ಬಾಬುಗಳಿಗೆ ದುಡ್ಡು ಕೊಡುತ್ತೀರಿ. ಸಾಮಾನ್ಯವಾಗಿ ಕುರಿ ಸಾಕುವುದಕ್ಕೆ, ನೇಗಿಲು, ಎತ್ತು ಬಂಡಿ ಕೊಂಡುಕೊಳ್ಳುವುದಕ್ಕೆ ಇಂಥ ಸಣ್ಣ ಸಣ್ಣ ಬಾಬುಗಳಿಗೆ ಆರ್ಥಿಕ ನೆರವು ಕೊಡುವ ಉದ್ದೇಶದಿಂದ ದುಡ್ಡು ಕೊಡುತ್ತೀರಿ. ಆದರೆ ಈ ದುಡ್ಡು ಅವರಿಗೆ ಮುಟ್ಟುವುದಿಲ್ಲ. ಈ ದುಡ್ಡು ಪಡೆಯುವುದಕ್ಕಾಗಿ ಅವರ ಹೆಸರಿನಲ್ಲಿ ರಸೀದಿ ಮಾಡಿಸಿಕೊಂಡು ಪ್ರಭಾವಶಾಲಿಗಳು ಹಣ ಪಡೆದುಕೊಂಡು ಅದನ್ನು ದುರಪಯೋಗ ಮಾಡಿಕೊಳ್ಳುತ್ತಾರೆ. ಪ್ರಭಾವಶಾಲಿಗಳ ಕೈ ಸೇರುತ್ತದೆ. ಅವರಿಗೆ ಹಣ ದೊರೆಯುವುದಿಲ್ಲ. ಇದಲ್ಲದೆ. ಒಬ್ಬಿಬ್ಬರಿಗೆ ಮಾತ್ರ ಹಣ ಕೊಡಲಾಗುತ್ತದೆ. ಆದರೆ ತಾಲ್ಲೂಕಿನಲ್ಲಿ ಸಾವಿರಾರು ಅರ್ಜಿಗಳು ಬಂದಿರುತ್ತವೆ. ಇದನ್ನು ಯಾರಿಗೆ ಕೊಡಬೇಕು ಯಾರಿಗೆ ಕೊಡಬಾರದು ಎಂಬ ಸಂಶಯ ಬರುತ್ತದೆ. ಆದುದರಿಂದ ಇಂಥ ಸಣ್ಣ ಸಣ್ಣ ಸ್ಕೀಂಗಳನ್ನು ರದ್ದು ಮಾಡಿಬಿಟ್ಟು ಅವರ ಏಳಿಗೆಗಾಗಿ ಇರತಕ್ಕಂಥ ಹಾಸ್ಟೆಲ್‌ಗಳಿಗೆ ಈ ಧನ ಸಹಾಯ ಕೊಡಬೇಕು. ಹಾಸ್ಟೆಲುಗಳಲ್ಲಿ ಇದ್ದು ವಿದ್ಯಾಭ್ಯಾಸ ಮಾಡತಕ್ಕಂಥ ವಿದ್ಯಾರ್ಥಿಗಳಿಗೆ ಒಳ್ಳೇ ಆಹಾರ, ಒಳ್ಳೇ ಬಟ್ಟೆ ದೊರಕಿಸಿ ಕೊಡುವುದಕ್ಕೆ ಹಣ ಹೆಚ್ಚು ಮಾಡಬೇಕು. ಹಣ ದುರುಪಯೋಗ ಮಾಡತಕ್ಕಂಥ ಸ್ಕೀಮುಗಳನ್ನು ಮಾಡಬೇಡಿ ಎಂದು ಸರಕಾರಕ್ಕೆ ಹೇಳಬಯಸುತ್ತೇನೆ.

ಸರಕಾರದವರು ದರಖಾಸ್ತ್ ರೂಲ್ಸ್ ಅಳವಡಿಸಿಕೊಂಡು ಹಿಂದುಳಿದವರಿಗೆ ಭೂಮಿಕೊಡುತ್ತಾರೆ ಈ ಯೋಜನೇಯಿಂದ ಅನೇಕ ಹರಿಜನರು ಭೂಮಿ ಪಡೆದಿದ್ದಾರೆ. ಆದರೆ ಬಹು ಜನರು ಇವತ್ತಿನ ದಿವಸ ತಹಶೀಲದಾರರ ಕಚೇರಿ ಮುಂದೆ ಅಲೆಯುತ್ತಿದ್ದಾರೆ. ಈ ಭೂಮಿ ಬಗ್ಗೆ ಅವರಿಗೆ ಕಬ್ಜಾ ಇದ್ದರೂ ಕೂಡ ಪಟ್ಟಾ ಆಗಿರುವುದಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಪ್ರಭಾವಶಾಲಿಯಾದವರ ಕೈವಾಡದಿಂದ ಅವರಿಗೆ ಪಟ್ಟಾ ಸಿಕ್ಕುವುದಿಲ್ಲ. ಅನ್-ಅಥರೈಜ್ಡ್ ಕಲ್ಟಿವೇಷನ್ ಮಾಡಿದ್ದಾರೆಂದು ಅವರ ಕಡೆಯಿಂದ ಎರಡು ಮೂರು ಪಟ್ಟು ತಪಾನಾ ವಸೂಲ್ಮಾಡುತ್ತಿದ್ದಾರೆ. ಅಂಥವರು ನಮ್ಮ ಕಡೆ ಬರುತ್ತಾರೆ. ಆದುದರಿಂದ ನಾನು ಸೂಚಿಸುವುದೇನೆಂದರೆ ಯಾರಾದರೂ ಮೂರು ವರ್ಷ ಸಾಗುವಳಿ ಮಾಡಿದ್ದರೆ ಅವರ ರಿಕಾರ್ಡು ತರಿಸಿ ಅವರ ಹೆಸರಿಗೆ ಪಟ್ಟಾ ಮಾಡಿಕೊಟ್ಟು ಅವರ ತೊಂದರೆ ತಪ್ಪಿಸಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಮಾನ್ಯ ಸದಸ್ಯರಾದಂಥ ಶ್ರೀಮಾನ್ ಜೈ ಪ್ರಕಾಶ್ ನಾರಾಯಣರವರು, ಅರಕೆರೆಯವರು ಮಾತನಾಡುವಾಗ್ಗೆ ಹೇಳಿದ್ದೇನೆಂದರೆ ಹರಿಜನ ಕಲ್ಯಾಣಕ್ಕಾಗಿ ಏನೂ ಹಣ ಖರ್ಚು ಮಾಡಿಲ್ಲ. ಪ್ಲಾನಿನಲ್ಲಿ ಕೊಟ್ಟಂಥ ಹಣ ಲ್ಯಾಪ್ಸ್ ಆಗಿದೆ ಎಂದು ಹೇಳಿದರು. ಅವರು ಹೇಳಿದ್ದು ಸಮರ್ಪಕವಾಗಿಲ್ಲ ಎಂಬುದು ನಾನು ಅಂಕಿಅಂಶಗಳನ್ನು ಹೇಳಿದ ಮೇಲೆ ಗೊತ್ತಾಗುತ್ತದೆ. ಹರಿಜನ ಕಲ್ಯಾಣಕ್ಕಾಗಿ ಎಷ್ಟು ಹಣ ಖರ್ಚು ಮಾಡಿದೆ ಎಂಬುದನ್ನು ಹೇಳುತ್ತೇನೆ. ಈ ಅಂಕಿಅಂಶಗಳನ್ನು ಅವರ ಗಮನಕ್ಕೆ ತಂದರೆ ಅವರಿಗೆ ತೃಪ್ತಿಯಾಗುತ್ತದೆ ಎಂದು ನಾನು ತಿಳಿದುಕೊಂಡಿದ್ದೇನೆ.

ಸೆಕೆಂಡ್ ಪ್ಲಾನ್ ಔಟಲೇ 3,83,48,000 ರೂಪಾಯಿಯಲ್ಲಿ 3,58,25,180 ಖರ್ಚು ಮಾಡಿದ್ದಾರೆ. ವಿಚಾರಗಳನ್ನು ಬೇಕಾದರೆ ಪ್ರತಿಯೊಂದು ಬಾಬಿಗೆ ಹೇಳಬಹುದು.

| ಸೆಕೆಂಡ್ ಪ್ಲಾನ್ | ಹಣ ಒದಗಿಸಿದ್ದು | ಹಣ ಖರ್ಚುಮಾಡಿದ್ದು |
|---|---|---|
| ಎಜ್ಯುಕೇಷನ್ | 46,68,000 | 63,43,077 |
| ಎಕನಾಮಿಕ್ ಆಪ್ ಲಿಫ್ಟೆಮೆಂಟ್ | 48,57,500 | 42,62,000 |
| ಹೆಲ್ತ್ ಹೌಸಿಂಗ್ ಅಂಡ್ ಅದರ್ ಸ್ಕೀಂಮ್ಸ್ | 2,88,22,500 | 2,52,20,100 |

**ಥರ್ಡ್ ಪ್ಲಾನ್**

| | | |
|---|---|---|
| ಎಜ್ಯುಕೇಷನ್ | 2,08,48,000 | 1,65,27,000 |
| ಎಕನಾಮಿಕ್ ಆಪ್ ಲಿಫ್ಟ್‌ಮೆಂಟ್ | 1,26,93,000 | 73,86,000 |
| ಹೆಲ್ತ್ ಹೌಸಿಂಗ್ ಅಂಡ್ ಅದರ್ ಸ್ಕೀಂಮ್ಸ್ | 1,46,45,000 | 1,02,61,800 |

**ಪೋರ್ಥ್ ಪ್ಲಾನ್**

| | | |
|---|---|---|
| 1966–67 ನಲ್ಲಿ ಎಜ್ಯುಕೇಷನ್ | 83,77,000 | 62,00,000 |

ಅವರ ಉದ್ಧಾರವಾಗಿಲ್ಲ, ಸರಕಾರ ಗಮನ ಕೊಟ್ಟಿಲ್ಲ ಎಂದು ಆಪಾದಿಸುವವರು ಈ ಅಂಕಿ ಅಂಶಗಳನ್ನ ನೋಡಿದರೆ ಅವರಿಗೆ ತೃಪ್ತಿ ಯಾಗಬಹುದು.

**ಶ್ರೀ ಕೆ.ಎಚ್. ಪಾಟೀಲ್.**– ಹಣ ಖರ್ಚು ಆಗಿದೆ. ಆದರೆ ಉಪಯೋಗವಾಗಿದೆಯೇ?

**ಶ್ರೀಮತಿ ಬಸವರಾಜೇಶ್ವರಿ.**– ಹಣ ಖರ್ಚು ಆದ ಹಾಗೆ ಅವರ ಉದ್ಧಾರವಾಗುತ್ತಾ ಇದೆ. ಇನ್ನೂ ಹೆಚ್ಚು ಉದ್ಧಾರವಾಗುವುದಕ್ಕೆ ರಚನಾತ್ಮಕ ಸಲಹೆಗಳನ್ನು ಮಾನ್ಯ ಸದಸ್ಯರು ಕೊಡಬೇಕು.

**ಶ್ರೀಮತಿ ನಾಗಮ್ಮ.**– ಸ್ವಾತಂತ್ರ್ಯ ಬಂದು 20 ವರ್ಷವಾಯಿತು. 20 ವರ್ಷ ಹಣ ಖರ್ಚಾಗದೆ. ಆದರೆ ಹರಿಜನ ಉದ್ಧಾರವಾಗಿಲ್ಲ. ಇನ್ನು ಎಷ್ಟು ವರ್ಷದಲ್ಲಿ ಅವರ ಉದ್ಧಾರ ಮಾಡುತ್ತೀರಿ?

**ಶ್ರೀಮತಿ ಬಸವರಾಜೇಶ್ವರಿ.**– ಸ್ವಲ್ಪ ಸ್ವಲ್ಪ ಮಟ್ಟದಲ್ಲಿ ಅವರ ಉದ್ಧಾರವಾಗುತ್ತಾ ಇದೆ. ಕೊನೆಯದಾಗಿ ಒಂದು ವಿಷಯ ಪ್ರಸ್ತಾಪ ಮಾಡಿ ನನ್ನ ಮಾತು ಮುಗಿಸುತ್ತೇನೆ. ಮಾನ್ಯ ಸದಸ್ಯರಾದ ಶ್ರೀಮಾನ್ ಅರಕೇರಿಯವರು ಮಾತನಾಡುತ್ತಾ ಉತ್ತರ ಕರ್ನಾಟಕದ ಮೂರು ಜಿಲ್ಲೆಯ ಹರಿಜನರಲ್ಲಿಯ ಅನೀತಿ ಪದ್ಧತಿ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ ಬಹಳ ಕಳಕಳಿಯಿಂದ ಈ ವಿಚಾರ ಹೇಳಬೇಕಾಗುತ್ತದೆ. ನಮ್ಮ ಹೈದರಾಬಾದ ಕರ್ನಾಟಕ ಮೂರು ಜಿಲ್ಲೆಗಳಲ್ಲಿ ಸಹ ಈ ಅನೀತಿ ಪದ್ಧತಿ ಇದೆ. ದೇವದಾಸಿ ಪದ್ಧತಿ. ವೇಶ್ಯಾವೃತ್ತಿ ಬೆಳೆಯುತ್ತಿದೆ. ವೇಶ್ಯಾವೃತ್ತಿ ಬೆಳೆಯುವುದಕ್ಕೆ ಬಸವಿ ಬಿಡುವ ಪದ್ಧತಿ ಆಚರಣೆಯಲ್ಲಿದೆ. ಇದನ್ನು ತಡೆಗಟ್ಟುವುದಕ್ಕೆ ಆಗಿಲ್ಲ. ಇದನ್ನು ತಡೆಗಟ್ಟುವುದಕ್ಕೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕಾಗಿದೆ. ಇದರಿಂದ ಆದಾಯ ಇರುವ ಕಾಲಕ್ಕೆ ಕಾಯಿದೆ ಮೂಲಕ ಅದನ್ನು ತಡೆಗಟ್ಟುವುದು ಹೊರತು ಕೇವಲ ಭಾಷಣಗಳ ಮೂಲಕ ತಡೆಗಟ್ಟುವುದು ಅಸಾಧ್ಯ ಎಂದು ಕಂಡುಬರುತ್ತದೆ. ಇದನ್ನು ಮಹಿಳೆಯರಾದಂಥಹ ನಾವು ಈ ಪ್ರಜಾಪ್ರಭುತ್ವದಲ್ಲಿ ಈ ರೀತಿ ಇರುವುದನ್ನು ನೋಡಿ ನಮಗೆ ದುಃಖವಾಗುತ್ತದೆ. ದಯವಿಟ್ಟು ಕಾಯಿದೆ ಮೂಲಕ ಸರಿಯಾದಂಥಹ ತಿಳುವಳಿಕೆ ಕೊಟ್ಟು ಈ ಜನರಲ್ಲಿ ಈ ವೃತ್ತಿಯನ್ನು ಬಿಡಿಸುವುದಕ್ಕೆ ಪ್ರಯತ್ನ ಮಾಡಬೇಕು. ಅದನ್ನು ಮಾಡಿದರೆ ಅವರ ಉದ್ಧಾರ ಆಗುತ್ತದೆ. ಅಸ್ಪೃಶ್ಯತೆ ಎರಡನೆಯದು. ಇದು ಮೊದಲನೇ ಸೋಷಿಯಲ್ ಇವಿಲ್ ಎಂದು ನಾನು ತಿಳಿದುಕೊಂಡಿದ್ದೇನೆ. ಅನೀತಿಯುತ ಕೆಲಸವನ್ನು ಮಾಡದೇ ಇರುವಾಗ ತಕ್ಕ ಕಾರ್ಯಕ್ರಮ ಹಾಕಿಕೊಂಡು ತಡೆಗಟ್ಟಬೇಕು ಎಂದು ಈ ಸಂದರ್ಭದಲ್ಲಿ ಮಾನ್ಯ ಮಂತ್ರಿಗಳಿಗೆ ಹೇಳಿ ಅಧ್ಯಕ್ಷರು ನನಗೆ ಮಾತನಾಡಲು ಸ್ವಲ್ಪ ಕಾಲಾವಕಾಶ ಕೊಟ್ಟಿದ್ದಕ್ಕಾಗಿ ವಂದನೆಯನ್ನು ಸಲ್ಲಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

# ಮತದಾರರ ಬಗ್ಗೆ ಕಾಳಜಿ

ತಮ್ಮ ಕ್ಷೇತ್ರ ಮತ್ತು ತಾಲ್ಲೂಕುಗಳ ಬಗ್ಗೆ ಗಮನ ನೀಡಿ, ಸಾರಿಗೆ, ರೋಡು, ದವಸ ಸಾಗಿಸುವ ವಿಧಾನಮೂಲಭೂತ ಸಮಸ್ಯೆಗಳ ಬಗ್ಗೆ ಗಮನ ಹರಿಸಿ ಪಬ್ಲಿಕ್ ವರ್ಕ್ಸ್ ಸಮಸ್ಯೆಗಳ ಬಗ್ಗೆ ಸಂಬಂಧಪಟ್ಟ ಎಲ್ಲಾ ಬೇಡಿಕೆಗಳನ್ನು ಅನುಮೋದಿಸುತ್ತ, ಕ್ಷೇತ್ರದ ಜನರ ಅದರಲ್ಲೂ ಗ್ರಾಮಾಂತರ ವಿಭಾಗ, ಹಳ್ಳಿ ಗಾಡಿನ, ರೈತರ ಬವಣೆಗೆ–ಪರಿಹಾರ–ಪ್ರೋತ್ಸಾಹ ಕೊಡಿಸುವ–ಸರ್ಕಾರಕ್ಕೆ ಸಲಹೆ ನೀಡಿ ಮಂಡಿಸಿದ ಭಾಷಣವು ಸಹ ಜನಪರ ವಿಷಯಗಳಿಗೆ ಶ್ರೀಮತಿ ಬಸವರಾಜೇಶ್ವರಿಯವರಾಡುತ್ತಿದ್ದ ಕಳಕಳಿಯ ಅರ್ಥವಾಗುತ್ತದೆ. ವಿದ್ಯುತ್–ಪ್ರಾಜೆಕ್ಟ್ ವಿಚಾರ ಹೀಗೆ ಅವರು ಆಳಕ್ಕೆ ಹೋಗಿ ಸಮಸ್ಯೆ ಬೇರುಗಳನ್ನು ಅಲ್ಲಾಡಿಸಿ ಪರಿಹಾರ ಉಪಾಯಗಳನ್ನು ಸೂಚಿಸುತ್ತಾರೆ. ಅವರ ಗಟ್ಟಿತನ ಮತ್ತು ಶೂರತ್ವಕ್ಕೆ ಸಾಕ್ಷಿ ಎಂದರೆ ಅತಿಶಯೋಕ್ತಿಅಲ್ಲ.

**ಶ್ರೀ ಬಸವರಾಜೇಶ್ವರಿ (ಹೂವಿನಹಡಗಲಿ)**.– ಮಾನ್ಯ ಅಧ್ಯಕ್ಷರೇ, ನಮ್ಮ ಮುಂದಿರತಕ್ಕ ಈ ಪಬ್ಲಿಕ್ ವರ್ಕ್ಸ್‌ಗೆ ಸಂಬಂಧಪಟ್ಟ ಎಲ್ಲಾ ಬೇಡಿಕೆಗಳನ್ನೂ ಅನುಮೋದಿಸುತ್ತಾ ಕೆಲವು ಸಲಹೆಗಳನ್ನು ಸಕಾರದವರಿಗೆ ಹೇಳಬೇಕೆಂದು ಅಪೇಕ್ಷೆ ಪಟ್ಟಿದ್ದೇನೆ. ಮೇಜರ್ ಇರಿಗೇಷನ್ ವಿಚಾರದಲ್ಲಿ ಎರಡು ಸಲಹೆಗಳನ್ನು ಮಾತ್ರ ಕೊಡಬೇಕೆಂದು ಇದ್ದೇನೆ. ಈಗಾಗಲೇ ತುಂಗಭದ್ರಾ ಜಲಾಶಯದಿಂದ ರಾಯಚೂರು ಡಿಸ್ಟ್ರಿಕ್ಟ್‌ನಲ್ಲಿ ಲೆಫ್ಟ್ ಬ್ಯಾಂಕ್ ಕೆನಾಲ್‌ದಿಂದ ಬೇಕಾದಷ್ಟು ಜಮೀನುಗಳಿಗೆ ನೀರಾವರಿಯಾಗಿದೆ ಮತ್ತು ಅದು ಡೆವಲಪ್ ಆಗಲಾರದೆ ಇದ್ದ ಪ್ರಸಂಗದಲ್ಲಿ ನಮ್ಮ ಸರ್ಕಾರದವರು ಕೋಟ್ಯಾಂತರ ರೂಪಾಯಿಗಳನ್ನು ಖರ್ಚುಮಾಡಿ ಕೊನೆ ಸರ್ವೆ ನಂಬರ್‌ವರೆಗೂ ಫೀಲ್ಡ್ ಕೆನಾಲ್ ಕನ್‌ಸ್ಟ್ರಕ್ಟ್ ಮಾಡಿದ್ದರಿಂದ ಆ ಏರಿಯಾ ಬಹು ಭಾಗ ಡೆವಲಪ್ ಆಗುವುದಕ್ಕೆ ಅನುಕೂಲವಾಗಿದೆ, ಅದಕ್ಕಾಗಿ ನಾನು ಸರ್ಕಾರದವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತಾ ಇದ್ದೇನೆ. ಈಗ ಬಹಳ ಹಿಂದೆ ಲೋಕಲೈಸೇಷನ್ ಪದ್ಧತಿ ಮಾಡಿದ್ದು ತಮಗೆಲ್ಲ ಗೊತ್ತಿದೆ. ಈಗಿನ ಕಾಲಕ್ಕೆ ಅನುಸಾರವಾಗಿ ಮತ್ತು ಈಗ ಬೆಳೆಸತಕ್ಕ ಪದ್ಧತಿಗೆ ಅನುಸಾರವಾಗಿ ಆ ಪದ್ಧತಿ ಅಲ್ಲಿನ ಜನರಿಗೆ ಅಷ್ಟು ಹಿತಕರವಾಗಿಲ್ಲ ಎಂದು ಅಷ್ಟು ಮಾತ್ರ ಹೇಳುತ್ತಾ ಇದ್ದೇನೆ. ಅದಕ್ಕೆ ಕಾರಣವಾದರೂ ಇಷ್ಟೆ. ಹೊಸ ಲೋಕಲೈಸೇಷನ್ ಪದ್ಧತಿಯನ್ನು ಆ ಏರಿಯಾದಲ್ಲಿ ತರುವುದು ಅತ್ಯುತ್ತಮ ಉದಾಹರಣಾರ್ಥವಾಗಿ ಹೇಳಬೇಕಾದರೆ ಒಂದು ಡಿಸ್ಟ್ರಿಬ್ಯೂಟರಿ ಕೆಳಗೆ ಕೆಲವು ಜಮೀನುಗಳಲ್ಲಿ ಖರಾಬ್ ಲೋಕಲೈಸೇಷನ್ ಮಾಡಿರುವುದು, ಇನ್ನು ಕೆಲವು ಜಮೀನುಗಳನ್ನು ರಬೀ ಲೋಕಲೈಸೇಷನ್ ಮಾಡಿರುವುದು ಮತ್ತು ಕೆಲವು ಜಮೀನುಗಳನ್ನು

ಹೆಚಿ ಇರಿಗೇಷನ್ ಲೋಕಲೈಸೇಷನ್ ಎಂದು ಮಾಡಿರುವುದರಿಂದ ಅಲ್ಲಿ ಪ್ರತಿದಿವಸ ನೀರನ್ನು ತೆಗೆದುಕೊಳ್ಳತಕ್ಕ ರೈತರಿಗೆ ಸ್ವಲ್ಪ ಅನಾನುಕೂಲವಾಗುತ್ತಾ ಇದೆ. ಇದನ್ನು ತೀವ್ರ ಆಲೋಚನೆ ಮಾಡಿ ಈ ಪದ್ಧತಿಯನ್ನು ಸುಧಾರಿಸುವ ರೀತಿಯಲ್ಲಿ ಮಾಡಿ ಜನರಿಗೆ ಅನುಕೂಲ ಮಾಡಿಕೊಡಬೇಕೆಂದು ಮಾನ್ಯ ಸಚಿವರಲ್ಲಿ ವಿನಂತಿ ಮಾಡುತ್ತಾ ಇದ್ದೇನೆ.

ಆಯಕಟ್ಟು ರೋಡ್ಡಿನ ವಿಚಾರದಲ್ಲಿ ಹೇಳಬೇಕೆಂದರೆ ಸಿಂಧನೂರು ಮತ್ತು ಮಾನ್ವಿ ಒಳಗೆ ಬಹಳ ಪ್ರದೇಶ ಕಪ್ಪು ಜಮೀನು ಇದೆ. ಅಲ್ಲಿ ನೀರು ಹರಿದಾಗ ಯಾವ ಪರಿಸ್ಥಿತಿಯಾಗುತ್ತದೆ ಎಂಬುದು ಮಾನ್ಯ ಸದಸ್ಯರಿಗೆ ಅನೇಕರಿಗೆ ಗೊತ್ತಿದೆ, ಅದರ ಅನುಭವ ಕೂಡ ಇದೆ. ನೀರು ಹರಿದು ಹೋಗುವುದಕ್ಕೆ ಶುರುವಾದರೆ 5–6 ತಿಂಗಳು ಭೂಮಿ ಒಣಗುವವರೆಗೂ ಒಂದು ಭಂಡಿ ಆಗಲಿ ಹೋಗುವುದಕ್ಕೆ ಸಾಧ್ಯವಿಲ್ಲ. ಮನುಷ್ಯರು ಓಡಾಡಲಿಕ್ಕೆ ಸಾಧ್ಯವಿಲ್ಲ. ಈ ಆಯಕಟ್ಟಿನ ರಸ್ತೆ ವಿಚಾರದಲ್ಲಿ ನಾನು ಪದೇ ಪದೇ ಹೇಳತ್ತಾ ಬಂದಿದ್ದೇನೆ. ಇದರ ವಿಚಾರದಲ್ಲಿ ಲಕ್ಷ್ಯ ಕೊಡಬೇಕೆಂದು ಮತ್ತೊಮ್ಮೆ ಈ ಸಂದರ್ಭದಲ್ಲಿ ಹೇಳತ್ತಾ ಇದ್ದೇನೆ. ಇದನ್ನು ಮಾಡದೇ ಹೋದರೆ ಆ ಪ್ರದೇಶದಲ್ಲಿ ಬೆಳೆಯತಕ್ಕ ಕಾಳನ್ನು ಹೇಗೆ ಸಾಗಿಸಬೇಕು, ಊರಿಗೆ ಹೇಗೆ ತಿರುಗಾಡಬೇಕು ಎಂಬುದು ಒಂದು ದೊಡ್ಡ ಪ್ರಶ್ನೆಯಾಗಿದೆ. ರೈತರು ತಾವು ಬೆಳೆದ ಮಾಲನ್ನು ಬೇರೆ ಕಡೆಗಳಿಗೆ ಕಳುಹಿಸುವುದಕ್ಕೆ ತುಂಬಾ ತೊಂದರೆಯಾಗುತ್ತಾ ಇದೆ. ಈಗಾಗಲೇ ದುಡ್ಡು ಕೊಟ್ಟಿದ್ದೀರಿ ಇನ್ನೂ ಹೆಚ್ಚು ಹೆಚ್ಚಾಗಿ ಕೊಟ್ಟು ಇದಕ್ಕೆ ಗಮನ ಕೊಡಬೇಕು. ನಾವು ಈಗಾಗಲೇ ಪ್ರಪೋಸಲ್ಸ್ ಕಳುಹಿಸಿದ್ದೇವೆ, ಯಾವ ಪ್ರಾಮುಖ್ಯತೆ ಉಳ್ಳ ರಸ್ತೆ ಇದೆ ಎಂಬುದನ್ನು ತಾಲ್ಲೂಕು ಬೋರ್ಡಿನಲ್ಲಿ ತಿಳಿಸಿದ್ದೇನೆ. ಅದಕ್ಕೆ ಹೆಚ್ಚು ಗಮನ ಕೊಟ್ಟು ಆಯಕಟ್ಟು ರಸ್ತೆಗಳಿಗೆ ಹೆಚ್ಚು ಹೆಚ್ಚು ಕೊಡಬೇಕೆಂದು ಮಾನ್ಯ ಮಂತ್ರಿವರ್ಯರಲ್ಲಿ ವಿನಂತಿ ಮಾಡಿಕೊಳ್ಳುತ್ತಾ ಇದ್ದೇನೆ. ಈಗ ನೀರಾವರಿಗೆ ನೀರನ್ನು ಕೊಟ್ಟಿದ್ದೀರಿ, ಬಹಳ ಜನರು ತಮ್ಮ ಜಮೀನನ್ನು ಅಭಿವೃದ್ಧಿ ಮಾಡಿದ್ದಾರೆ, ನೀರನ್ನು ತೆಗೆದುಕೊಳ್ಳುತ್ತಿದ್ದಾರೆ, ಸಾಧಾರಣವಾಗಿ ಆ ಏರಿಯಾ ಡೆವಲಪ್ ಆಗಿ ಎಲ್ಲರೂ ನೀರನ್ನು ತೆಗೆದುಕೊಳ್ಳುವುದಕ್ಕೆ ತಯಾರಾದಾಗ ಅಲ್ಲಿ ಯಾವ ಡಿಸ್ಟ್ರಿಬ್ಯೂಟರೀಸ್ ಬರುತ್ತವೆ. ಆದರಿಂದ ನನಗೆ ನೀರು ಬರಲಿಲ್ಲ, ಅವರಿಗೆ ಬರಲಿಲ್ಲ ಅಂತ ಹೇಳಿ ತಕರಾರುಗಳು ಬರುವುದು ಸಹಜ. ಈ ವಿಚಾರದಲ್ಲಿ ಊರುಗಳಲ್ಲಿ ಲೋಕಲ್ ಆಗಿ ರೈತರು ಒಂದು ಇರಿಗೇಷನ್ ಕಮಿಟಿ ಅಂತ ಮಾಡಿಕೊಂಡು ಅದರ ಮೂಲಕ ಅಲ್ಲಿ ಸೂಪರ್‌ವೈಸರ್ ಮತ್ತು ಅಲ್ಲಿರತಕ್ಕ ನೀರುಗಂಟಿ ಅಂತ ಯಾರು ಇರುತ್ತಾರೆ ಅವರನ್ನು ಇಟ್ಟುಕೊಂಡು ತಿಂಗಳಿಗೆ ಒಂದು ಮೀಟಿಂಗ್‌ಮಾಡಿ ನಮ್ಮ ನಮ್ಮೊಳಗೆ ಪರಿಹರಿಸಿಕೊಳ್ಳುವಂತಹ ಒಂದು ಏರ್ಪಾಡನ್ನು ಮಾಡಬೇಕು. ಮತ್ತು ಅದನ್ನು

ಅಲ್ಲಿರತಕ್ಕ ಎಕ್ಸಿಕ್ಯೂಟೀವ್ ಇಂಜನಿಯರು ಮತ್ತು ಅಸಿಸ್ಟೆಂಟ್ ಇಂಜನಿಯರುಗಳು ತಿಳಿಸುವಂತಹ ಒಂದು ವ್ಯವಸ್ಥೆಯನ್ನು ಮಾಡುವುದು ಅತ್ಯುತ್ತಮ. ಈ ತರಹ ಇರಿಗೇಷನ್ ಕಮಿಟಿಯನ್ನು ಯಾವ ಪ್ರದೇಶದಲ್ಲಿ ನೀರು ಸರಬರಾಜು ಆಗುತ್ತದೆ ಆ ಪ್ರದೇಶದ ಪಂಚಾಯ್ತಿಗಳಲ್ಲಿ ಮಾಡುವುದಕ್ಕೆ ಏರ್ಪಾಡು ಮಾಡಿದರೆ ಮುಂದೆ ತೊಂದರೆ ಅಷ್ಟಾಗಿ ಆಗುವುದಿಲ್ಲ ಮತ್ತು ಇರತಕ್ಕ ತೊಂದರೆಗಳನ್ನೂ ಕೂಡ ಪರಿಹರಿಸುವುದಕ್ಕೆ ಅನುಕೂಲವಾಗುತ್ತದೆ ಎಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಮತ್ತು ಮೇನ್ ಕೆನಾಲ್‌ನಲ್ಲಿ ಕೆಲವು ಕಡೆ ತೆಗೆದಿರುವ ಕಡೆಯಲ್ಲಿ ನೀರಿನ ತೇವ ಬಹಳ ಜಾಸ್ತಿಯಾಗಿ, ಕೆಲವು ಪ್ರಸಂಗಗಳಲ್ಲಂತೂ ಬಹಳ ತೊಂದರೆಯಾಗುತ್ತದೆ. ಅಲ್ಲಿ ಮನೆಗಳೂ ಕೂಡ ಕೆಲವು ಬಿದ್ದಂಥ ನಿದರ್ಶನ ಇದೆ, ಅಂತಹ ಜನರಿಗೆ ಇವತ್ತಿನ ದಿವಸ ಯಾವ ಪರಿಹಾರವನ್ನೂ ಕೂಡ ಕೊಡದೇ ಇರುವುದು ಬಹಳ ಚಿಂತಾಜನಕವಾದ ವಿಷಯ. ಏಕೆಂದರೆ ಮೇನ್‌ಕೆನಾಲ್ ಹೋಗತಕ್ಕ ಕಾಲದಲ್ಲಿ ಕೆಳಗಡೆ ಇರತಕ್ಕ ಗ್ರಾಮಗಳಿಗೆ ತುಂಬಾ ಅನಾನುಕೂಲ ಎಂಬುದನ್ನು ಗಮನಕ್ಕೆ ತೆಗೆದುಕೊಂಡು ಅವರಿಗೆ ಸರಿಯಾದ ಪರಿಹಾರವನ್ನು ಕೊಟ್ಟು ಅವರು ಮನೆಗಳನ್ನು ಕಟ್ಟಿಕೊಳ್ಳುವುದಕ್ಕೆ ಮತ್ತು ಗ್ರಾಮಗಳನ್ನು ಬೇರೆ ಕಡೆಗಳಿಗೆ ಬದಲಾಯಿಸಿಕೊಳ್ಳುವುದಕ್ಕೆ ಮೊದಲನೆಯ ಪ್ರಾಶಸ್ತ್ಯವನ್ನು ಕೊಡಬೇಕು. ರೀಹ್ಯಾಬಿಲಿಟೇಷನ್ ಪ್ರೋಗ್ರಾಂ ಪ್ರಕಾರ ಅದನ್ನು ಟ್ರೀಟ್ ಮಾಡಿದರೆ ಅವರಿಗೆ ಅನುಕೂಲವಾಗುತ್ತದೆ. ಎಂದು ನಾನು ಹೇಳುತ್ತಾ ಇದ್ದೇನೆ ಲೋಕಲೈಸೇಷನ್ ಮಾಡುವ ಕಾಲಕ್ಕೆ ಕೆಲವು ಸರ್ವೆ ನಂಬರ್‌ಗೆ ನೀರು ಬಂದಾಗ್ಯೂ ಕೂಡ ಇನ್ನು ಕೆಲವು ಸರ್ವೆ ನಮಂಬರ್‌ಗಳಿಗೆ ಬಿಟ್ಟು ಹೋಗತಕ್ಕ ಪರಿಸ್ಥಿತಿ ಇದೆ, ಅದನ್ನು ತಮ್ಮ ಗಮನಕ್ಕೆ ತಂದರೆ ಅದಕ್ಕೆ ನೀರು ಕೊಡುವುದಕ್ಕೆ ಅನುಕೂಲ ಮಾಡಿಕೊಡಬೇಕು. ನೀರು ಹೋಗಲಾರದ ಸರ್ವೇ ನಂಬರ್‌ಗೂ ಅನುಕೂಲ ಮಾಡಿಕೊಡಬೇಕೆಂದು ಹೇಳುತ್ತಾ ಇದ್ದೇನೆ.

ಇನ್ನು ಎಲೆಕ್ಟ್ರಿಸಿಟಿ ವಿಚಾರದಲ್ಲಿ ಕೆಲವು ವಿಷಯಗಳನ್ನು ಸರ್ಕಾರದವರ ಗಮನಕ್ಕೆ ತರಬೇಕಾಗಿದೆ. ಏಕೆಂದರೆ ಈಗ ಬೇಕಾದಷ್ಟು ಜನ ಪಂಪ್‌ಸೆಟ್ಟುಗಳನ್ನು ಹಾಕಿಕೊಂಡಿದ್ದಾರೆ; ಮತ್ತು ನೀರು ಕೊಡುತ್ತಾ ಇದ್ದೀರಿ. ಆದರೆ ತಾವು ಯಾವ ಲೈನ್‌ಮನ್‌ಗಳನ್ನು ಹಾಕಿದ್ದೀರಿ ಅವರು ಎಫಿಷೆಂಟ್ ಇಲ್ಲಿ, ಫ್ಯೂಸ್ ಹೋದರೂ ಕೂಡ ಅವರು ಹಾಕುವಂತಹ ಸ್ಥಿತಿಯಲ್ಲಿ ಇಲ್ಲ ಎಂದು ಹೇಳಬೇಕಾಗಿದೆ. ಅಲ್ಲಿಗೆ ಬಂದಂತಹ ಸೂಪರ್‌ವೈಸರುಗಳಾಗಲಿ, ಅಸಿಸ್ಟೆಂಟ್ ಇಂಜನಿಯಿರುಗಳಾಗಲಿ ಕೇವಲ ಮೋಟರ್ ರೀಡಿಂಗ್ ತೆಗೆದುಕೊಳ್ಳುತ್ತಾರೆಯೇ ಹೊರತು ಟ್ರಾನ್ಸ್‌ಫಾರ್ಮರ್ಸ್‌ನ್ನು ಒಬ್ಬರು ಚೆಕ್ ಮಾಡುವುದಿಲ್ಲ. ಇದು ಅತಿ ಮುಖ್ಯವಾದ ವಿಚಾರ. ಪಂಪ್‌ಸೆಟ್ ಇಟ್ಟುಕೊಂಡು ನೀರು ಕಟ್ಟಬೇಕು ಅಂತ ಹೇಳಿ ಅನೇಕ

ಏರ್ಪಾಡುಗಳನ್ನು ಮಾಡಿಕೊಂಡಿರುತ್ತಾನೆ. ಅಂತಹ ದಿವಸ ಹತ್ತುಬಾರಿ ಬ್ರೇಕ್‌ಡೌನ್ ಆದರೆ ಅವನ ಕೂಲಿ ಏನಾಗಬೇಕು? ಯಾವ ರೀತಿ ನೀರನ್ನು ಹಾಯಿಸಿಕೊಳ್ಳುವುದಕ್ಕೆ ಸಾಧ್ಯ ಎಂಬುದನ್ನು ಪರಿಶೀಲನೆ ಮಾಡಬೇಕು. ಅಲ್ಲಿಗೆ ಹೋಗತಕ್ಕ ಸೂಪರ್‌ವೈಸರ್‌ಗಳ ಕೆಲಸ ಮೀಟರ್ ರೀಡಿಂಗ್ ಒಂದೆ ಅಲ್ಲ, ಟ್ರಾನ್ಸ್‌ಫಾರ್ಮರ್‌ನ್ನು ಚೆಕ್ ಮಾಡಬೇಕಾದ್ದು ಬಹಳ ಮುಖ್ಯವಾದ ಎಂದು ಹೇಳಿ ಅವರಿಗೆ ಆದೇಶ ಕೊಡಬೇಕೆಂದು ಈ ಸಮಯದಲ್ಲಿ ಹೇಳುತ್ತೇನೆ.

ಇನ್ನು ಎಲೆಕ್ಟ್ರಿಸಿಟಿ ವಿಚಾರದಲ್ಲಿ ಹೇಳಬೇಕಾದರೆ ನಮ್ಮ ಕಾನ್‌ಸ್ಟಿಟ್ಯೂಯನ್ಸಿಯಲ್ಲಿ ಎರಡು ಪಂಪ್‌ಸೆಟ್‌ಲೈನ್‌ಗಳಿಗಾಗಿ ಎಂ. ಎಸ್. ಇ. ಬಿ.ಯವರನ್ನು ಕೇಳಿಕೊಂಡಿದ್ದೇವೆ. ಲಿಂಗಸೂಗೂರು ತಾಲ್ಲೂಕಿನಲ್ಲಿ ಗುಡಾಳು ಮಟ್ಟಿಮನಿ ಇಂದ ಮಸ್ಕಿವರೆಗೂ ಪಂಪ್‌ಸೆಟ್‌ಲೈನ್ ಅತಿ ಅಗತ್ಯವಾಗಿ ಆಗಬೇಕಾಗಿದೆ. ಹತ್ತಾರು ಬಾವಿಗಳನ್ನು ತೋಡಿಸಿದ್ದಾರೆ. ಪಂಪ್‌ಸೆಟ್ ಇಟ್ಟುಕೊಳ್ಳಲು ಏನು ಕೆಲಸ ಮಾಡಬೇಕೋ ಆ ಕೆಲಸವನ್ನೆಲ್ಲಾ ಮಾಡಿದ್ದಾರೆ. ಡೆಪಾಸಿಟ್ ಕೂಡ ಕಟ್ಟಿದ್ದಾರೆ ಅದನ್ನು ಪ್ರಯಾರಿಟಿ ಅಂತ ತಿಳಿದುಕೊಂಡು ಅಲ್ಲಿಗೆ ಅನುಕೂಲ ಮಾಡಿಕೊಡಬೇಕು. ಆ ಜನರಿಗೆ ಬೇರೆ ಯಾವ ತರಹದ ನೀರಿನ ಅನುಕೂಲವೂ ಇಲ್ಲ, ಕೇವಲ ಕೆಂಪು ಜಮೀನು ಇರತಕ್ಕ ಬಡ ಜನರು ಅವರು. ಪಂಪ್‌ಸೆಟ್‌ನ್ನು ಹಾಕಿಕೊಳ್ಳಲು ಲೈನ್ ಎಳೆದರೆ ಅವರಿಗೆ ತಂಬಾ ಅನುಕೂಲವಾಗುತ್ತದೆ ಎಂದು ಈ ಸಮಯದಲ್ಲಿ ಸರ್ಕಾರದವರ ಗಮನಕ್ಕೆ ತರಲು ಬಯಸುತ್ತೇನೆ.

ಇನ್ನು ಈ ಕಾರ್ಡುಗಳನ್ನು ಕೊಡತಕ್ಕ ವಿಚಾರಕ್ಕೆ ಬಂದರೆ ಕೆಲವು ಕಡೆ ತಿಂಗಳುಗಳ ಗಟ್ಟಲೆ ಕಾರ್ಡನ್ನೇ ಕೊಡುವುದಿಲ್ಲ. ಆ್ ಇನ್ನು ಕೆಲವು ಕಡೆ ತಿಂಗಳಿಗೆ ಸರಿಯಾಗಿ ಕಾರ್ಡುಗಳನ್ನು ಕಳುಹಿಸುತ್ತಾರೆ. ಬೆಂಗಳೂರಿನಲ್ಲಿ 3–4 ತಿಂಗಳಾದರೂ ಅವರು ಕಾರ್ಡನ್ನೇ ಕಳುಹಿಸುವುದಿಲ್ಲ. ನಮ್ಮ ಕಡೆ 25ನೇ ತಾರೀಖಿನೊಳಗಾಗಿ ದುಡ್ಡನ್ನು ಕಟ್ಟದಿದ್ದರೆ ಡಿಸ್‌ಕನೆಕ್ಟ್ ಮಾಡುತ್ತೇವೆಂದು ಹೇಳುತ್ತಿದ್ದಾರೆ. ಇಲ್ಲಿ ಬೆಂಗಳೂರಿನಲ್ಲಿ 2–3 ತಿಂಗಳಿಗೊಂದಾವರ್ತಿ ಕಾರ್ಡನ್ನು ಕಳುಹಿಸಿ, ಅದರ ಜೊತೆಯಲ್ಲೇ ಸಕಾಲಕ್ಕೆ ಕಟ್ಟದಿದ್ದುದರಿಂದ ಪೆನಾಲ್ಟಿಯನ್ನೂ ಸಹ ಸೇರಿಸಿ ಕಟ್ಟಬೇಕೆಂದು ಹೇಳುತ್ತಿದ್ದರೆ. ಹೀಗೆ ಇದು ಒಂದೊಂದು ಕಡೆ ಒಂದೊಂದು ರೀತಿಯಾಗಿ ನಡೆಯುತ್ತಿದೆ. ಇದು ಸರಿಯಾದುದಲ್ಲ. ಎಲ್ಲಾ ಕಡೆಯಲ್ಲೂ ಒಂದು ಸಿಸ್ಟಂನ್ನು ಜಾರಿಗೆ ತರುವುದು ಒಳ್ಳೆಯದೆಂದು ಹೇಳುತ್ತೇನೆ.

ಇನ್ನು ರೂರಲ್ ಕಮ್ಯೂನಿಕೇಷನ್ ವಿಚಾರಕ್ಕೆ ಬಂದರೆ–ನಮ್ಮಲ್ಲಿ 30–40 ಮೈಲಿಗಳ ರಸ್ತೆಯನ್ನು ಸ್ಟೇಟ್‌ಫಂಡ್ ರೋಡನ್ನಾಗಿ ಮಾಡುವುದಕ್ಕೆ ಹಣವನ್ನು ತಾವು ಕೊಟ್ಟಿರುವುದು ಸಾಲದು. ಈ ಹಣ ಒಂದು ಮರ ಹಾಕಿಸುವುದಕ್ಕಾಗಲೀ ಅಥವಾ ಕಲ್ವರ್ಟುಗಳನ್ನು

ಕಟ್ಟಿಸುವುದಕ್ಕೆ ಸಕಾಗುವುದಿಲ್ಲ. ಆದುದರಿಂದ ಸರ್ಕಾರದವರು ಇದರ ಕಡೆಗೆ ಹೆಚ್ಚಿನ ನಿಗಾ ಕೊಟ್ಟು ಹೆಚ್ಚು ಹಣವನ್ನು ಒದಗಿಸಿ ಆ ರಸ್ತೆಗಳನ್ನು ಜನೋಪಯುಕ್ತ ರಸ್ತೆಗಳನ್ನಾಗಿ ಮಾಡಲು ಅದಕ್ಕೆ ಬೇಕಾಗುವ ಹಣವನ್ನು ಲಂಮ್‌ಸಂ ಗ್ರಾಂಟಿನಲ್ಲಿ ಉಪಯೋಗಿಸುವುದಕ್ಕೆ ಎಗ್ಜಿಕ್ಯೂಟೀವ್ ಇಂಜಿನಿಯರ್ ಅವರಿಗೆ ಸೂಕ್ತ ತಿಳುವಳಿಕೆಯನ್ನು ಕೊಡಬೇಕೆಂದು ಹೇಳುತ್ತೇನೆ.

ಇನ್ನು ಗೆಸ್ಟ್ ಹೌಸ್‌ಗಳ ವಿಚಾರಕ್ಕೆ ಬಂದರೆ–ಮಾನ್ವಿಯಲ್ಲಿ ಒಂದು ಗೆಸ್ಟ್ ಹೌಸ್ ಇದೆ ಅಲ್ಲಿಗೆ ಪರದೇಶಗಳಿಂದ ಸಹಿತ ನೂರಾರು ಜನರು ಬಂದು ಹೋಗುತ್ತಿದ್ದಾರೆ. ಅಲ್ಲದೆ ಸರ್ಕಾರಿ ಅಧಿಕಾರಿಗಳೂ ಪದೇ ಪದೇ ಅಲ್ಲಿಗೆ ಬರುತ್ತಿದ್ದಾರೆ. ನಾವು ವರ್ಷದಲ್ಲಿ ಅನೇಕಾವರ್ತಿ ಅಲ್ಲಿ ಮೀಟಿಂಗ್‌ಗಳನ್ನು ಬೇರೆ ಕರೆಯುತ್ತಿರುತ್ತೇವೆ. ಅಲ್ಲಿ ಕೇವಲ 2 ರೂಮುಗಳು ಮಾತ್ರ ಇರುತ್ತವೆ. ಅವು ಸಾಲದು. ಹೀಗೆ ಧಡೆಸೂಗೂರಿನಲ್ಲಿ ಒಂದು ಗೆಸ್ಟ್ ಹೌಸ್ ಇದೆ. ಅಲ್ಲಿ ಒಂದು ಅಗ್ರಿಕಲ್ಚರಲ್ ಸ್ಕೂಲ್ ಮತ್ತು ಫಾರಂ ಸಹಿತ ಇದೆ. ಆ ರಸ್ತೆಯಲ್ಲಿ ಮಧ್ಯೆ ಇನ್ನಾವ ಗೆಸ್ಟ್ ಹೌಸ್‌ಗಳೂ ಇರುವುದಿಲ್ಲ. ಅದುದರಿಂದ ಈ ಎರಡು ಗೆಸ್ಟ್ ಹೌಸ್‌ಗಳನ್ನೂ ಉತ್ತಮಗೊಳಿಸಿ ಇವನ್ನು ಇನ್ನೂ ದೊಡ್ಡದಾಗಿ ಮಾಡಬೇಕೆಂದು ಹೇಳುತ್ತೇನೆ.

ಇನ್ನು ಫ್ಲಡ್ ಅಡಚಣೆಯನ್ನು ತಪ್ಪಿಸತಕ್ಕ ವಿಚಾರಕ್ಕೆ ಬಂದರೆ–ನಮ್ಮಲ್ಲಿ ಅನೇಕ ಹಳ್ಳಗಳಿರುತ್ತವೆ. ಅವು ವಿಶೇಷವಾಗಿ ಕೊರೆದು ಅನೇಕ ಹಳ್ಳಿಗಳು ಜೀರ್ಣವಾಗತಕ್ಕ ಸ್ಥಿತಿಗೆ ಬಂದಿವೆ. ನಮ್ಮಲ್ಲಿ ಮಸ್ಕಿ ಎಂಬುದು ದೊಡ್ಡ ಗ್ರಾಮ. ಅದು ಹಳ್ಳದ ಕೊರೆತಕ್ಕೆ ಸಿಕ್ಕಿ ಬಹಳ ತೊಂದರೆಗೊಳಗಾಗಿದೆ. ಇದಕ್ಕೆಲ್ಲಾ ಫ್ಲಡ್ ಪ್ರೊಟೆಕ್ಷನ್ ಬೋರ್ಡಿನವರು ಹಣವನ್ನು ಒದಗಿಸಬೇಕಾಗಿದೆ. ಈ ವಿಚಾರದಲ್ಲಿ ಸರ್ಕಾರದವರು ಹೆಚ್ಚಿನ ಆಸಕ್ತಿಯನ್ನು ವಹಿಸಬೇಕು. ಎಲ್ಲೆಲ್ಲಿ ಇಂಥಾ ಪ್ರಪೋಜಲ್‌ಗಳು ಬಂದಿವೆಯೋ ಅಲ್ಲಿಗೆಲ್ಲಾ ಈ ಬೋರ್ಡಿನಿಂದ ಅನುಕೂಲವನ್ನು ಒದಗಿಸಿಕೊಡಬೇಕು. ಆದರೆ ಒಟ್ಟಿನಲ್ಲಿ ಗುಡಿಹಾಳು ಮತ್ತು ಮಸ್ಕಿ ಗ್ರಾಮಗಳಿಗೆ ಮೊದಲು ಅನುಕೂಲ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ಮೈನರ್ ಟ್ಯಾಂಕುಗಳ ವಿಚಾರಕ್ಕೆ ಬಂದರೆ–ಮಲಟ ಮತ್ತು ಹೂವಿನಬಾವಿ ಈ ಎರಡು ಕಡೆಗಳಲ್ಲಿ ಎರಡು ಪ್ರಾಜೆಕ್ಟ್‌ಗಳು ಆಗಬೇಕಾಗಿದೆ. ಅಲ್ಲಿಯ ಜನರಿಗೆ ಯಾವ ನೀರಾವರಿ ಸೌಕರ್ಯಗಳು ಇರುವುದಿಲ್ಲ. ಅದುದರಿಂದ ಇಲ್ಲಿಗೆ ಎರಡು ನೀರಾವರಿ ಯೋಜನೆಗಳನ್ನು ಮಾಡಿಸಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಇನ್ನು ಅಲ್ಲಿ ಮಸ್ಕಿನಾಲ ಎಂಬ ಒಂದು ಪ್ರಾಜೆಕ್ಟ್ ಕೆಲಸ ಪ್ರಾರಂಭವಾಗಿ ಇಲ್ಲಿಗೆ 30–40– ವರ್ಷಗಳ ಮೇಲಾಯಿತು. ಆದರೆ ಹಿಂದಿದ್ದ ಸರ್ಕಾರ ಅರ್ದಮರ್ದ ಕೆಲಸವನ್ನು ಮಾಡಿ ಅದು ಅಲ್ಲಿಗೇ

ನಿಂತುಹೋಗಿದೆ. ಆ ಪ್ರಾಜೆಕ್ಟಿನ ಕೆಳಗೆ ಸುಮಾರು 6500 ಎಕರೆ ತರಿಸಾಗುವಳಿಗೆ ಬರುತ್ತದೆ. ಇಷ್ಟು ಭೂಮಿ ಅಲ್ಲಿ ನೀರಾವರಿ ಆಗುತ್ತದೆ. ಎಂಬ ಒಂದು ವರದಿ ಈ ದಿವಸ ಸರ್ಕಾರದವರ ಮುಂದಿದೆ. ಆ ಪ್ರಾಜೆಕ್ಟ್‌ನ್ನು ಕೂಡಲೆ ಕೈಗೊಂಡು ಆ ಪ್ರದೇಶದ ಜನರಿಗೆ ಅನುಕೂಲಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಆ ಪ್ರಾಜೆಕ್ಟಿಗೆ ಬಹಳ ಕಡಿಮೆ ಹಣ ಖರ್ಚಾಗುತ್ತದೆ. ಅದು ಮೀಡಿಯಂ ಪ್ರಾಜೆಕ್ಟ್. ಲಿಂಗಸೂಗೂರು ತಾಲ್ಲೂಕ್ ಯಾಪಾಗಲೂ ಬರಗಾಲಪೀಡಿತ ಪ್ರದೇಶ. ಅವರಿಗೆ ಸರ್ಕಾರದವರು ಈ ಒಂದು ಪ್ರಾಶಜೆಕ್ಟ್‌ನ್ನು ಮಾಡಿಸಿಕೊಟ್ಟರೆ ಅವರೂ ಕೂಡ ಭತ್ತ ಬೆಳೆಯುವ ಪ್ರದೇಶದ ಜನರಂತೆ ಸಂತೋಷದಿಂದ' ಇರುವುದಕ್ಕೆ ಅವಕಾಶವಾಗುತ್ತದೆ. ಈಗಾಗಲೇ ಈ ಪ್ರಾಜೆಕ್ಟ್‌ನ್ನು ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ ಕೂಡಿಸಿ ಇದಕ್ಕೆ ಒಂದು ಲಕ್ಷ ರೂಪಾಯಿಗಳ ಒಂದು ಟೋಕನ್ನು ಗ್ರಾಂಟ್‌ನ್ನು ಒದಗಿಸಿದ್ದಾರೆ. ಅದುದರಿಂದ ಈ ಪ್ರಾಜೆಕ್ಟ್‌ನ್ನು ಸರ್ಕಾರದವರು ಕಡ್ಡಾಯವಾಗಿ ಮಾಡಿಸಿಕೊಡಬೇಕೆಂದು ಪ್ರಾರ್ಥಿಸಿ ಅಧ್ಯಕ್ಷರನ್ನು ವಂದಿಸಿ ನನ್ನ ಮಾತಗಳನ್ನು ಮುಗಿಸುತ್ತೇನೆ.

# ನೀರಾವರಿ

ನೀರಾವಾರಿ, ತುಂಗಭದ್ರ ಕಾಲುವೆ ಹರಿದ ಪ್ರದೇಶದಲ್ಲಿ ಏನು ಅಭಿವೃದ್ಧಿ ಆಗದಿರುವ ಬಗ್ಗೆ ವಿಷಾದಗೊಂಡ ಬಸವರಾಜೇಶ್ವರಿಯವರು ಸರ್ಕಾರಕ್ಕೆ ಉತ್ಕೃಷ್ಟ ಸಲಹೆ ನೀಡುವುದಲ್ಲದೇ ಜನರನ್ನು ಜಾಗ್ರತೆಗೊಳಿಸಿ ಸೂಕ್ತ ವೇಳೆಯಲ್ಲಿ ಕೆಲಸಕ್ಕೆ ಮುಂದಾಗಬೇಕೆಂದು ಸೂಚಿಸುತ್ತಾರೆ.

ಭೂಮಿಹದ, ಸಬ್ಸಿಡಿ, ನೀರಾವರಿ ಯೋಜನೆಯ ಸಮಗ್ರ ಫಲವನ್ನು ಉಣ್ಣದೇ ಇರುವ ರಾಯಚೂರು ಜಿಲ್ಲೆ ಪ್ರದೇಶದ ರೈತರಿಗೆ ಬವಣೆ-ಸಮಸ್ಯೆ ವಿವರಿಸಿ ಅದಕ್ಕೆ ಪರಿಹಾರ ಸೂಚನೆನೀಡುತ್ತಾರೆ.

**ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ).-** ಮಾನ್ಯ ಅಧ್ಯಕ್ಷರೆ, ನಮ್ಮ ಮುಂದೆ ಇರತಕ್ಕ ವ್ಯವಸಾಯ ಬೇಡಿಕೆ ಮತ್ತು ಇತರ ಬೇಡಿಕೆಗಳನ್ನು ನಾನು ಅನುಮೋದಿತ್ತಾ ಕೆಲವು ವಿಷಯಗಳನ್ನು ಸರ್ಕಾರದ ಗಮನಕ್ಕೆ ತರಬೇಕೆಂದು ಅಪೇಕ್ಷೆ ಪಡುತ್ತೇನೆ. ಇದುವರೆಗೆ ರಾಯಚೂರು ಜಿಲ್ಲೆಯಲ್ಲಿ ಅದರಲ್ಲೂ ತಂಗಭದ್ರಾ ಏರಿಯಾದಲ್ಲಿ ಈ ವಿಚಾರದಲ್ಲಿ ಏನೇನೂ ಅಭಿವೃದ್ದಿಯಾಗಿಲ್ಲ. ನೀರು ಸುಮ್ಮನೆ ಹೋಗುತ್ತಿದೆ. ರೈತರು ಇರ್ರಿಗೇಟೆಡ್ ಮೈಂಡ್‌ನಲ್ಲಿಲ್ಲ. ಈ ಬಗ್ಗೆ ಎಲ್ಲಾ ಕಡೆಗಳಿಂದಲೂ ಟೀಕೆಗಳು ಬಂದಿವೆ. ಆದ್ದರಿಂದ ಇವತ್ತು ಅಲ್ಲಿರತಕ್ಕ ನ್ಯೂನತೆಗಳನ್ನು ಹೆಚ್ಚಿನಮಟ್ಟಿಗೆ ಹೋಗಲಾಡಿಸಿ ಅಲ್ಲಿನ ಅಭಿವೃದ್ದಿ ಕೆಲಸಕಾರ್ಯಗಳ ಬಗ್ಗೆ ಅತಿ ತ್ವರಿತವಾಗಿ ವ್ಯವಸ್ಥೆ ಮಾಡಬೇಕು. ಅಲ್ಲಿ ಬಹುಮಟ್ಟಿಗೆ ಮೊಟ್ಟ ಮೊದಲನೆಯದಾಗಿ ರೊಕ್ಕದ ಅಡಚಣೆ ಇತ್ತು. ಇವತ್ತು ಫೈನಾನ್ಸಿಂಗ್ ಕಾರ್ಪೋರೇಷನ್ನಿನವರು ಸುಮಾರು ಎಂಟೂವರೆ ಕೋಟಿ ರೂಪಾಯಿಗಳನ್ನು ಅಲ್ಲಿನ ಅಭಿವೃದ್ದಿ ಸಲುವಾಗಿ ಕೊಟ್ಟಿದ್ದಾರೆ. ಇದು ಮಾನ್ಯ ಮುಖ್ಯ ಮಂತ್ರಿಗಳ ಸಹಾಯದಿಂದ ಆಯಿತು ಎಂದು ಹೇಳಿದರೆ ತಪ್ಪಾಗಲಾರದು. ಇದರ ಪೈಕಿ 6 ಕೋಟಿ ರೂಪಾಯಿಗಳ ಅಂದಾಜುಮಾಡಿ ಅದನ್ನು ಅಲ್ಲಿರತಕ್ಕ ಜಮೀನುಗಳನ್ನು ಲೆವಲ್ ಮಾಡುವುದಕೋಸ್ಕರ ಮೀಸಲಾಗಿಟ್ಟಿದ್ದಾರೆಂಬುದಾಗಿ ನನಗೆ ತಿಳಿದು ಬಂದಿದೆ. ಆದ್ದರಿಂದ ಅದಕ್ಕೆ ಸಂಬಂಧಪಟ್ಟ ಮೆಷಿನರಿಗಳನ್ನು ತ್ವರಿತವಾಗಿ ತರಿಸಿ ಈ ಒಂದು ಯೋಜನೆಯನ್ನು ಆದಷ್ಟು ಜಾಗ್ರತೆ ಮಂಜೂರುಮಾಡಿ ಆ ಜಮೀನುಗಳನ್ನು ಲೆವಲ್ ಮಾಡಿದರೆ ವ್ಯವಸಾಯಾಭಿವೃದ್ದಿ ಬಹಳ ತ್ವರಿತವಾಗಿ ನಡೆಯುತ್ತದೆ.

ಎರಡನೆಯದಾಗಿ, ಅಕ್ಸ್‌ಫಾಮ್ ಪ್ರೋಗ್ರಾಂ ಪ್ರಕಾರ ಮಾನ್ಯ ಮುಖ್ಯ ಮಂತ್ರಿಗಳು ಆಹಾರವನ್ನು ನಾವು ಹೆಚ್ಚು ಬೆಳೆಯುತ್ತೇವೆ. ಪ್ರತಿಯೊಂದು ಜಮೀನನ್ನು ಉಪಯೋಗಿಸುತ್ತೇವೆಂದು ಹೇಳಿದಾಗ ಮತ್ತು ಅದಕ್ಕೆ ಬೇಕಾದಂಥ ಫರ್ಟಿಲೈಜರ್ಸ್ ಸಹಾಯ ಮಾಡಬೇಕೆಂದು ಕೇಳಿದಾಗ, ಅದರ ಬಗ್ಗೆ ಒಂದು ದೂರ ವಿಚಾರವನ್ನು ಇಟ್ಟುಕೊಂಡು ಜೋನಕ್ಕೆ ಕರೆಸ್‌ಪಾಂಡಾಗಿರತಕ್ಕ ಹೈಬ್ರಿಡ್‌ಮೆಯ್ಜ್ ಬೆಳೆಯತಕ್ಕ ರೈತರಿಗೆ ಪರ್ಟಿಲೈಜರ್ಸ್ ಮತ್ತೇ ಬೀಜಗಳನ್ನು ನಮಗೆ ಸರಬರಾಜು ಮಾಡಿದ್ದಕ್ಕೆ ಮಾನ್ಯ ಮುಖ್ಯ ಮಂತ್ರಿಗಳು ಯೂನಿವರ್ಸಿಟಿ ಆಫ್ ಅಗ್ರಿಕಲ್‌ಚರಲ್ ಸೈನ್ಸ್ ಅವರಿಗೆ ಆ ರೀತಿ ಸರಬರಾಜು ಮಾಡಿದಂತಹ ಅಭಿನಂದನೆಗಳನ್ನು ಸಲ್ಲಿಸಬೇಕಾಗಿದೆ. ನಮ್ಮ ದೇಶದ ರೈತರಿಗೆ ಹೈಬ್ರಿಡ್ ಮೇಯ್ಜ್ ಬೆಳೆಯುವುದಕೋಸ್ಕರ ಬೀಜಗಳು ಮತ್ತು ಗೊಬ್ಬರವನ್ನು ಒದಗಿಸಿದ್ದಕ್ಕಾಗಿ ನಾನು ನನ್ನ ಕ್ಷೇತ್ರದ ಪರವಾಗಿ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ. ಮತ್ತು ಅದರ ಜೊತೆಗೆ ಹೈಬ್ರಿಡ್ ಸೀಡ್ಸ್ ಫಾರಮ್ ಮಾಡಬೇಕೆಂದು ಜನಗಳು ಮುಂದೆ ಬಂದಾಗ ಇಲಾಖೆಯವರು ಹೆಚ್ಚು ಆಸಕ್ತಿ ವಹಿಸಿ ತುಂಗಭದ್ರಾ ಏರಿಯಾದಲ್ಲಿ ಅದನ್ನು ಸ್ಥಾಪಿಸಲು ಸಹಾಯ ಮಾಡುವುದು ಅಗತ್ಯ. ಅಲ್ಲಿ ಸುಮಾರು 6–7 ಲಕ್ಷ ಎಕರೆ ಜಮೀನು ನೀರಾವರಿ ಆಗುತ್ತದೆ. ಆದ್ದರಿಂದ ಆ ಪ್ರದೇಶದಲ್ಲಿ ಹೈಬ್ರಿಡ್ ಸೀಡ್ಸ್ ಬೆಳೆಯುವುದಕ್ಕೆ ಸರ್ಕಾರದವರು ಅನುಕೂಲ ಮಾಡಬೇಕು. ಅದರಲ್ಲಿ 3–3½ ಲಕ್ಷ ಎಕರೆ ಡ್ರೈ ಕಂ ವೆಟ್ ಏರಿಯಾ ಆಗುತ್ತದೆ. ಆದರಲ್ಲಿ ಜೋಳ ಮುಸುಕಿನ ಜೋಳ, ಮತ್ತು ಇತರ ಆಹಾರ ಪದಾರ್ಥಗಳನ್ನು ಬೆಳೆಯಬಹುದು. ಅದರಲ್ಲಿ 400 ಎಕರೆಯಲ್ಲಿ ಜೋಳ, 200 ಎಕರೆಯಲ್ಲಿ ಗೌನ್ ಜೋಳ 50–60 ಎಕರೆಯಲ್ಲಿ ಸಜ್ಜೆಯನ್ನು ಬೆಳೆಯಬೇಕೆಂದು ಇಂದು ಪ್ರೋಗ್ರಾಮನ್ನು ಹಾಕಿಕೊಂಡಿದ್ದೇವೆ. ಅದಕ್ಕೆ ನ್ಯಾಷನಲ್ ಸೀಡ್ ಕಾರ್ಪೋರೇಷನ್‌ನವರು ಬೀಜಗಳನ್ನು ಒದಗಿಸಿಕೊಟ್ಟು ಸಹಾಯ ಮಾಡಿದ್ದಾರೆ. ಅದಕ್ಕಾಗಿ ಅವರಿಗೆ ನಮ್ಮ ವಿನಂತಿಯನ್ನು ತಿಳಿಸಬೇಕಾಗಿದೆ. ಆ ರೀತಿ ನಾವು ಪ್ರೋಗ್ರಾಮ್ ಹಾಕಿಕೊಂಡು ಬೆಳೆಯನ್ನು ಬೆಳೆಯಬೇಕೆಂದು ಹೊರಟಾಗ ತುಂಗಭದ್ರಾ ಆ ಮೈನ್ ಕೆನಾಲ್ ಬ್ರೀಚ್ ಆದಾಗ ನಮ್ಮ ಪ್ರೋಗ್ರಾಂ ಎಲ್ಲಾ ಪಲ್ಲಟವಾಯಿತು. 400 ಎಕರೆಯಲ್ಲಿ ಜೋಳವನ್ನು ಹಾಕಬೇಕೆಂದು ಪ್ರೋಗ್ರಾಂ ಹಾಕಿ ಕೊಂಡದ್ದಕ್ಕೆ ಕೇವಲ 50–60 ಎಕರೆಯಲ್ಲಿ ಮಾತ್ರ ಬೀಜವನ್ನು ಹಾಕುವುದಕ್ಕೆ ಸಾಧ್ಯವಾಯಿತು. ಉಳಿದಂತಹ ಬೀಜವೆಲ್ಲಾ ಹಾಗೆಯೇ ಇದೆ. ಜೂನ್ ತಿಂಗಳಿನಲ್ಲಿ ಅದನ್ನು ಹಾಕುತ್ತೇವೆ. ಈ ರೀತಿ ಕೆನಾಲ್‌ಗಳು ಬ್ರೀಚ್ ಆದಾಗ ಎಮರ್ಜೆನ್ಸಿ ಸ್ಕ್ವಾಡ್ ಅನ್ನು ಇಟ್ಟು ಬೇಗ ಆ ಕೆನಾಲ್ ಅನ್ನು ರಿಪೇರಿ ಮಾಡದಿದ್ದರೆ ರೈತರ ಗತಿ ಏನು? ರೈತರು ಎಷ್ಟೋ ದುಡ್ಡನ್ನು ಖರ್ಚುಮಾಡಿ ವ್ಯವಸಾಯವನ್ನು ಮಾಡಿರುತ್ತಾರೆ. ಆ ಸಂದರ್ಭದಲ್ಲಿ ಅವರಿಗೆ ಸರ್ಕಾರದವರು ಸಹಾಯ ಮಾಡಿದಿದ್ದರೆ ಅವರಿಗೆ ಬಹಳ ತೊಂದರೆಯಾಗುತ್ತದೆ. ಒಂದು ಎಮರ್ಜೆನ್ಸಿ ಸ್ಕ್ವಾಡ್‌ನ್ನು ಇಟ್ಟು, ಆರ್ತ

ಮೂವಿಂಗ್ ಮೆಷನ್ ಮತ್ತು ಲಾರಿಗಳನ್ನು ಇಟ್ಟು ಕನಿಷ್ಠ ಪಕ್ಷ 7–8 ದಿವಸಗಳಲ್ಲಿ ಬ್ರೀಚಾಗಿರತಕ್ಕ ಕೆನಾಲ್‌ಗಳನ್ನು ರಿಪೇರಿ ಮಾಡುವುದಕ್ಕೆ ಅನುಕೂಲ ಮಾಡಿಕೊಡಬೇಕು. ಇಲ್ಲದಿದ್ದರೆ ರೈತರಿಗೆ ವಿಪರೀತವಾದ ಹಾನಿಯುಂಟಾಗುತ್ತದೆ. ತುಂಗಭದ್ರಾ ಪ್ರಾಜೆಕ್ಟಾಗಲೀ, ಅಥವಾ ಬೇರೆ ಯಾವ ಪ್ರಾಜೆಕ್ಟ್ ಅಗಲೀ ಬ್ರೀಚಾಗಿ ಅನಾನುಕೂಲಗಳು ಅದಾಗ ಆದಷ್ಟುಮಟ್ಟಿಗೆ ತೀವ್ರವಾಗಿ ರಿಪೇರಿ ಮಾಡುಕೊಳ್ಳಬೇಕು. ಈಗ ಅದನ್ನು ರಿಪೇರಿ ಮಾಡುವುದಕ್ಕೆ 20.25 ದಿವಸಗಳನ್ನು ಸರ್ಕಾರದವರು ಪ್ರಯತ್ನ ಮಾಡಬೇಕೆಂದು ನಾನು ಹೇಳುತ್ತೇನೆ. ಹೈಬ್ರಿಡ್ ಸೀಡ್ ಫಾರಮ್‌ನಲ್ಲಿ 400–500 ಎಕರೆಯಲ್ಲಿ ಬೆಳೆಯನ್ನು ಬೆಳೆಯಬೇಕೆಂದು ನಾವು ಪ್ರೋಗ್ರಾಮ್ ಹಾಕಿಕೊಂಡಿದ್ದೇವು, ಅದಕ್ಕೆ ಬೇಕಾದ ಬೀಜಗಳೇನೋ ಸಿಕ್ಕಿದವು, ಆದರೆ ಅದಕ್ಕೆ ಸಂಬಂಧಪಟ್ಟ ಇನ್‌ಸೆಕ್ಟಿ ಪೈಡ್ಸ್ ಸಿಕ್ಕಲಿಲ್ಲ. ಇದರಿಂದ ಅಲ್ಲಿ ರೈತರಿಗೆ ತುಂಬಾ ಅನಾನುಕೂಲವಾಯಿತು. ಆದ್ದರಿಂದ ಇದರ ಬಗ್ಗೆ ಸರ್ಕಾರದವರು ನಿಗಾ ಕೊಡಬೇಕು. ಇಲಾಖೆಯವರು ರಿಸರ್ಚ್ ಮಾಡಬೇಕು, ಬೆಳೆಗಳಿಗೆ ಯಾವ ಯಾವ ರೋಗ ಬರುತ್ತದೆ ಎಂಬುದನ್ನು ಕಂಡುಹಿಡಿದು ಅದಕ್ಕೆ ಬೇಕಾದಂತಹ ಔಷಧಿಯನ್ನು ಸಕಾಲದಲ್ಲಿ ರೈತರಿಗೆ ಒದಗಿಸಿಕೊಡಬೇಕು ಎಂದು ನಾನು ಸಲಹೆ ಮಾಡುತ್ತೇನೆ. ಅಲ್ಲಿ ರೈತರು ಜಾಗ್ರತೆಯಾಗಿ ಹೆಚ್ಚು ಹೆಚ್ಚಾಗಿ ಬೆಳೆಯತಕ್ಕ ಬಿತ್ತನೆ ಬೀಜಗಳನ್ನು ಕೊಯಮತ್ತೂರು ಮುಂತಾದ ಪ್ರದೇಶಗಳಿಂದ ಒಂದು ಕೆ.ಜಿ.ಗೆ. 15 ರೂಪಾಯಿಗಳನ್ನು ಕೊಟ್ಟು ಕೊಂಡುಕೊಂಡು ಬಂದು ನವೆಂಬರ್ ಮತ್ತು ಅಕ್ಟೋಬರ್ ತಿಂಗಳಿನಲ್ಲಿ ಬಿತ್ತನೆ ಮಾಡಿದ್ದಾರೆ. ಆದರೆ ಆ ಬೆಳೆಯೆಲ್ಲಾ ಹಾಳಾಗಿ ಹೋಯಿತು. ಸೀಡ್ ಫಾರಮ್‌ಗಳಲ್ಲಿ ಒಬ್ಬೊಬ್ಬರು ಒಂದೊಂದು ತರಹ ಬೀಜಗಳನ್ನು ಬೆಳೆಯುತ್ತಾರೆ. ಅದನ್ನು ಹೇಗೆ ಬೆಳೆಯಬೇಕು ಯಾವ ರೋಗ ಬಂದರೆ ಯಾವ ಔಷಧಿಯನ್ನು ಹಾಕಬೇಕು, ಯಾವುದನ್ನು ಉಪಯೋಗಿಸಿದರೆ ರೋಗವು ಕಂಪ್ಲೀಟಾಗಿ ಕ್ಯೂರ್ ಆಗುತ್ತದೆ ಎಂಬುದನ್ನು ರೈತರಿಗೆ ಕಂಡುಬರುವುದಿಲ್ಲ. ಆದ್ದರಿಂದ ಅದನ್ನ ರಿಸರ್ಚ್ ಮಾಡಬೇಕಾದ್ದು ಅಗತ್ಯ. ಮತ್ತು ಬೆಳೆಗಳಿಗೆ ರೋಗ ಬಂದಾಗ ಯಾವ ಔಷಧಿಯನ್ನು ಹೇಗೆ ಎಷ್ಟು ಪ್ರಮಾಣದಲ್ಲಿ ಹೊಡೆಯಬೇಕು, ಎನ್ನುವ ಬಗ್ಗೆ ರೈತರಿಗೆ ತಿಳುವಳಿಕೆಯನ್ನು ಕೊಡಬೇಕು. ಅವರು ವ್ಯವಸಾಯಕ್ಕೆ ಬೇಕಾದಷ್ಟು ದುಡ್ಡನ್ನು ಇನ್‌ವೆಸ್ಟ್ ಮಾಡಿರುತ್ತಾರೆ. ಒಂದು ವೇಳೆ ಬೇಳೆ ಏನಾದರೂ ಕೆಟ್ಟು ಹೋದರೆ ಅವರಿಗೆ ತೊಂದರೆಯಾಗುತ್ತದೆ. ಹೈಬ್ರಿಡ್ ಸೀಡ್ಸ್‌ಗೆ ಪ್ರೊಸೆಸಿಂಗ್ ಯೂನಿಟ್ ಬೇಕಾಗಿದೆ, ನಾವು ಬೆಳೆಯುವ ಬೀಜಗಳಿಗೆ ಸರ್ಟಿಫಿಕೇಟ್ ಸಿಕ್ಕದೇ ಇದ್ದರೆ ಬೀಜಗಳನ್ನು ಹಂಚುವುದಕ್ಕೆ ಅನಾನುಕೂಲವಾಗುತ್ತದೆ ಎಂದು ನಾನು ಸರ್ಕಾರದಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ನಮಗೆ ಎರಡು ಪ್ರಿಸೆಸಿಂಗ್ ಯೂನಿಟ್‌ಗಳು ಬೇಕಾಗುತ್ತದೆ. ಆದ್ದರಿಂದ ಅವುಗಳನ್ನು ಕಾಲಕ್ಕೆ ಸರಿಯಾಗಿ ತರಿಸಿ ಕೊಡಬೇಕೆಂದು ನಾನು ಸರ್ಕಾರಕ್ಕೆ ಸಲಹೆ ಮಾಡುತ್ತೇನೆ.

ಇನ್ನು ತುಂಗಭದ್ರ ಏರಿಯಾದಲ್ಲಿ ಕೆಲಸ ಮಾಡುವುದಕ್ಕೋಸ್ಕರ 30 ಟ್ರಾಕ್ಟರುಗಳನ್ನು ಸರ್ಕಾರದವರು ಮಂಜೂರು ಮಾಡಿದ್ದಾರೆ. ಈಗ ಟ್ರ್ಯಾಕ್ಟರುಗಳನ್ನು ನಡೆಸುವುದಕ್ಕೆ ಫುಲ್‌ಟೈಂ ಕೆಲಸ ಮಾಡತಕ್ಕ ಸಿಬ್ಬಂದಿವರ್ಗ ಇಲ್ಲ. ಪ್ರೈವೇಟ್ ಏಜೆನ್ಸಿಯವರು ಇಟ್ಟಿರತಕ್ಕ ಟ್ರಾಕ್ಟರುಗಳಿಂದ 8 ರಿಂದ 12ಗಂಟೆಗಳ ಕಾಲ ಕೆಲಸವನ್ನು ಮಾಡುತ್ತಾರೆ. ಸರ್ಕಾರಕ್ಕೆ ಸಂಬಂಧಪಟ್ಟ ಟ್ರಾಕ್ಟರುಗಳಲ್ಲಿ ಫುಲ್‌ಟೈಮ್ ಕೆಲಸ ಮಾಡತಕ್ಕವರು ಇಲ್ಲದೆ ಇರುವುದರಿಂದ 5–6 ಗಂಟೆಗಳಕಾಲ ಕೂಡ ಕೆಲಸ ಮಾಡುವುದಕ್ಕೆ ಆಗುವುದಿಲ್ಲ. ಆದ್ದರಿಂದ ತುಂಗಭದ್ರಾ ಏರಿಯಾಕ್ಕೆ ಸರ್ಕಾರದವರು 30 ಟ್ರ್ಯಾಕ್ಟರುಗಳನ್ನೇನು ಮಂಜೂರು ಮಾಡಿದ್ದಾರೆ ಸಂಬಂಧಪಟ್ಟ ಹಾಗೆ ಪುಲ್‌ಟೈಮ್ ಕೆಲಸ ಮಾಡತಕ್ಕ ಸಿಬ್ಬಂದಿಯನ್ನು ನೇಮಕ ಮಾಡುವುದಕ್ಕೆ ಸರ್ಕಾರದವರು ಮಂಜೂರು ಮಾಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ. ಈಗ ಟ್ರ್ಯಾಕ್ಟರುಗಳು ಎಲ್ಲಾ ಸಂಪೂರ್ಣವಾಗಿ ಕೆಲಸ ಮಾಡುವಂತಾಗಬೇಕು. ಕೆಲವು ಸಂರ್ಭಗಳಲ್ಲಿ ಟ್ರ್ಯಾಕ್ಟರುಗಳಿಗೆ ಬೇಕಾದಂತಹ ಸಣ್ಣ ಸಣ್ಣ ಸಾಮಾನುಗಳು ಇಲ್ಲದೆ ಟ್ರಾಕ್ಟರುಗಳು ನಿಲ್ಲುತ್ತವೆ. ಆದ್ದರಿಂದ ಆ ತುಂಭದ್ರಾ ಏರಿಯಾದಲ್ಲಿ ಒಂದು ಸರ್ವೀಸ್ ಸ್ಟೇಷನ್ ಮಾಡುವುದು ಅಗತ್ಯ ಇದೆ. ಅದರ ಸಲುವಾಗಿ ಡಿಪಾರ್ಟ್‌ಮೆಮಟ್ ವತಿಯಿಂದ ಆಧುನಿಕ ಪದ್ಧತಿಯ ಪ್ರಕಾರ ಒಂದು ಸರ್ವೀಸ್ ಸ್ಟೇಷನ್ ಅನ್ನು ಪ್ರಾರಂಭಮಾಡಬೇಕು. ಅದನ್ನು ಮಾಡುವುದರಿಂದ ಸರ್ಕಾರದ ಟ್ರ್ಯಾಕ್ಟರುಗಳನ್ನೂ ರಿಪೇರಿ ಮಾಡಬಹುದು ಮತ್ತು ಪ್ರೈವೇಟ್ ಆಗಿರತಕ್ಕ ಟ್ರ್ಯಾಕ್ಟರುಗಳನ್ನು ರೀಪೇರಿ ಮಾಡುವುದಕ್ಕೆ ಅನುಕೂಲವಾಗುತ್ತದೆ ಎಂದು ನಾನು ಸರ್ಕಾರದ ಗಮನಕ್ಕೆ ತರುವುದಕ್ಕೆ ಇಚ್ಛೆಪಡುತ್ತೇನೆ.

ಇನ್ನು Supply of improved seeds ವಿಷಯದಲ್ಲಿ ಅನೇಕ ಮಾನ್ಯ ಸದಸ್ಯರು ಹೇಳಿದ್ದಾರೆ. ನ್ಯಾಷನಲ್ ಸೀಡ್ಸ್ ಕಾರ್ಪೋರೇಷನ್‌ನವರು ಸ್ವಲ್ಪ ಇಂಪ್ರೂವ್ಡ್ ಸೀಡ್‌ಗಳನ್ನು ಒದಗಿಸುತ್ತಿದ್ದಾರೆ. ಹೈಬ್ರಿಡ್ ಜೋಳ, ಮಕ್ಕೆ ಜೋಳ, ಗೋಧಿ ಮುಂತಾದ ಉತ್ತಮವಾದ ಬೀಜಗಳು ಅವರ ಹತ್ತಿರ ಇದೆಯೆಂದು ಹೇಳಿಬರುತ್ತದೆ. ಈಗ ಅಲ್ಲಿಂದ ಎರಡು ಜಿಲ್ಲೆಗಳಿಗೆ ಮಾತ್ರ ಬೀಜ ಸಿಕ್ಕುತ್ತಿದೆ. ಆ ಏರಿಯಾದಲ್ಲಿ ಗೋಧಿ ಬಹಳ ಚೆನ್ನಾಗಿ ಬೆಳೆಯುತ್ತದೆ. ಮತ್ತು ಬೆಂಡೆ, ಬದನೆ ಮುಂತಾದ ಕಾಯಿ ಪಲ್ಯಗಳನ್ನು ಅಲ್ಲಿ ಬೆಳೆಯುವುದಕ್ಕೆ ಅವಕಾಶ ಇದೆ. ಸರ್ಕಾರಿ ಸೀಡ್ ಫಾರಮ್‌ಗಳಲ್ಲಿ ಸೀಡ್ಸ್‌ಮಲ್ಟಿಪ್ಲೈ ಮಾಡುವುದಕ್ಕೆ ಏರ್ಪಾಡು ಮಾಡಬೇಕು.

ಕೇಂದ್ರದ ಆಹಾರಖಾತೆಯ ಸಚಿವರಾದ ಶ್ರೀ ಸಿ. ಸುಬ್ರಹ್ಮಣ್ಯಂ ಅವರು ನಮ್ಮ ತುಂಗಭದ್ರಾ ಏರಿಯಾಕ್ಕೆ ಬಂದು ಅಲ್ಲಿನ ರೈತರಿಗೆ ದೊಡ್ಡ ಸಹಾಯ ಮಾಡಿದ್ದಾರೆಂದು ನಾನು ಈ ಸಂದರ್ಭದಲ್ಲಿ ತಿಳಿಸಬೇಕಾಗಿದೆ. ನಮಗೆ ಗೊಬ್ಬರ ಮತ್ತು ತಾಚು ನೆಲ್ಲಿನ ಬೀಜವನ್ನು ಕೊಡುತ್ತೇವೆಂದು ಹೇಳಿದ್ದಾರೆ. ತಾಚು ನೆಲ್ಲನ್ನು ಬೆಳೆಯುವುದಕ್ಕೆ ಅದಕ್ಕೆ

ಸಂಬಂಧಪಟ್ಟ ಫರ್ಟಿಲೈಜರ್ಸ್ ಮತ್ತು ಇನ್‌ಸೆಕ್ಟಿಸೈಡ್ಸ್ ಅನ್ನು ಕೊಡುತ್ತೇವೇಂದು ಹೇಳಿದ್ದಾರೆ. ಆ ಬಗೆಯ ಬತ್ತವನ್ನು ಬೆಳೆದು ಮಾರ್ಕೆಟ್ ರೇಟಿಗ್ ಕೊಡಬೇಕೆಂದು ಅದಕ್ಕೆ ನಮ್ಮ ಒಪ್ಪಿಗೆಯನ್ನು ಕೊಡ ಕೇಳಿದ್ದಾರೆ. ಆದರೆ ಅದಕ್ಕೆ ಕೆಲವರು ಒಪ್ಪಲಿಲ್ಲ. ತಾಚು ವೆರೈಟಿ ಭತ್ತವನ್ನು ಬೆಳೆದವರಿಗೆ ಫರ್ಟಿಲೈಜರ್ಸ್ ಕೊಡುತ್ತೇವೆಂದು ಹೇಳಿದ್ದಾರೆ. ಆ ವೆರೈಟಿ ಬತ್ತವನ್ನು ಬೆಳೆದರೆ ಬಹಳ ಜಾಗ್ರತೆಯಾಗಿ ಬೆಳೆಯುವುದಕ್ಕೆ ಅನುಕೂಲವಾಗುತ್ತದೆ; ಆದ್ದರಿಂದ ಅದನ್ನು ಬೆಳೆಯತಕ್ಕವರಿಗೆ ಒಂದು ತರಹ ಸಹಾಯ ಮಾಡಬೇಕೆಂದು ಮಾನ್ಯ ಮಂತ್ರಿಗಳು ಆ ಪ್ರದೇಶಕ್ಕೆ ಬಂದಿದ್ದಾಗ ನಾವು ಹೇಳಿದ್ದೆವು. ಮುಖ್ಯ ಮಂತ್ರಿಗಳನ್ನು ಅದನ್ನು ಒಪ್ಪಕೊಂಡಿದ್ದರು. ಖಾರೀಪ್ ಸೀಜನ್ನಿಗೆ ಸಂಬಂಧಪಟ್ಟ ಹಾಗೆ ಒಂದು ಪ್ರೋಗ್ರಾಮ್ ಹಾಕಿಕೊಂಡು ಇಷ್ಟು ಎಕರೆಯಲ್ಲಿ ನಾವು ಭತ್ತವನ್ನು ಬೆಳೆಯುತ್ತೇವೆ ಎಂದರೆ ಅದಕ್ಕೆ ಸಕಾಲದಲ್ಲಿ ಫರ್ಟಿಲೈಜರ್ಸ್, ಇನ್ಸೆಕ್ಟಿಸೈಡ್ ಮತ್ತು ಬೀಜ ಇವುಗಳನ್ನು ಕೊಡುತ್ತೇವೆಂದು ಶ್ರೀ ಸುಬ್ರಹ್ಮಣ್ಯಂ ಅವರು ಒಪ್ಪಿಕೊಂಡು ಹೋಗಿದ್ದಾರೆ. ಆದ್ದರಿಂದ ನಮ್ಮ ಇಲಾಖೆಯವರು ಶ್ರೀ ಸುಬ್ರಹ್ಮಣ್ಯಂ ಅವರಿಗೆ ಪತ್ರ ಬರೆದು ಸಕಾಲದಲ್ಲಿ ಬೀಜ, ಗೊಬ್ಬರ ಮತ್ತು ಇನ್ಸೆಕ್ಟಿಸೈಡ್‌ಗಳನ್ನು ತರಿಸಿಕೊಂಡುವುದಕ್ಕೆ ವ್ಯವಸ್ಥೆ ಮಾಡಬೇಕೆಂದು ನಾನು ಹೇಳುತ್ತೇನೆ.

ಇನ್ನು ನಮ್ಮ ರಾಯಚೂರಿಗೆ ಒಂದು ಅಗ್ರಿಕಲ್ಚರಲ್ ಕಾಲೇಜನ್ನು ಕೊಡಬೇಕು. ಮಾನ್ಯ ಮುಖ್ಯ ಮಂತ್ರಿಗಳಲ್ಲಿ ಈ ವಿಷಯವನ್ನು ನಾವು ಅನೇಕ ಸಾರಿ ಅರಿಕೆ ಮಾಡಿಕೊಂಡಿದ್ದೇವೆ. ಯಾವ ರೀತಿಯಿಂದಲಾದರೂ ಮಾಡಿ ರಾಯಚೂರಿಗೆ ಆದಷ್ಟು ಬೇಗ ಒಂದು ಅಗ್ರಿಕಲ್‌ಚರಲ್ ಕಾಲೇಜನ್ನು ಕೊಡಬೇಕು. ಆ ಅಗ್ರಿಕಲ್‌ಚರಲ್ ಕಾಲೇಜಿಗೆ ಒಂದು ದೊಡ್ಡ ಪ್ರಮಾಣದ ರಿಸರ್ಚ್ ಸ್ಟೇಷನ್ ಕೊಡಬೇಕು. ಒಂದು ಸಾಯಿಲ್ ಟೆಸ್ಟಿಂಗ್ ಲ್ಯಾಬೋರೇಟರಿ ಕೊಡಬೇಕು. ಎಲ್ಲಾ ಉಪಕರಣಗಳಿಂದಲೂ ಕೂಡಿರತಕ್ಕ ಒಂದು ಉತ್ತಮವಾದ ಅಗ್ರಿಕಲ್ಚರಲ್ ಕಾಲೇಜನ್ನು ಅಲ್ಲಿಗೆ ಕೊಡುವುದು ಅಗತ್ಯ ಇದೆ. ಇಲ್ಲಿ ನಾನು ಎರಡು ಮೂರು ವರ್ಷದಿಂದಲೂ ಸೀಡ್ ಆಕ್ಟುಗಳನ್ನ ಹಾಗು ಪೆಸ್ಟ್ ಕಂಟ್ರೋಲ್ ಆಕ್ಟುಗಳನ್ನು ಜಾರಿಗೆ ತಂದು ಅದನ್ನು ಚಾಲೂ ಮಾಡಬೇಕೆಂದು ಹೇಳುತ್ತಿದ್ದರು ಅದರ ಕಡೆಗೆ ಗಮನ ಕೊಡುತ್ತಿಲ್ಲ. ಈಗ ಹೈ ಬ್ರಿಡ್ ಜೋಳದ ಬೀಜ ಕೆ. ಜಿ. ಒಂದಕ್ಕೆ 15 ರಿಂದ 20 ರೂಪಾಯಿಗಳಷ್ಟು ಆಗಿದೆ. ಎಂದು ತಿಳಿದು ಕೆಲವು ಕಡೆಗಳಲ್ಲಿ ಜನಕ್ಕೆ ಮೋಸ ಮಾಡಲು ಅಡಲ್ಟ್ರೇಟೆ ಸೀಡುಗಳನ್ನು ಮಾರುತ್ತಿರುವುದರಿಂದ ಅನೇಕ ರೈತರಿಗೆ ಇದರಿಂದ ಬಹಳ ಹಾನಿಯುಂಟಾಗುತ್ತಿದೆ. ಇದಕ್ಕಾಗಿ ಸೀಡ್ ಅಕ್ಟು ಹಾಗು ಪೆಸ್ಟ್ ಕಂಟ್ರೋಲ್ ಆಕ್ಟ್‌ಗಳನ್ನು ಜಾರಿಗೆ ತಂದರೆ ಅದರ ಮೂಲಕ ಸೀಡುಗಳನ್ನು ಬೆರೆಕೆ ಮಾಡುವವರಿಗೆ ಶಿಕ್ಷೆ ಮಾಡಲು ಅನುಕೂಲವಾಗುತ್ತದೆ. ಆದುದರಿಂದ ಸರಕಾರದ ರೈತರಿಗೆ ಆಗುವ ಅನಾಹುತಗಳನ್ನು ತಪ್ಪಿಸುವ ಸಲುವಾಗಿ ಆದಷ್ಟು ಜಾಗ್ರತೆ ಸೀಡು ಅಕ್ಟು ಹಾಗು ಪೆಸ್ಟ್ ಕಂಟ್ರೋಲ್ ಆಕ್ಟ್‌ಗಳನ್ನು ಜಾರಿಗೆ ತರಬೇಕೆಂದು ಸೂಚಿಸುತ್ತೇನೆ.

ಮತ್ತೆ ಇಂಡಿಯಾ ಸರಕಾರದವರು ಮೊದಲಿಗೆ ಪವರು ಸ್ಪ್ರೇಯರುಗಳನ್ನು ನಮ್ಮ ಕಡೆಗೆ ಕೊಡುತ್ತೇವೆ ಮತ್ತು ಇದಕ್ಕೆ 1,200 ರೂಪಾಯಿಗಳಷ್ಟು ಬೆಲೆ ಬರುತ್ತೆ ಎಂದು ಇದ್ದದ್ದು ಈಗ 940 ರೂಪಾಯಿಗೆ ಹೊರಗೆ ಮಾರುತ್ತಿದ್ದಾರೆ. ಇದನ್ನು ಕೇವಲ 600 ರೂಪಾಯಿಗಳಷ್ಟು ಬೆಲೆಯಲ್ಲಿ ರೈತರಿಗೆ ಕೊಡುತ್ತೇವೆಂದು ಇಂಡಿಯಾ ಸರಕಾರದವರು ಹೇಳಿದಾಗ ಅದನ್ನು ನಮ್ಮ ಸರಕಾರದಲಿರುವ ಅಧಿಕಾರಿಗಳು ತೆಗೆದುಕೊಂಡು ಸಹಾಯ ಮಾಡಿಕೊಡದೇಹೋದುದು ತುಂಬಾ ವಿಷಾದಕರವಾದ ಸಂಗತಿ. ನಮ್ಮಲ್ಲಿ ಈಗ ಕೂಲಿ ಜನರು ಸಿಗದೇ ಇರುವ ಕಾಲದಲ್ಲಿ ಬ್ರಿಡ್ ಸೀಡುಗಳನ್ನು ಹಾಕುವಾಗ ಇಂತಹ ಪವರು ಸ್ಪ್ರೇಯರುಗಳು ಬಹಳ ಅಗತ್ಯವಾಗಿ ಬೇಕಾಗುತ್ತದೆ. ಈಗಲಾದರೂ ಸರಕಾರ ಇದರ ವಿಶೇಷ ಗಮನ ಕೊಟ್ಟು ನಮ್ಮ ಭಾಗದ ರೈತರಿಗೆ ಆದಷ್ಟು ಜಾಗ್ರತೆ ಪವರು ಸ್ಪ್ರೇಯರುಗಳನ್ನು ಒದಗಿಸಿ ಕೊಟ್ಟರು ನಮ್ಮ ರೈತರಿಗೆ ಎಷ್ಟೋ ಅನುಕೂಲಗಳನ್ನು ಕಲ್ಪನೆ ಮಾಡಿ ಕೊಟ್ಟಂತಾಗುತ್ತದೆ. ಮೊದಲಿಗೆ ಇದರ ಬೆಲೆ 1,200 ಇದ್ದುದನ್ನು ರೈತರು ಕೊಡಲು ಆಗುವುದಿಲ್ಲ ಎಂದು ಇತ್ತು ಈಚೆಗೆ ಇದರ ಬಬೆಲೆಯನ್ನು 600 ರೂಪಾಯಿಗಳವರೆಗೆ ಇಳಿಸಿರುವುದರಿಂದ ನಮ್ಮ ರೈತರು ಇದನ್ನು ತೆಗೆದುಕೊಳ್ಳಲು ಆತುರರಾಗಿದ್ದಾರೆ. ಸರಕಾರ ಜಾಗ್ರತೆ ಇಂತಹ ಪವರು ಸ್ಪ್ರೇಯರುಗಳನ್ನು ಪಡೆದು ರೈತರಿಗೆ ಹಂಚುವ ವ್ಯವಸ್ಥೆ ಮಾಡಬೇಕೆಂದು ನಾನು ಇಲ್ಲಿ ಸಲಹೆ ಮಾಡುತ್ತೇನೆ.

ಸಾಯಿಲ್ ಕನ್‌ಸರ್‌ವೇಷನ್ ಬಗ್ಗೆ ಒಂದು ಮಾತು ಹೇಳಬೇಕಾಗಿದೆ. ಈಗ ಕೂಲಿ ಜನಕ್ಕೆ ಇಲ್ಲಿ ರೇಟುಗಳನ್ನು ಕೊಡುತ್ತಿರುವುದು ಬಹಳ ಕಡಿಮೆ. ಇದರಿಂದಾಗಿ ಸಾಯಿಲ್ ಕನ್‌ಸರ್‌ವೇಷನ್ ಕಾಮಗಾರಿ ತೆಗೆದುಕೊಂಡಾಗ ಕಡಿಮೆ ಎಂದು ಕೂಲಿಗಾರರು ಕೆಲಸ ಮಾಡಲು ಮುಂದೆ ಬರುವುದಿಲ್ಲ. ಇವೊತ್ತು ಒಂದು ಕೆ. ಜಿ. ಜೋಳ ಅಥವಾ ಬೇರೆ ದವಸ ಸಿಗುತ್ತಿಲ್ಲ. ಇದರಿಂದ ಇವರು ಸಾಯಿಲ್ ಕನ್‌ಸರ್‌ವೇಷನ್ ಕೆಲಸಗಳನ್ನು ಮಾಡಲು ಸಾಧ್ಯ? ಇಲ್ಲಿ ಕೂಲಿ ಮಾಡುವ ಜನಕ್ಕೆ ಕೊಡುತ್ತಿರುವ ರೇಟುಗಳನ್ನು ಪರಿಶೀಲನೆ ಮಾಡಿ ಹೆಚ್ಚಿಸುವುದರ ಕಡೆಗೆ ಪ್ರಯತ್ನ ಮಾಡಬೇಕೆಂದು ನನ್ನ ಸಲಹೆ.

ಇನ್ನು ಅಗ್ರಿಕಲ್‌ಚರು ಗ್ರಾಜುಯೇಟುಗಳಾಗಿರುವವರು ಈಚೆಗೆ ಸ್ಟ್ರೈಕು ಮಾಡಿದ ವಿಚಾರ ತಮಗೆಲ್ಲರಿಗೂ ತಿಳಿದಿದೆ. ಅವರಿಗೆ ಮೆಡಿಕಲ್ ಗ್ರಾಜುಯೇಟುಗಳಿಗೆ ಹಾಗೂ ಇಂಜನೀಯರಿಂಗು ಗ್ರಾಜುಯೇಟುಗಳಿಗೆ ಯಾವ ರೀತಿ ಸ್ಥಾನ ಮಾನಗಳು ಅವರ ಸಂಬಳಸಾರಿಗೆ ವಿಚಾರದಲ್ಲಿ ಇದೆಯೋ ಅದನ್ನು ಕೊಡಬೇಕೆಂದು ಕೇಳಿದುದನ್ನು ಸರಕಾರ ಪರಿಶೀಲಿಸಿ ಸರಿಮಾಡುತ್ತೇವೆಂದು ಭರವಸೆ ಕೊಟ್ಟಿದ್ದರು. ಇದರ ಬಗ್ಗೆ ಈಗಾಗಲೇ ಮದರಾಸು ಹಾಗೂ ಆಂಧ್ರಗಳಲ್ಲಿ ಅಗ್ರಿಕಲ್‌ಚರು ಗ್ರಾಜುಯೇಟುಗಳಿಗೆ ಒಂದೇ ರಿತಿಯಾದ

ಸಂಬಳ ಸಾರಿಗೆಗಳನ್ನು ಮಾಡಿ ಕೊಟ್ಟಿದ್ದಾರೆ ಇಲ್ಲಿರುವ ಗ್ರಾಜುಯೇಟುಗಳಿಗೆ ಮಾಡದೆ ಇದ್ದರೆ ಅವರಿಗೆ ಬಹಳ ಅನಾನುಕೂಲವಾಗುತ್ತದೆ. ಆದಷ್ಟು ಬೇಗ ಇದನ್ನು ಪೂರ್ತಿ ಇತ್ಯರ್ಥ ಮಾಡಲು ಮಾನ್ಯ ಮಂತ್ರಿಗಳು ಇದರ ಬಗ್ಗೆ ಬೇಗನೆ ಕಾರ್ಯಗತ ಮಾಡಿಸಿಕೊಡಬೇಕೆಂದು ಹೇಳುತ್ತೇನೆ.

ಇನ್ನು ಅರಣ್ಯದ ಇಲಾಖೆ ಬಗ್ಗೆ ಒಂದು ವಿಚಾರ ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ. ಅನೇಕ ವರ್ಷಗಳಿಂದಲೂ ಫಾರಸ್ಟ್ ಏರಿಯಾದಲ್ಲಿ ಬೋನಫೈಡ್ ಕಲ್ಟಿವೇಟರುಗಳಾಗಿ ಲಂಬಾಣಿ ಜನರು ಹಾಗೂ ಬಡ ಹರಿಜನರು ಸಾಗುವಳಿ ಮಾಡಿಕೊಂಡು ಇದ್ದಾರೆ. ಕಳೆದ 15–16 ವರ್ಷಗಳಿಂದಲೂ ಇವರು ಕೃಷಿ ಮಾಡಿಕೊಂಡು ಬರುತ್ತಿದ್ದರೂ ಕೂಡ ಆಗ ಇದ್ದ ಸಂಸ್ಥಾನ ಸರಕಾರದವರು ಅವರ ಜಮೀನುಗಳಿಗೆ ಪಟ್ಟಾಮಾಡಿಕೊಡಲಿಲ್ಲ. ಆದರೆ ಈಚೆಗೆ ಇದರ ರಿಕಾರ್ಡುಗಳನ್ನು ಟ್ರಾನ್ಸ್‌ಫರ್ ಮಾಡುವಾಗ ಈ ಜನರು ಕಷ್ಟಪಟ್ಟು ಬಹು ವರ್ಷಗಳಿಂದಲೂ ಕಲ್ಟಿವೇಟು ಮಾಡುತ್ತಿದ್ದರೂ ಇವರನ್ನು ಜಮೀನುಗಳಿಂದ ಬಿಡಿಸಬೇಕೆಂದು ಅಲ್ಲಿ ಕೆಲವು ಜನರು ಬಹಳ ತೊಂದರೆ ಕೊಡುತ್ತಿದ್ದಾರೆ. ಇವರಲ್ಲೇ ಇರುವ ಕೆಲವು ಜನ ಇವರನ್ನು ಎಕ್ಸ್‌ಪ್ಲಾಯಿಟ್ ಮಾಡಲು ಪ್ರಯತ್ನ ಮಾಡಿ ಬಹಳ ಅನ್ಯಾಯ ಮಾಡುತ್ತಿದ್ದಾರೆ. ಈ ಬಡ ಜನರು ಅಲ್ಲಿದ್ದ ಕಲ್ಲು ಮಣ್ಣುಗಳನ್ನು ಹಾಗೂ ಮುಳ್ಳುಗಳನ್ನು ತೆಗೆದು ಅಷ್ಟೋ ಇಷ್ಟೋ ಬೆಳೆಯುತ್ತಿದ್ದಾರೆ. ಇಂತಹ ಜನರಿಗೆ ಭೂಮಿ ತಪ್ಪಿಸಿದರೆ ತುಂಬಾ ಹಾನಿಯಾಗುತ್ತದೆ. ಇದರ ಕಡೆಗೆ ಸರಕಾರ ಆದಷ್ಟು ಬೆಗ ನಿರ್ಣಯ ತೆಗೆದುಕೊಂಡು ಹತ್ತು ಹದಿನೈದು ವರ್ಷಗಳಿಂದಲೂ ಇಲ್ಲಿ ಜೀವನ ಮಾಡುತ್ತಿರುವ ಜಮೀನುಗಳನ್ನುಳಿಸಿಕೊಳ್ಳಬೇಕು ಎಂದು ಮಾನ್ಯ ಮುಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇ.

ಮಾನ್ಯ ಅಧ್ಯಕ್ಷರು ಇಷ್ಟು ಕಾಲ ಮಾತನಾಡಲು ನನಗೆ ಅವಕಾಶ ಕೊಟ್ಟುದಕ್ಕೆ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ವೈವಿಧ್ಯತೆ

**ರಸ್ತೆ, ನೀರು ವಿದ್ಯುತ್ ಮುಂತಾದ ದಿನನಿತ್ಯದ ಜರೂರು ಮತ್ತು ಮೂಲಭೂತ ಸೌಲಭ್ಯ ಕಲ್ಪಿಸುವ ವೇಳೆಯಲ್ಲಿ ಸರ್ಕಾರದ ವೈಫಲ್ಯ ಗುರುತಿಸಿ, ವಿಷಯ ಆಳಕ್ಕಿಳಿದು, ವಿವರಣೆ ನೀಡಿ ತಮ್ಮ ಮಾತುಗಳಿಗೆ ಪುಷ್ಠಿ ನೀಡಿ, ಉದಾಹರಿಸುವ ಇವರ ಕುಶಲತೆ ಮೆಚ್ಚುಗೆ ತರುತ್ತದೆ. ಜತೆ ಜತೆಗೆ ಪರಿಹಾರ ಸಲಹೆ ಸೂಚನೆ ನೀಡುತ್ತಾರೆ.**

**ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ).**– ಮಾನ್ಯ ಅಧ್ಯಕ್ಷರೆ, ಈಗ ನಮ್ಮ ಮುಂದೆ ಇರತಕ್ಕ ಎಲ್ಲ ಬೇಡಿಕೆಗಳನ್ನೂ ಅನುಮೋದಿಸುತ್ತಾ ಕೆಲವು ವಿಷಯಗಳನ್ನು ಮಾತ್ರ ಸರ್ಕಾರದವರ ಗಮನಕ್ಕೆ ತರಲು ಅಪೇಕ್ಷಿಸುತ್ತೇನೆ. ಹೈದರಬಾದ ಕರ್ನಾಟಕದಲ್ಲಿ, ಅದರಲ್ಲೂ ರಾಯಚೂರು ಜಿಲ್ಲೆಯ ರಸ್ತೆಗಳ ವಿಚಾರ ಹೇಳಬೇಕೆಂದರೆ ತಾಲ್ಲೂಕು ಹೆಡ್‌ಕ್ವಾರ್ಟರ್ ಮತ್ತು ಹೋಬಳಿ ಹೆಡ್‌ಕ್ವಾರ್ಟರ್ ರಸ್ತೆಗಳನ್ನು ಬಿಟ್ಟರೆ ಬಾಕಿ ರಸ್ತೆಗಳೂ ಕೂಡ ಚೆನ್ನಾಗಿಲ್ಲ ಎಂದು ಹೇಳಬೇಕಾಗಿದೆ. ಬರಗಾಲದ ಕಾಲದಲ್ಲಿ ಕೆಲವು ರಸ್ತೆಗಳನ್ನು ಮಾಡಿದ್ದೀರಿ ಪ್ರತಿ ವರ್ಷ ಪ್ರತಿಯೊಂದು ತಾಲ್ಲೂಕಿನಲ್ಲೂ ಸುಮಾರು 8–10 ಮೈಲಿ taken over the P. W. D. ಅಂತ ಹೇಳಿ ಆ ರಸ್ತೆಗಳನ್ನು ಸರಿಪಡಿಸುತ್ತಾ ಇದ್ದೀರಿ. ಈಗ ಸುಮಾರು ಐದುವರೆ ಲಕ್ಷ ಎಕರೆ ನೀರಾವರಿ ಇದೆ. ಈ ರಸ್ತೆಗಳನ್ನು ಅಭಿವೃದ್ಧಿ ಮಾಡದೇ ಅಲ್ಲಿರತಕ್ಕ ಕೆಲಸಗಳು ಯಾವುದೇ ತರಹದ್ದೂ ಕೂಡ ಆಗಲಕ್ಕೆ ಸಾಧ್ಯವಾಗುತ್ತಾ ಇಲ್ಲ. ಈ ಆಯಕಟ್ಟಿನ ಏರಿಯಾದಲ್ಲಿ ರಸ್ತೆಗಳನ್ನು ಮಾಡಬೇಕು ಇಲ್ಲದೇ ಹೋದರೆ ಅಲ್ಲಿನ ಅಭಿವೃದ್ಧಿ ಕೆಲಸಗಳು ಮತ್ತು ಅಲ್ಲಿ ಬೆಳೆಯತಕ್ಕ ಮಾಲನ್ನೂ ಕೂಡ ಅಲ್ಲಿಂದ ಬೇರೆ ಕಡೆಗಳಿಗೆ ತೆಗೆದುಕೊಂಡು ಹೋಗಲಿಕ್ಕೆ ರೈತರಿಗೆ ತುಂಬಾ ಅನಾನುಕೂಲವಾಗುತ್ತಾ ಇದೆ. ಅಲ್ಲಿಗೆ ಬಹಳ ಜನ ಆಫೀಸರುಗಳು ಇಂಡಿಯಾ ಸರ್ಕಾರದಿಂದ ಮತ್ತು ಇತರ ಕಡೆಗಳಿಂದ ಬರುತ್ತಾ ಇದ್ದಾರೆ. ನಾವು ಮಾಡಿರತಕ್ಕ ಅಭಿವೃದ್ಧಿ ಯೋಜನೆಗಳನ್ನು ತೋರಿಸಬೇಕೆಂದರೆ ಈ ರಸ್ತೆಗಳು ಸರಿಯಾಗಿ ಇಲ್ಲದೇ ಬಹಳ ತೊಂದರೆಯಾಗುತ್ತಾ ಇದೆ. ಆದ್ದರಿಂದ ನಾನು ಈ ಸಂದರ್ಭದಲ್ಲಿ ಸೂಚಿಸುವುದೇನೆಂದರೆ, taken over the P. W. D. ಅನ್ನುವುದರಲ್ಲಿ ಈ ರಸ್ತೆಗಳಿಗೆ ಪ್ರಯಾರಿಟಿ ಕೊಡಬೇಕು ಮತ್ತು ಆಯಕಟ್ಟಿನಲ್ಲಿರತಕ್ಕ ರಸ್ತೆಗಳನ್ನು ತೆಗೆದುಕೊಂಡು ಅವುಗಳನ್ನು ಸರಿಪಡಿಸಬೇಕು. ಇದರ ಬಗ್ಗೆ ಪ್ರತಿ ಸಲವೂ ಕೂಡ ಹೆಚ್ಚು ದುಡ್ಡು ಕೊಡಬೇಕು. ಈ ರಸ್ತೆಗಳನ್ನು ಮಾಡಲೇಬೇಕೆಂದು ಸರ್ಕಾರದವರ ಗಮನಕ್ಕೆ ತಂದಾಗ್ಯೂ ಕೂಡ ತುರ್ತುಪರಿಸ್ಥಿತಿ ಆದ್ದರಿಂದ ಮಾಡುವುದಕ್ಕಾಗಲಿಲ್ಲ ಎಂದು ಹೇಳುತ್ತಾ ಇದ್ದೀರಿ. ಈ ರೀತಿ ಹೇಳದೆ ಶೀಘ್ರವಾಗಿ ಈ ಕಾರ್ಯವನ್ನು ನೆರವೇರಿಸಿಕೊಡಬೇಕೆಂದು ಹೇಳುತ್ತೇನೆ.

ಗಂಗಾಪತಿ, ಸಿಂಧನೂರು ಮತ್ತು ಮಾನ್ವಿಯಲ್ಲೂ ಕೂಡ ಸರಿಯಾದ ರಸ್ತೆಗಳಿಲ್ಲದೇ ಬಹಳ ತೊಂದರೆಯಾಗುತ್ತಾ ಇದೆ. ಅದಕ್ಕೂ ಕೂಡ ಆದಷ್ಟು ಜಾಗ್ರತೆ ಗಮನ ಕೊಡಬೇಕೆಂದು ಹೇಳುತ್ತೇನೆ. ಬೆಂಗಳೂರಿನಿಂದ ಗುಲ್ಬರ್ಗಾಕ್ಕೆ ಹೋಗತಕ್ಕ ರಸ್ತೆ ಅಲ್ಪಸ್ವಲ್ಪ ಇತ್ತೀಚೆಗೆ ಮುಗಿಯುತ್ತಾ ಬಂದಿದೆ. ನವಿಲುಕೋಲು ಹಟ್ಟಿ ರಸ್ತೆ ಅಲ್ಲಲ್ಲಿ ಸರಿಯಾಗಿಲ್ಲದೇ ತೊಂದರೆಯಾಗುತ್ತಾ ಇದೆ. ಆ ರಸ್ತೆ ಕೇವಲ 22 ಮೈಲಿ ಇದೆ, ಅದನ್ನು ಟಾರ್ ಮಾಡಿಸಿಕೊಡಿ ಎಂದು ಮೂರು ವರ್ಷದಿಂದ ಕೇಳುತ್ತಾ ಇದ್ದೇನೆ. ಬಡ್ಜೆಟ್‌ನಲ್ಲಿ ಅದನ್ನು ಸೇರಿಸಿ ಎಂದರೆ ಎಮರ್ಜೆನ್ಸಿ ಎಂದು ಹೇಳುತ್ತಾ ಇದ್ದೀರಿ. ಈ ರಸ್ತೆ ಸರಿಯಾಗಿಲ್ಲದೇ ವಾಹನಗಳಿಗೆ ತೊಂದರೆಯಾಗಿ ಅವು ಡ್ಯಾಮೇಜ್ ಆಗುತ್ತಾ ಇವೆ, ಆದ್ದರಿಂದ ಅದನ್ನು ಸರಿಪಡಿಸಬೇಕೆಂದು ಮಾನ್ಯ ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಪ್ರವಾಸಿ ಕೇಂದ್ರಗಳ ವಿಷಯ ಹೇಳಬೇಕೆಂದರೆ ಈಗ ಮಾನ್ವಿ ಬಹಳವಾಗಿ ಅಭಿವೃದ್ಧಿಯಾಗುತ್ತಾ ಇದೆ. ಬಹಳ ಜನ ಆಫೀಸರುಗಳು ಅಲ್ಲಿಗೆ ಬರುತ್ತಾರೆ. ಅವರನ್ನು ಅಕಾಮೋಡೇಟ್ ಮಾಡುವುದಕ್ಕೆ ಅಲ್ಲಿ ಎರಡು ರೂಮುಗಳು ಅಲ್ಲಿಗೆ ಇವೆ. ಕೇವಲ ಎರಡು ಖೋಲಿಗಳು ಇದ್ದ ಅಲ್ಲಿಗೆ ಬರತಕ್ಕ ಆಫೀಸರುಗಳಿಗೆ ಇರುವುದಕ್ಕೆ ತೊದರೆಯಾಗಿ ಅನಾನುಕೂಲವಾಗುತ್ತಾ ಇದೆ. ಇದಕ್ಕೆ ಗಮನ ಕೋಡಬೇಕೆಂದು ಹೇಳುತ್ತೇನೆ. ಇದೇ ರೀತಿ ಹೈವೇನಲ್ಲಿರತಕ್ಕ ಲಿಂಗಸೂಗೂರಿನಲ್ಲಿ ಅಗ್ರಿಕಲ್ಚರಲ್ ರಿಸರ್ಚ್ ಫಾರಂ ಮಾಡಬೇಕೆಂದು ಇದ್ದೀರಿ, ಅಲ್ಲಿ ಎರಡು ಚಿಕ್ಕ ಖೋಲಿ ಇರತಕ್ಕ ಪ್ರವಾಸಿ ಮಂದಿರ ಇದೆ, ಬೆಂಗಳೂರಿನಿಂದ ಗುಲ್ಬರ್ಗ, ಬಿದರೆಗೆ ಹೋಗತಕ್ಕ ಜನರಿಗೆ ಪ್ರವಾಸ ಮಾಡುವಾಗ ತುಂಬಾ ಆಯಾಸವಾಗುತ್ತದೆ. ಒಂದು ವೇಳೆ ರೆಸ್ಟ್ ತೆಗೆದುಕೊಳ್ಳಬೇಕೆಂದರೆ ಇದು ಸೆಂಟ್ರಲ್ ಪ್ಲೇಸ್ ಆಗುತ್ತದೆ. ಆದ್ದರಿಂದ ಇಲ್ಲಿ ಚಿಕ್ಕ ಇನ್ನೊಂದು ಪ್ರವಾಸಿ ಮಂದಿರವನ್ನು ಕಟ್ಟಿಸಬೇಕೆಂದು ಹೇಳುತ್ತೇನೆ.

ಇನ್ನು ವಾಟರ್ ಸಪ್ಲೈ ಸ್ಕೀಂ ವಿಷಯದಲ್ಲಿ ಒಂದು ಮಾತು ಹೇಳುವುದಾದರೆ, ನಮ್ಮ ಕಾನ್‌ಸ್ಟಿಟ್ಯೂನ್ಸಿಯಲ್ಲಿ ಈಗಾಗಲೆ 10–12 ವಾಟರ್ ಸಪ್ಲೈ ಸ್ಕೀಂಗಳು ಮಂಜೂರಾಗಿವೆ. ಇನ್ನೂ ವರೆಗೂ ಕೆಲಸ ಪ್ರಾರಂಭವಾಗಿಲ್ಲ. ಮೆಟೀರಿಯಲ್ ಸಿಕ್ಕಲಿಲ್ಲ ಎಂಬ ಕಾರಣವನ್ನು ಹೇಳುತ್ತಾ ಇದ್ದಾರೆ. ಏನೇ ಆಗಲಿ ಉತ್ತಮವಾದ ನೀರನ್ನು ತಾವು ಒದಗಿಸಲೇಬೇಕು. ಏಕೆಂದರೆ ನಮ್ಮ ಪ್ರದೇಶದಲ್ಲಿ ಜನರು ನೀರು ಹುಣ್ಣಿನಿಂದ ಕೊರಗುತ್ತಾ ಇದ್ದಾರೆ. ಆ ಗ್ರಾಮಗಳಲ್ಲಿರತಕ್ಕ ಜನರಿಗೆ ತಾವು ಸುವ್ಯವಸ್ಥಿತವಾದ ನೀರನ್ನು ಒದಗಿಸಲು ತಕ್ಕ ವ್ಯವಸ್ಥೆ ಮಾಡಲೇ ಬೇಕಾಗುತ್ತದೆ. ಈ ಬಗ್ಗೆ ಇಂಡಿಯಾ ಸರ್ಕಾರದವರಿಗೆ ಮಂಜೂರಾಗಿವೆ ಅವನ್ನು ತೀವ್ರಗತಿಯಿಂದ ಶುರು ಮಾಡಿಸಲೇಬೇಕೆಂದು ಹೇಳುತ್ತೇನೆ.

ವಿದ್ಯುಚ್ಛಕ್ತಿ ಬಗ್ಗೆ ಹೇಳಬೇಕೆಂದರೆ, ಬೇಕಾದಷ್ಟು ವಿದ್ಯುಚ್ಛಕ್ತಿಯನ್ನು ಪೂರೈಸುತ್ತೇವೆ ಎಂದು ಹೇಳಿ ಹೋದ ಸಾರಿ ಕೂಡ ಬಡ್ಜೆಟ್‌ನಲ್ಲಿ ಹಣವನ್ನು ಒದಗಿಸಿದ್ದೀರಿ. ಪದೇ ಪದೇ ನಾವು ಕೂಡ ಹೇಳುತ್ತಲೇ ಬಂದಿದ್ದೇವೆ. ಎಲ್ಲಿ ನೋಡಿದರೂ ಕೂಡ ಅರ್ಧಂಬರ್ಧ ಕೆಲಸ ಮಾಡಿ ನಿಂತಿರುವುದಾಗಿದೆ. ಅದಕ್ಕೆ ಕಾರಣ ಮೇಟಿರಿಯಲ್ಸ್ ಇಲ್ಲ ಎಂದು ಹೇಳುತ್ತಾ ಇದ್ದಾರೆ. ಇದಕ್ಕೆ ಸೂಕ್ತ ಗಮನ ಕೊಟ್ಟು ಜಾಗ್ರತೆ ವಿದ್ಯುಚ್ಛಕ್ತಿಯನ್ನು ಒದಗಿಸಿಕೊಡಬೇಕೆಂದು ಹೇಳುತ್ತೇನೆ.

ಇನ್ನು ತಾವು ಮಾಡತಕ್ಕ ಕೆಲಸಗಳಲ್ಲಿ ಜನರಿಗೆ ವಿಶ್ವಾಸ ಹುಟ್ಟುವಂತೆ ಕೆಲಸ ಮಾಡಬೇಕು, ಸ್ವಲ್ಪ ಹೆಚ್ಚಿನ ಲೇಟ್ ಕೊಟ್ಟರೂ ಪರವಾಗಿಲ್ಲ ಕ್ವಾಲಿಟಿಮೇನಟೇನ್ ಮಾಡಬೇಕಾದ್ದು ತಮ್ಮ ಕರ್ತವ್ಯವಾಗಿದೆ. ಈಗ ತಾವು ಮಾಡುತ್ತಾ ಇರತಕ್ಕ ಕೆಲಸಗಳಲ್ಲಿ ಕ್ವಾಲಿಟಿಇಲ್ಲ ಎಂದು ಹೇಳಿ ನಮ್ಮ ಗಮನಕ್ಕೆ ಬಂದಿದೆ. ಉದಾರಣೆ ಹೇಳಬೇಕೆಂದರೆ, ಮೊನ್ನೆ ನಮ್ಮ ಮೇನ್ ಕೆನಾಲ್ ಒಡೆದುಹೋಯಿತು, 25 ದಿವಸಗಳಾದರೂ ಕೂಡ ರಿಪೇರಿ ಆಗಲಿಲ್ಲ. ಇದಕ್ಕೆ ಯಾರು ಜವಾಬ್ದಾರರೋ ಅವರ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕು: ಏಕೆಂದರೆ, ಸುಮಾರು ನಾಲ್ಕು ಲಕ್ಷ ಎಕರೆ ಪ್ರೋಗ್ರಾಂ ಹಾಕಿಕೊಂಡು ಹೈಬ್ರಿಡ್ ಸೀಡ್ಸ್ ಹಾಕಬೇಕೆಂದು ಎಲ್ಲಾ ಸಿದ್ದತೆ ಮಾಡಿಕೊಂಡಿದ್ದರೂ ಕೂಡ ಈ ರೀತಿ ಬ್ರೀಚ್ ಅದದ್ದರಿಂದ ಹಾಕಲಾಗದೇ ತುಂಬಾ ಅನಾನುಕೂಲವಾಗಿದೆ. ಈ ಕೆಲಸ ಮಾಡಿರತಕ್ಕ ಕಂಟ್ರಾಕ್ಟರನಿಂದ ಎಕ್ಸ್‌ಪ್ಲನೇಷನ್ ಕಾಲ್‌ಫಾರ್ ಮಾಡಿ ಅವರ ಮೇಲೆ ತೀವ್ರ ಕಠಿಣವಾದ ಕಾರ್ಯಕ್ರಮ ತಗೆದುಕೊಳ್ಳಬೇಕು. ಈಗಿನ ಪರಿಸ್ಥಿತಿಯಲ್ಲಿ ಮುಖ್ಯವಾಗಿ ಕ್ವಾಲಿಟಿಮೇನ್‌ಟೇನ್ ಮಾಡಬೇಕಾದ್ದು ಸರ್ಕಾರದ ಕರ್ತವ್ಯ ಇಲ್ಲದೇ ಇದ್ದರೆ ತುಂಬಾ ಹನಿಯಾಗುತ್ತದೆ. ಇಷ್ಟು ಹೇಳಿ ಮಾತನಾಡಲು ಅವಕಾಶ ಕೊಟ್ಟದ್ದಕ್ಕಾಗಿ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಸಾಗಾಣಿಕೆ ವೆಚ್ಚ ಶಕ್ತಿ ಉಳಿತಾಯ ಉದ್ಯೋಗ ಸೃಷ್ಟಿ ಮತ್ತು ಮಾಲಿನ್ಯ ನಿಯಂತ್ರಣ ವಿಷಯಗಳಿಗೆ ಸಂಬಂಧಿಸಿದಂತೆ ಈ ಮಸೂದೆ ಅನುಕೂಲಕಾರಿಯೆಂದು ಮಾನ್ಯ ಸಚಿವರು ವಿವರಿಸಿದ್ದಾರೆ ಆದ ಕಾರಣ ಇದನ್ನು ನಾನು ಸ್ವಾಗತಿಸುತ್ತೇನೆ. ಸಚಿವರ ಪ್ರಸ್ತಾಪದ ಮೇಲೆ ಈ ಮಸೂದೆಯನ್ನು ನಾನು ಬೆಂಲಿಸುತ್ತೇನೆ ನೀರಾವರಿ ಉದ್ದೇಶಕ್ಕಾಗಿ ನಾವು ಬೃಹತ್ ಅಣೆಕಟ್ಟುಗಳನ್ನು ನಿರ್ಮಿಸುತ್ತಿದ್ದೇವೆ ನೀರಾವರಿ ಜೊತೆಗೆ ಅಣೆಕಟ್ಟುಗಳಿಂದ ನಾವು ಹಲವು ರೀತಿಯ ಉಪಯೋಗ ಪಡೆಯುತ್ತಿದ್ದೇವೆ ಅಣೆಕಟ್ಟುಗಳು ನೀರಿನ ಒಂದು ಸಣ್ಣ ಪಾಲು ಬಳಸಿ ಕೊಂಡು ವಿದ್ಯುತ್ ಉತ್ಪಾದಿಸುವುದು ಮತ್ತು ಬೃಹತ್ ಕಾಲುವೆಗಳನ್ನು ನೌಕ ಉದ್ದೇಶಕ್ಕೆ ಬಳಸಿಕೊಳ್ಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ಪ್ರಧಾನ ಕಾಲುವೆಗಳ ತಾಂತ್ರಿಕ ಸರ್ವೇಕ್ಷಣೆ ನಡೆಸಬೇಕೆಂದು ಸಚಿವರನ್ನು ಕೋರುತ್ತೇನೆ. ಕರ್ನಾಟಕದಲ್ಲಿ ತುಂಗಭದ್ರ ಅಣೆಕಟ್ಟು ಬೃಹತ್ ಯೊಜನೆಯನಿಸಿದೆ ಇದರ ಪ್ರಧಾನ

ಕಾಲುವೆಯೊಂದು ಹೊಸಪೇಟೆಯಿಂದ ಆಂಧ್ರ ಪ್ರದೇಶಕ್ಕೆ ಸಾಗಿ ಹೋಗುತ್ತದೆ ಇಲ್ಲಿ ನಿರ್ಮಾಣ ಹಂತದಲ್ಲಿಯೇ ನೌಕಾ ಸವಲತ್ತುಗಳನ್ನು ಒದಗಿಸಲಾಗಿತ್ತು ಆದ್ದರಿಂದ ಇಂತಹ ಕಾಲುವೆಗಳ ಸರ್ವೆ ಕಾರ್ಯ ಕೈಗೊಳ್ಳಬೇಕೆಂದು ಮಾನ್ಯ ಸಚಿವರನ್ನು ನಾನು ಕೇಳಿಕೊಳ್ಳುತ್ತೇನೆ.

ಕರ್ನಾಟಕದಲ್ಲಿ ರಸ್ತೆಗಳು ಅತ್ಯಂತ ಕೆಟ್ಟ ಸ್ಥಿತಿಯಲ್ಲಿವೆ. ಆದ್ದರಿಂದ ಅಂತರ ರಾಜ್ಯಗಳ ಸಂಪರ್ಕ ಕಲ್ಪಿಸುವ ಕಾಲುವೆಗಳನ್ನು ನೌಕಾ ಉದ್ದೇಶಕ್ಕೆ ಬಳಸಿಕೊಳ್ಳುವುದು ಅತ್ಯಂತಸೂಕ್ತ ಚಿಂತನೆಯೆನಿಸುತ್ತದೆ. ಜಲಮಾರ್ಗ ಸಾಗಣೆ ವೆಚ್ಚ ಕೂಡ ತೀರ ಸಣ್ಣ ಪ್ರಮಾಣದ್ದಾಗಿರುತ್ತದೆ ಆದ್ದರಿಂದ ಪ್ರಧಾನ ಕಾಲುವೆಗಳಿರುವ ಕಡೆಗಳೆಲ್ಲಾ ತಾಂತ್ರಿಕ ಸರ್ವೆ ಕೈಗೊಂಡು ನೌಕಾ ಸವಲತ್ತಿಗೆ ಕ್ರಮ ಕೈಗೊಳ್ಳಬೇಕೆಂದು ಮತ್ತೊಮ್ಮೆ ನಾನು ಕೇಳಿಕೊಳ್ಳುತ್ತೇನೆ.

ಮಾನ್ಯ ಅಧ್ಯಕ್ಷರೇ 1987-88 ರ ಸಾಲಿನ ಬಜೆಟ್ ಅದ್ಭುತವಾಗಿದೆ ಎಲ್ಲಾ ರಂಗಗಳ ಆದ್ಯತೆ ಗಮನದಲ್ಲಿರಿಸಿ ಕೊಂಡು ರೂಪಿಸಲಾಗಿರುವ ಈ ಬಜೆಟ್ ಉತ್ತಮ ದೂರ ದೃಷ್ಟಿವುಳ್ಳದ್ದಾಗಿದೆ ತೆರಿಗೆ ನಿತಿಯನ್ನು ಜಾಗರೂಕತೆಯಿಂದ ಸಿದ್ದಪಡಿಸಲಾಗಿದೆ ವೆಚ್ಚಕ್ಕೆ ವ್ಯಾಪಕ ತಡೆ ಹಾಕಲಾಗಿದೆ. ತೆರಿಗೆ ನೀತಿಗಳನ್ನು ವಲಯ ವ್ಯಾಪ್ತಿಗಳನ್ನು ಸರಿಯಾದ ರೀತಿಯಲ್ಲಿ ವಿಸ್ತರಿಸಲಾಗಿದೆ. ಒಂದು ನಿರ್ದಿಷ್ಟ ವೇತನದ ಮೇಲೆ ಶುಲ್ಕದ ಮೇಲೆ ಬಾಡಿಗೆ ಮತ್ತು ರಾಯಧನದ ಮೇಲೆ ಸೇವಾತೆರಿಗೆ ಕಡ್ಡಾಯಗೊಳಿಸಲಾಗಿದೆ. ವಕೀಲರು ವೈದ್ಯರು, ಬಿಲ್ಡರ್‌ಗಳು, ಇಂಜಿನಿಯರ್‌ಗಳು ಆರ್ಥಿಕ ಪ್ರಾಬಲ್ಯವುಳ್ಳವರಾಗಿರುತ್ತಾರೆ. ಆದರೆ ಇವರಲ್ಲಿ ಬಹುಪಾಲು ಜನ ಪ್ರಾಮಾಣಿಕವಾಗಿ ತೆರಿಗೆ ಕಟ್ಟುವುದಿಲ್ಲ ಆದರೆ ಈಗ ಜಾರಿಗೆ ಬಂದಿರುವ ತೆರಿಗೆ ನೀತಿಯ ಪ್ರಕಾರ ಇವರಿಗೆ ಹಣ ನೀಡುವ ಸಂಸ್ಥೆಗಳು ಸರಿಯಾದ ಲೆಕ್ಕಪತ್ರ ನಿರ್ವಹಣೆ ಮಾಡಬೇಕಾಗುತ್ತದೆ. ಸಂಸ್ಥೆಗಳ ಮೂಲಗಳಿಂದಲೇ ತೆರಿಗೆ ಕಡಿತ ಮಾಡಲಾಗುತ್ತದೆ.

ಈ ಬಜೆಟ್ ಪ್ರಸ್ತಾವನೆಗಳು ನಮ್ಮ ಮಾನ್ಯ ಪ್ರಧಾನಮಂತ್ರಿ ರಾಜೀವ್ ಗಾಂಧಿಯವರು ನಂಬಿರುವ 7 ಅಂಶಗಳ ಉಳಿತಾಯ ಉದ್ದೇಶವನ್ನು ಆಧರಿಸಿದೆ ಅದು ಜನರ ಕಲ್ಯಾಣವನ್ನು ಪ್ರಧಾನ ಗುರಿಯಾಗಿಸಿಕೊಂಡಿದೆ. ಅಭಿವೃದ್ಧಿಯ ಫಲ ಸಾಮಾನ್ಯ ಜನತೆಗೆ ತಲುಪಿಸುವುದು ಬಜೆಟ್‌ನ ತೆರಿಗೆ ದರವನ್ನು ಸೂಕ್ತ ಪ್ರಮಾಣದಲ್ಲಿ ತಗ್ಗಿಸಲಾಗಿದೆ. ಬಜೆಟ್ ಆದ್ಯತೆಗಳ ವಿಷಯದಲ್ಲಿ ಅನಗತ್ಯ ನಿಗೂಢಗಳಿಲ್ಲ ಸರಳವಾಗಿದೆ ಪ್ರಗತಿಪರವಾಗಿದೆ ಜನರಿಂದ ಚರ್ಚೆಗೆ ಆಹ್ವಾನಿಸುವ ಮೂಲಕ ಪ್ರಜಾಪ್ರಭುತ್ವದ ಸಹ ಭಾಗುತ್ವವನ್ನು ಪ್ರೋತ್ಸಾಹಿಸಲಾಗಿದೆ. ತೆರಿಗೆ ಪಾವತಿಸುವವರೆಗೂ ಒಂದು ನಮ್ಮಿಂಗಸ್ತ ಸ್ಥಿತಿ ನಿರ್ಮಾಣವಾಗುವಂತೆ ನೋಡಿಕೊಳ್ಳಲಾಗಿದೆ ಯಾವುದೇ ಗುಮಾನಿಗೆ ಅವಕಾಶವಾಗದಂತೆ ನೋಡಿಕೊಳ್ಳಲಾಗಿದೆ.

ಈಗ ನಾನು ಬಜೆಟ್‌ನ ಕೊರತೆ ಅಂಶಗಳ ಬಗ್ಗೆ ಪ್ರಸ್ತಾಪ ಮಾಡುತ್ತೇನೆ ಕೊರತೆ ಬಜೆಟ್‌ನ ಬಗ್ಗೆ ಎಚ್ಚರ ವಹಿಸಬೇಕಿದೆ. ನಮ್ಮ ಪ್ರಧಾನ ಮಂತ್ರಿಗಳು ಒತ್ತು ನೀಡಿದ ಪ್ರಕಾರ ಕೊರತೆ ಇನ್ನಷ್ಟು ತೀವ್ರಗೊಳ್ಳದಂತೆ ಜಾಗ್ರತಿ ವಹಿಸಬೇಕಿದೆ. ಅವರು ಈಗಾಗಲೇ ಸ್ಪಷ್ಟ ಪಡಿಸಿದ್ದಾರೆ ಬಜೆಟ್‌ನಲ್ಲಿ

ಒದಗಿಸಲಾಗಿರುವ ಹಣಕ್ಕಿಂತ ಒಂದು ರೂಪಾಯಿ ಕೂಡ ಹೆಚ್ಚು ಖರ್ಚು ಮಾಡಲಾಗದು ಎಂದು ಸ್ಪಷ್ಟ ಪಡಿಸಿದ್ದಾರೆ ಅನುತ್ಪಾದಕ ಸಾಮಾಗ್ರಿಗಳ ಮೇಲೆ ಅನಗತ್ಯವಾಗಿ ವ್ಯಯ ಮಾಡುವುದನ್ನು ನಿಲ್ಲಿಸಲೇ ಬೇಕಿದೆ ಇದು ಸಾಧ್ಯವಾದರೆ ನಮ್ಮ ದೇಶವನ್ನು ಸರಿಯಾದ ಪಥದಲ್ಲಿ ಮುನ್ನಡೆಸಬಹುದಾಗಿದೆ ಸಬ್ಸಿಡಿ ಮತ್ತು ರಕ್ಷಣಾ ಉತ್ಪನ್ನಗಳ ಮೇಲೆ ಹಣ ಸುರಿಯುತ್ತಿರುವುದರಿಂದ ಕೊರತೆ ತಲೆದೋರಿದೆ ಇದನ್ನೆಲ್ಲ ಗಮನಿಸಿಯೇ ಎಲ್ಲಾ ಸದಸ್ಯರು ಈ ಬಜೆಟ್‌ನ್ನು ಕೊಂಡಾಡಿದ್ದಾರೆ.

ಈ ದೇಶದಲ್ಲಿ ಅನೇಕ ಜನ ವಿಜ್ಞಾನಿಗಳಿದ್ದಾರೆ 2 ಲಕ್ಷ 60,000 ಸಾವಿರಕ್ಕೂ ಅಧಿಕ ವಿಜ್ಞಾನಿಗಳು ಕಾರ್ಯ ನಿರ್ವಹಿಸುತ್ತಿದ್ದಾರೆ ಅವರ ಕಾರ್ಯಕ್ಷೇತ್ರದ ಮೇಲೆ ನಾವು 4,000 ಕೋಟಿ ರೂಪಾಯಿ ವ್ಯಯ ಮಾಡಿದ್ದೇವೆ ದೇಶಾದ್ಯಂತ 900 ಸಂಶೋಧನಾಭಿವೃದ್ಧಿ ಸಂಸ್ಥೆಗಳಿವೆ. ರಾಷ್ಟ್ರದ ಪ್ರಗತಿಗಾಗಿ ಈ ಸಂಸ್ಥೆಗಳು ಸಕಲ ಪ್ರಯತ್ನ ಮಾಡುತ್ತಾ ಬಂದಿದೆ ಆದರೆ ಇವುಗಳಿಂದ ನಿರೀಕ್ಷಿತ ಪ್ರಗತಿ ಸಾಧ್ಯವಾಗಿಲ್ಲ ಆದ್ದರಿಂದ ಕೃಷಿ, ಹೈನುಗಾರಿಕೆ, ಮತ್ಸ್ಯೋದ್ಯಮ, ರಕ್ಷಣೆ ಮತ್ತು ಟೆಲಿಕಮ್ಯುನಿಕೇಷನ್ ರಂಗಗಳಲ್ಲಿನ ಸಂಶೋಧನಾ ಪ್ರಕ್ರಿಯೆಯನ್ನು ಮರು ಮೌಲ್ಯ ಮಾಪನಕ್ಕೆ ಒಳಪಡಿಸಬೇಕಾದ ಸನ್ನಿವೇಶ ಈಗ ಎದುರಾಗಿದೆ ಅಂತಹ ಮೌಲ್ಯಮಾಪನ ಪ್ರಾಮಾಣಿಕವಾಗಿ ನಡೆದರೆ ಕೆಳಮಟ್ಟದ ಜನತೆಗೆ ಅಭಿವೃದ್ಧಿಯ ಫಲ ಲಭ್ಯವಾಗಬಲ್ಲದು.

ಸರ್ಕಾರ ಕಾರ್ಯಜಾರಿಯನ್ನು ತೀವ್ರಗೊಳಿಸುತ್ತದೆ ಎಂದು ನಮ್ಮ ಮಾನ್ಯ ಪ್ರಧಾನಿಗಳು ಅಧಿಕಾರವಹಿಸಿಕೊಂಡ ಬಳಿಕ ನಡೆಸಿಕೊಟ್ಟ ಪ್ರಥಮ ಪತ್ರಿಕಾಗೋಷ್ಠಿಯಲ್ಲಿ ಭರವಸೆ ನೀಡಿದ್ದರು ಅದೇ ಪ್ರಕಾರ ಕಾರ್ಯಕ್ರಮ ಜಾರಿ ಸಚಿವಾಲಯ ಸೃಷ್ಟಿಸಿದ್ದಾರೆ ಅನೇಕ ಬೃಹತ್ ಯೋಜನೆಗಳು ವಿಳಂಬ ಸ್ಥಿತಿಯಲ್ಲಿ ಉಳಿದಿರುವ ಬಗ್ಗೆ ಈ ಸಚಿವಾಲಯ ಗಮನ ಹರಿಸಬೇಕಿದೆ ದೇಶದ ಸಾರ್ವಜನಿಕವಲಯದ 40 ಕ್ಕೂ ಹೆಚ್ಚು ಬೃಹತ್ ಯೋಜನೆಗಳು ವಿಳಂಬಗೊಂಡಿವೆ ಹೆಚ್ಚುವರಿ 2 ವರ್ಷ ತೆಗೆದುಕೊಂಡರೂ ಈ ಯೋಜನೆಗಳು ಪೂರ್ಣಗೊಂಡಿಲ್ಲ ಈ ಯೋಜನೆಗಳು 65 ಕೋಟಿ ರೂಪಾಯಿ ಹೂಡಿಕೆ ಒಳಗೊಂಡಿವೆ ಸರ್ಕಾರದ 264 ಯೋಜನೆಗಳು ಕೂಡ ವಿವಿಧ ಹಂತಗಳಲ್ಲಿ ನಿಂತುಹೋಗಿವೆ. ಈ ಯೋಜನೆಗಳ ಮೇಲೆ ಹೂಡಿರುವ ಹಣ ಕೂಡ 64 ಕೋಟಿ ರೂಪಾಯಿ ಆಗಿದೆ. ಇಂತಹ ಯೋಜನೆಗಳು ಕಾಲಮಿತಿಯೊಳಗಡೆ ಪೂರ್ಣಗೊಳ್ಳುವಂತೆ ನಿಗಾವಹಿಸಬೇಕಾದ ಜವಾಬ್ದಾರಿ ಈಗ ಜಾರಿ ಸಚಿವಾಲಯದ ಮೇಲೆ ಬಿದ್ದಿದೆ.

ತೆರಿಗೆ ನೀತಿಯ 40 ನೇ ಪ್ಯಾರದಲ್ಲಿ ಪ್ರಸ್ತಾಪಿಸಿರುವ ಅಂಶ ಮಹತ್ವದ್ದು ಕೈಗಾರಿಕೆಯನ್ನು ಕೃಷಿಯೊಂದಿಗೆ ಬೆಸೆಯುವ ಪ್ರಯತ್ನ ಅದರಲ್ಲಿ ಪ್ರಸ್ತಾಪಗೊಂಡಿದೆ ಇದು ನಮ್ಮ ಅಭಿವೃದ್ಧಿಗೆ ವಿಶೇಷ ದಾರಿ ಕಲ್ಪಿಸುತ್ತದೆ ನಮ್ಮ ರೈತರು ಅಧಿಕ ಲಾಭಾಂಶ ಪಡೆಯಬೇಕು ಅನ್ನುವ ಪ್ರಧಾನಿಯವರ ಇಂಗಿತವನ್ನು ಸದು ಸೂಚಿಸುತ್ತದೆ ಕೃಷಿ ಆಧಾರಿತ ಕೈಗಾರಿಕೆಗೆ ಅಗ್ರ ಮನ್ನಣೆ ನೀಡಲಾಗಿದೆ ಸೆಣಬು, ಜವಳಿ ಪರಿಷ್ಕರಣಾ ಉದ್ಯಮಗಳು ಇದರಿಂದ ಲಾಭ ಪಡೆಯಲಿವೆ. ಉಣ್ಣೆ ಮತ್ತು ಹತ್ತಿ ಉದ್ಯಮ ಕೂಡ ಚೇತರಿಸಿಕೊಳ್ಳಲಿದೆ. ಸರ್ಕಾರದ ಈ ಕ್ರಮವನ್ನು ನಾನು ಸ್ವಾಗತಿಸುತ್ತೇನೆ

ಇದೇ ವೇಳೆಉದ್ದೇಶಿತ ಈ ಕಾರ್ಯಕ್ರಮಗಳ ಜಾರಿಗೆ ಒತ್ತು ನೀಡುವಂತೆ ಕೇಳಿಕೊಳ್ಳುತ್ತೇನೆ ಈ ನಿಟ್ಟಿನಲ್ಲಿ ಆದಷ್ಟು ಶೀಘ್ರ ಪ್ರಸ್ತಾವನೆಗಳು ಕಾರ್ಯರೂಪಕ್ಕೆ ಬರಬೇಕಿದೆ ಕಚ್ಚಾ ಸಾಮಾಗ್ರಿಗಳು ದೊರೆಯುವ ಕಡೆಗಳೆಲ್ಲಾ ಕೈಗಾರಿಕೆ ಆರಂಭಿಸುವ ಬಗ್ಗೆ ನಿಗವಹಿಸಬೇಕಿದೆ ಬ್ಲಾಕ್ ಹಂತಗಳಲ್ಲಿ ಕೈಗಾರಿಕೆಗಳು ಸ್ಥಾಪನೆಯಾಗುವಡೆ ಎಚ್ಚರ ವಹಿಸುವ ಅಗತ್ಯವಿದೆ ಹೀಗಾದಾಗ ರೈತರು ತಾವು ಬೆಳೆದ ಉತ್ಪನ್ನಗಳಿಗೆ ನೇರವಾಗಿ ಲಾಭ ಪಡೆಯಲು ಸಾಧ್ಯವಾಗುತ್ತದೆ.

ಕೈಗಾರಿಕಾ ಘಟಕಗಳಿಗೆ ಸರಬರಾಜು ಆಗುವ ಉಕ್ಕಿನ ಮೇಲೆ ಪ್ರತಿ ಟನ್ನಿಗೆ 315-365 ರೂಪಾಯಿ ಶುಲ್ಕ ಹೇರಲಾಗಿದೆ. ಇದೇ ವೇಳೆ ಮಾನ್ಯ ಉಕ್ಕು ಮತ್ತು ಗಣಿ ಸಚಿವರಾದ ಕೆ.ಸಿ. ಪಂತ್ ನೀಡಿರುವ ಹೇಳಿಕೆಯನ್ನು ಈ ಸದನದ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಅವರ ಹೇಳಿಕೆಯ ಪ್ರಕಾರ ದೇಶದ 10 ಉಕ್ಕು ಘಟಕಗಳು ಮುಚ್ಚಿವೆ ಇತರ ಕೆಲವು ಘಟಕಗಳು ಮುಚ್ಚುವ ಆದಿಯಲ್ಲಿವೆ ಈ ದುಸ್ಥಿತಿಗೆ ಕಾರಣ ವಿದ್ಯುತ್ ಕೊರತೆ ಗಗನಕ್ಕೇರಿದೆ ವಿದ್ಯುತ್ ದರ ಮತ್ತು ಸಾಮಾಗ್ರಿಗಳ ದುಬಾರಿ ದರ ಈ ಅಂಶಗಳು ಇಂದು ಇಡೀ ಉದ್ಯಮವನ್ನು ನಾಶಗೊಳಿಸಿವೆ. ಈ ಉದ್ಯಮಕ್ಕೆ ಬೇಕಾದ ಕಚ್ಚಾ ಉತ್ಪಾದನೆ ಸುಲಭವಾಗಿ ದೊರೆಯುತ್ತಿಲ್ಲ ಆದ್ದರಿಂದ ವರ್ಷ ಪ್ರತಿ 2.5 ಲಕ್ಷ ಟನ್ ಕಚ್ಚಾ ಉತ್ಪನ್ನ ರಫ್ತುಮಾಡಿಕೊಳ್ಳಬೇಕಾಗಿದೆ. ಇದರ ಮೇಲೆ ಶೇ.% 20 ರಷ್ಟು ವಾಡಿಕೆ ಶುಲ್ಕ ವಿಧಿಸಲಾಗಿದೆ ಇದು ಉದ್ಯಮದ ಬೆಳವಣಿಗೆಗೆ ಮಾರಕ ಎನಿಸಿದೆ ಕಳೆದ ವರ್ಷ ಕಚ್ಚಾ ಸಾಮಾಗ್ರಿಗಳ ಮೇಲೆ ಹೇರಲಾಗಿದ್ದ ಮೋಡ್‌ವ್ಯಾಟ್ (MODVAT) ತೆರಿಗೆ ಕೂಡ ಈ ಪಟ್ಟಿಯಲ್ಲಿ ಸೇರಿದೆ. ಈ ಎಲ್ಲಾ ಹೊಸ ತೆರಿಗೆಗಳಿಂದ ಉಕ್ಕು ಉದ್ಯಮ ಇಂದು ವಿನಾಶದ ಅಂಚಿಗೆ ತಲುಪಿದೆ ಇದನ್ನು ಗಂಭಿರವಾಗಿ ಪರಿಗಣಿಸಿ ಉದ್ಯಮದ ಪುನರ್ ಚೇತರಿಕೆಗೆ ಪೂರಕ ಕ್ರಮ ಕೈಗೊಳ್ಳಬೇಕೆಂದು ಸಚಿವರನ್ನು ಕೇಳಿ ಕೋಳ್ಳುತ್ತೇನೆ.

ಕೊನೆಯದಾಗಿ ರೇಷ್ಮೆ ಆಮದಿಗೆ ಸಂಬಂಧಿಸಿದ ಮಹತ್ವದ ವಿಷಯದ ಬಗ್ಗೆ ಪ್ರಸ್ತಾಪಿಸಲು ಇಚ್ಛಿಸುತ್ತೇನೆ ರೇಷ್ಮೆಯನ್ನು ಚೀನಾ ದೇಶದಿಂದ ಆಮದು ಮಾಡಿಕೊಳ್ಳಲಾಗುತ್ತಿದೆ ದೇಶದ ವಿವಿಧ ಕಡೆಗಳಲ್ಲಿ ಸಮೃದ್ಧ ರೇಷ್ಮೆ ಉತ್ಪಾದನೆಯಾಗುತ್ತಿದ್ದರೂ ಆಮದು ವ್ಯವಸ್ಥೆಗೆ ಮಾಡಿಕೊಳ್ಳಲಾಗಿದೆ ಕರ್ನಾಟಕದಲ್ಲಿ ಉತ್ತಮ ಗುಣಮಟ್ಟದ ರೇಷ್ಮೆ ಉತ್ಪಾದನೆಯಾಗುತ್ತಿದೆ ಇದರ ಯಥಾ ಸ್ಥಿತಿಯನ್ನು ರಕ್ಷಿಸುವ ಅಗತ್ಯವಿದೆ ಇಷ್ಟರ ಹೊರತಾಗಿಯೂ ಕೆಲವು ಬಾರಿ ಬೇಡಿಕೆ ನೀಗಿಸಲು ಕಚ್ಚಾ ರೇಷ್ಮೆ ಆಮದು ಮಾಡಿಕೊಳ್ಳಲಾಗುತ್ತಿದೆ ಆದರೆ ಆಮದು ಮಾಡಿಕೊಳ್ಳುವುದರಿಂದ ಉತ್ಪಾದಕ ಮತ್ತು ಖರೀದಿ ಮಾಡುವ ಸಂಸ್ಥೆ ಇಬ್ಬರಿಗೂ ಇಕ್ಕಟ್ಟನ್ನು ಸೃಷ್ಟಿಪಡಿಸುವಂತ್ತಾಗಿದೆ. ಆದ್ದರಿಂದ ಅದನ್ನು ಸಾಧ್ಯವಾದಷ್ಟು ಶೀಘ್ರ ನಿಲ್ಲಿಸುವುದೇ ಲೇಸು ಇಷ್ಟಕ್ಕೂ ಮೀರಿ ಆಮದು ಮಾಡಿಕೊಳ್ಳುವುದು ಅನಿವಾರ್ಯವೆನಿಸಿದೆ ನಮಬಿಗಸ್ತ ಎಜೆನ್ಸಿ ಮೂಲಕ ಈ ವ್ಯವಹಾರ ನಡೆಸಬೇಕೆಂದು ನಾನು ಸಚಿವಾಲಯವನ್ನು ಕೇಳಿಕೊಳ್ಳುತ್ತೇನೆ ಆಮದು ವ್ಯವಸ್ಥೆ ಕಡ್ಡಾಯವಾಗಿ ಕೇಂದ್ರ ರೇಷ್ಮೆ ಮಂಡಳಿ ಮೂಲಕವೇ ನಡೆಯಬೇಕು ರೇಷ್ಮೆಯ ಹೆಚ್ಚುವರಿ ಆಮದು ನಿಲ್ಲಿಸಬೇಕು ಇಲ್ಲದೆ ಹೋದರೆ ನೇಕಾರರು ಖರೀದಿದಾರರು ಸೇರಿದಂತೆ ಇಡೀ ಉದ್ಯಮ ನೆಲ ಕಚ್ಚಲಿದೆ ಕರ್ನಾಟಕದಲ್ಲಿ ಹೇರಳವಾಗಿ

ರೇಷ್ಮೆ ಉತ್ಪಾದನೆಯಾಗುತ್ತಿದೆ ಈ ಕಾರಣಕ್ಕಾಗಿಯೇ ಉತ್ತರಪ್ರದೇಶ, ತಮಿಳುನಾಡು ಸೇರಿದಂತೆ ದೇಶದ ಯಾವುದೇ ಭಾಗಕ್ಕಾದರು ಸರಿ ಬೇಡಿಕೆಯ ಅನುಸಾರ ರೇಷ್ಮೆ ಪೂರೈಸಲು ತಾನು ಸಿದ್ಧ ಎಂದು ಕರ್ನಾಟಕ ರೇಷ್ಮೆ ವಾಣಿಜ್ಯ ಸಂಸ್ಥೆ ಹೇಳಿಕೊಂಡು ಬಂದಿದೆ ಈ ಕುರಿತು ಕೇಂದ್ರ ಸರ್ಕಾರಕ್ಕೆ ಅನೇಕ ಬಾರಿ ಪತ್ರ ಕೂಡ ಬರೆದಿದೆ ಆದ ಕಾರಣ ನಾನು ಈ ವಿಷಯದ ಬಗ್ಗೆ ಮತ್ತೊಮ್ಮೆ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ.

ಮಾನ್ಯರೇ ಮಂಗಳೂರು ಪರಿಷ್ಕರಣಾ ಘಟಕಕ್ಕೆ ಅನುಮತಿ ನೀಡಿರುವುದಾಗಿ ಮಾನ್ಯ ಸಚಿವರಾದ ಜರ್ನಾಧನ ಪೂಜಾರಿಯವರು ಹೇಳಿಕೆ ನೀಡಿರುವುದನ್ನು ಪತ್ರಿಕೆಗಳ ಮೂಲಕ ತಿಳಿದುಕೊಂಡಿದ್ದೇನೆ ಆದರೆ ಸಚಿವಾಲಯ ನೀಡಿರುವ ಈ ಅನುಮತಿ ಸಂಬಂಧ ಪಟ್ಟವರಿಗೆ ಇನ್ನೂ ತಲುಪಿಲ್ಲ ಆದ್ದರಿಂದ ಇದನ್ನು ತಿಳಿಸುವ ನಿಟ್ಟಿನಲ್ಲಿ ಶೀಘ್ರ ಕ್ರಮ ಕೈಗೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಈಗಾಗಲೇ ರಾಜ್ಯ ಸರ್ಕಾರ ಈ ಘಟಕದ ಆಂತರಿಕ ಸೌಲಭ್ಯಗಳ ಸ್ಥಾಪನೆಗೆ ಅನುಮತಿ ನೀಡಿದೆ ಆದ್ದರಿಂದ ಈಗ ಕೇಂದ್ರ ಸರ್ಕಾರದ ಅನುಮತಿಯನ್ನಷ್ಟೇ ಎದುರು ನೋಡಲಾಗುತ್ತಿದೆ.

ವಿಜಯನಗರ ಉಕ್ಕು ಘಟಕ ಸ್ಥಾಪನೆಗೆ ಸಂಬಂಧಿಸಿದಂತೆ ನಾನು ತುಂಬಾ ಹಿಂದಿನಿಂದ ಒತ್ತಾಯ ಮಾಡುತ್ತಾ ಬಂದಿದ್ದೇನೆ. 1971 ರಲ್ಲಿ ಹೊಸಪೇಟೆಯಲ್ಲಿ ವಿಜಯನಗರ ಉಕ್ಕು ಘಟಕ ಸ್ಥಾಪನೆಗೆ ಶ್ರೀಮತಿ ಇಂದಿರಾಗಾಂಧೀಯವರು ಅಡಿಗಲ್ಲು ನಿಟ್ಟಿದ್ದಾರೆ. ಮಾನ್ಯರೇ ಈ ಪ್ರದೇಶದಲ್ಲಿ ಹೇರಳವಾಗಿ ಅದಿರು ದೊರೆಯುತ್ತಿದೆ ಆದ್ದರಿಂದ ರಾಷ್ಟ್ರದ ಆಂತರಿಕ ಮತ್ತು ರಫ್ತು ಬೇಡಿಕೆ ನೀಗಿಸುವ ದೃಷ್ಟಿಯಿಂದ ಹೊಸಪೇಟೆ ಉಕ್ಕು ಘಟಕ ಸ್ಥಾಪನೆ ಜರೂರಿನ ಕೆಲಸವೇನಿದೆ ಅದರಿಂದ ಈ ನಿಟ್ಟಿನಲ್ಲಿ ಸರ್ಕಾರ ಶೀಘ್ರ ಕ್ರಮ ಕೈಗೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ಮಾನ್ಯರೇ ನಮಗೆಲ್ಲ ಅತ್ಯಂತ ಖುಷಿ ನೀಡಿದ ಸಂಗತಿಯೆಂದರೆ ಮಾನ್ಯ ಪ್ರದಾನಿಗಳು ಬಡವರ ಮತ್ತು ದುರ್ಬಲ ವರ್ಗಗಳ ಕಲ್ಯಾಣಕ್ಕಾಗಿ ಹೆಚ್ಚಿನ ಹಣ ಮೀಸಲಿಟ್ಟಿರುವುದು ಬಡವರ ಕಲ್ಯಾಣಕ್ಕಾಗಿ ಇರುವ IRDP, NREP, ಇತ್ಯಾದಿ ಕಾರ್ಯ ಕ್ರಮಗಳಿಗೆ ತೃಪ್ತಿಕರ ರೀತಿಯಲ್ಲಿ ಹಣ ಒದಗಿಸಿದ್ದಾರೆ. ಆದರು ನಾನು ಇಲ್ಲಿ ಒಂದು ಅಂಶ ಪ್ರಸ್ತಾಪಿಸ ಬಯಸುತ್ತೇನೆ. ಈ ಕಾರ್ಯ ಕ್ರಮಗಳ ಜಾರಿಗೆ ಮೀಸಲಿಟ್ಟವರು ಹಣ ಬಿಡುಗಡೆಯಲ್ಲಿ ಆಗುತ್ತಿರುವ ವಿಳಂಬ ತಪ್ಪಿಸಲು ಓರ್ವ ಸಂಸದರನ್ನು ಸಮಿತಿಯೊಂದರ ಮುಖ್ಯಸ್ಥನಾಗಿ ನೇಮಿಸಿ ಉಸ್ತುವಾರಿ ನೋಡಿಕೊಳ್ಳುವುದಾಗಿ ಹಿಂದಿನ ಹಣಕಾಸು ಸಚಿವರು ಈ ಸದನಕ್ಕೆ ಭರವಸೆ ನೀಡಿದ್ದರು ಇದನ್ನು ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಚಿಂತನೆ ನಡೆಸಬೇಕಿದೆ ಈ ಬಜೆಟ್ ಅಧಿವೇಶನದಲ್ಲಿ ಈ ಕುರಿತ ಪ್ರಸ್ತಾವನೆಯನ್ನು ಪ್ರಕಟಿಸುವಿರೆಂದು ನಾನು ನಂಬಿದ್ದೇನೆ ಈ ಸಮಿತಿ ಸ್ಥಾಪನೆಯಾದರೆ ಸಮಾಜದ ಬಡ ಮತ್ತು ದುರ್ಬಲವರ್ಗದ ಜನತೆಗೆ ಸರ್ಕಾರದ ಯೋಜನೆಗಳ ಲಾಭ ನೇರವಾಗಿ ಕೈಗೆಟುಕಲಿದೆ.

ಮಾನ್ಯ ಪ್ರಧಾನಮಂತ್ರಿಗಳು ಕೃಷಿ ಅರಣ್ಯ ಬೆಳೆಸುವ ಬಗ್ಗೆ ತುಂಬಾ ಆಸಕ್ತರಾಗಿದ್ದಾರೆ ಪ್ರತಿ ವರ್ಷ ಮಳೆಯ ಪ್ರಮಾಣ ಕುಸಿಯುತ್ತಾ ಸಾಗಿರುವುದನ್ನು ನಾವು ಗಮನಿಸುತ್ತೇವೆ ಕೊಳವೆ ಬಾವಿಗಳು ಕೆರೆಕುಂಟೆಗಳು ಬತ್ತಿ ಬರಿದಾಗುತ್ತಿವೆ ಅಂತರ್ಜಲ ಮಟ್ಟ ತೀವ್ರ ಪ್ರಮಾಣದಲ್ಲಿ ಕುಸಿಯುತ್ತಿದೆ ಇದು ಹೀಗೆ ಮುಂದುವರೆದರೆ ಇನ್ನು ಕೆಲವು ವರ್ಷಗಳಲ್ಲಿ ಭಾರಿ ಜಲ ಕ್ಷಾಮ ಎದುರಿಸಬೇಕಾಗುತ್ತದೆ ಇದನ್ನು ತಪ್ಪಿಸುವ ನಿಟ್ಟಿನಲ್ಲಿ ಈಗಿನಿಂದಲೇ ನಾವು ಅರಣ್ಯ ಬೆಳೆಸುವತ್ತ ಆದ್ಯತೆ ನೀಡಬೇಕಿದೆ ಪ್ರತಿ ಬ್ಲಾಕ್‌ನ ಒಂದು ಶಾಲೆಯನ್ನು ಆಯ್ಕೆ ಮಾಡಿಕೊಂಡು ಅರಣ್ಯ ಬೆಳೆಸುವ ಕಾರ್ಯಕ್ರಮ ಹಮ್ಮಿಕೊಳ್ಳಬೇಕು ಆಯ್ಕೆಯಾದ ಶಾಲೆಗೆ ಅರಣ್ಯ ಇಲಾಖೆ ಮತ್ತು ಆರ್ಥಿಕ, ತಾಂತ್ರಿಕ ನೆರವು ಒದಗಿಸಬೇಕು ಇದರಿಂದ ಮಕ್ಕಳಲ್ಲಿ ಕೈತೋಟ ಬೆಳೆಸುವ ಪ್ರಜ್ಞೆ ಮರ ಮತ್ತು ಅದರೆಡೆಗಿನ ಪ್ರೀತಿ ಹೆಚ್ಚುತ್ತದೆ ಅಷ್ಟೇ ಅಲ್ಲ ಅಂತಹ ಶಾಲೆಯ ಸಂಪನ್ಮೂಲ ಕೂಡ ಹೆಚ್ಚುವಂತೆ ನೋಡಿಕೊಳ್ಳಬೇಕು ಶಾಲೆಗಳ ಅಂಗಳದಲ್ಲಿ ಬೆಳೆದ ಅರಣ್ಯದಿಂದ ಉತ್ಪಾದನೆಯಾಗುವ ಬೀಜ ನಮ್ಮ ದುರ್ಗಮ ಪ್ರದೇಶಗಳ ಹಳ್ಳಿಗೂ ತಲುಪುವಂತಾಗಬೇಕು ಆದ್ದರಿಂದ ಇಂತಹ ಒಂದು ಪ್ರಸ್ತಾವನೆಯನ್ನು ಸರ್ಕಾರದ ಮುಂದೆ ತಂದು ತಕ್ಷಣವೇ ಅನುಮೋದನೆಗೊಳ್ಳಬೇಕಿದೆ.

ಅನ್ಯ ರಾಷ್ಟ್ರಗಳಿಂದ ನಾವು ಪ್ರತಿವರ್ಷವೂ ಭಾರಿ ಪ್ರಮಾಣದ ಎಣ್ಣೆ ಬೀಜಗಳನ್ನು ಆಮದು ಮಾಡಿಕೊಳ್ಳುತ್ತಿದ್ದೇವೆ ಆದರೆ ಇದನ್ನು ನಾವು ಆಂತರಿಕವಾಗಿಯೇ ಉತ್ಪಾದನೆ ಮಾಡುವ ಸಾಮರ್ಥ್ಯ ಹೊಂದಿದ್ದೇವೆ ತಮಗೆ ಆದ್ಯತೆ ಅನುಸಾರ ಹಣಕಾಸು ನೆರವು ಒದಗಿಸಿದರೆ ಅಗತ್ಯ ಪ್ರಮಾಣದ ಎಣ್ಣೆ ಬೀಜ ಉತ್ಪಾದಿಸಿ ಪೂರೈಸುವುದಾಗಿ ಅನೇಕ ರಾಷ್ಟ್ರಗಳು ರಾಜ್ಯ ಸರ್ಕಾರಗಳು ಮುಂದಿಟ್ಟಿರುವ ಇಂತಹ ಪ್ರಸ್ತಾವನೆಯ ಬಗ್ಗೆ ತಕ್ಷಣವೇ ಗಮನಹರಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಮಲಪ್ರಭ ಮತ್ತು ಘಟಪ್ರಭ ಯೋಜನೆಗಳ ನೀರಾವರಿ ಪ್ರದೇಶಗಳ ವ್ಯಾಪ್ತಿಯಲ್ಲಿ ಎಣ್ಣೆ ಬೀಜ ಬೆಳೆದು ರವಾನಿಸುವ ಪ್ರಸ್ತಾಪವನ್ನು ಕರ್ನಾಟಕ ಸರ್ಕಾರ ಈಗಾಗಲೇ ಮಾಡಿದೆ ಆದ್ದರಿಂದನೀರಾವರಿ ಯೋಜನೆಗಳ ನಿರ್ಮಾಣಕ್ಕೆ ಕೇಂದ್ರ ಸರ್ಕಾರ ಸಮ ಪ್ರಮಾಣದ ಹಣ ಬರಿಸಬೇಕೆಂದು ಇದಕ್ಕೆ ಆದ್ಯತೆ ಅನುಸಾರ ಗಮನ ಅರಿಸಬೇಕು.

ಇಷ್ಟು ಮಾತಾಡಲು ಅವಕಾಶ ಮಾಡಿಕೊಟ್ಟ ಸಭಾಧ್ಯಕ್ಷರಿಗೆ ವಂದಿಸಿ ಮಾತು ಮುಗಿಸುತ್ತೇನೆ.

# ಭೂಮಿ

ಸರ್ಕಾರ ಜಮೀನು ಸ್ವಾಧೀನ ಮತ್ತು ಪರಿಹಾರ ನೀಡದೇ ಇರುವುದನ್ನು ಕುರಿತಂತೆ ಸುದೀರ್ಘವಾಗಿ ವಿಷಯ ಮಂಡಿಸಿರುವುದಲ್ಲದೇ ಖಾತೆ ಕಂದಾಯ-ಜಮೀನು ವರ್ಗಾವಣೆ ವಿಚಾರದಲ್ಲಿ ಆಗುವ ವಿಳಂಬ ಕುರಿತಂತೆ ಗಮನಸೆಳೆದು- ಉಪಯುಕ್ತ ಸಲಹೆ ಸೂಚನೆಗಳನ್ನು ಶ್ರೀಮತಿ ಬಸವರಾಜೇಶ್ವರಿಯವರು ನೀಡಿರುವುನ್ನು ಸಂದರ್ಶನವನ್ನು ಇಲ್ಲಿ ಕಾಣಬಹುದು- ಸರ್ಕಾರಿ ಅಧಿಕಾರಿಗಳ ಕರ್ತವ್ಯ ಲೋಪ ಮತ್ತು ಅಜಾಗರೂಕತೆಯನ್ನು ಸಹ ಎತ್ತಿ ಹೇಳಿ ಸಭೆಯನ್ನು ದಂಗುಬಡಿಸಿ ಬಿಡುತ್ತಾರೆ.

**ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ).-** ಮಾನ್ಯ ಅಧ್ಯಕ್ಷರೆ, ನಮ್ಮ ಮುಂದೆ ಇರತಕ್ಕಂಥ ಬೇಡಿಕೆಗಳನ್ನು ಅನುಮೋದಿಸುತ್ತಾ ಕೆಲವು ವಿಚಾರಗಳನ್ನು ಸರ್ಕಾರದ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಲ್ಯಾಂಡ್ ಆಕ್ವಿಜೆಷನ್ ವಿಚಾರವಾಗಿ ಇದುವರೆಗೆ ಮಾತನಾಡಿದ ಮಾನ್ಯ ಸದಸ್ಯರಾದ ಶ್ರೀಮಾನ್ ಬೈರೇಗೌಡರು ಸವಿಸ್ತಾರವಾಗಿ ಹೇಳಿದ್ದಾರೆ. ಒಂದು ವಿಷಯ ಮಾತ್ರ ನಾನು ಹೇಳುತ್ತಾನೆ. ಲ್ಯಾಂಡ್ ಆಕ್ವಿಜೆಷನ್ ವಿಚಾರದಲ್ಲಿ ನಮ್ಮಲ್ಲಿ 10-15 ವರ್ಷಗಳಿಂದ ಜಮೀನು ಕಳೆದುಕೊಂಡು ಪರಿಹಾರವಿಲ್ಲದೆ ಅನೇಕ ರೈತರಿಗೆ ತೊಂದರೆಯಾಗಿದೆ. ಲ್ಯಾಂಡ್ ಆಕ್ವಿಜೆಷನ್ ಕೆಲಸ ತುಂಬಾ ನಿಧಾನದಿಂದ ಆಗುತ್ತಿದೆ. ಅಸಿಸ್ಟೆಂಟ್‌ಕಮಿಷನರ್ ಅವರು ಇನ್‌ಕ್ವಾಯರಿ ಮಾಡಿದ ಮೇಲೆ ಡೀ.ಸೀ. ಅವರು ನೋಟಿಫಿಕೇಷನ್ ಮಾಡಬೇಕಾಗಿರುವುದರಿಂದ ಕಾಲ ವಿಳಂಬವಾಗುತ್ತದೆ. ರೈತರು ಜಮೀನು ಕಳೆದುಕೊಂಡು ಪರಿಹಾರವಿಲ್ಲದೆ ಇದ್ದರೂ ಕೂಡ ಇನ್ನೂ ಕಂದಾಯ ಕೊಡುತ್ತಿದ್ದಾರೆ. ಆದುದರಿಂದ ಈ ಕೆಲಸ ಆದಷ್ಟು ಬೇಗನೆ ಮಾಡಿ ಅವರ ತೊಂದರೆ ತಪ್ಪಿಸುವುದಕ್ಕೆ ಪೂರ್ವಭಾವಿಯಾಗಿ ಶೇಕಡ 75ರಷ್ಟು ವ್ಯವಸ್ಥೆ ಮಾಡಬೇಕು ಎಂದು ಸೂಚಿಸುತ್ತೇನೆ. ನೋಟಿಫಿಕೇಷನ್ ಹೊರಡಿಸುವ ಹೊಸ ಪದ್ಧತಿಯನ್ನು ತೆಗೆದುಹಾಕಿ ಮೊದಲು ಹೇಗೆ ಇತ್ತೋ ಹಾಗೆ ಮಾಡಬೇಕು. ದಯವಿಟ್ಟು ಇದನ್ನು ಪರ್ಯಾಲೋಚಿಸಿ ಮೊದಲಿನಂತೆ ಮಾಡುವುದು ಅಗತ್ಯವಾಗಿದೆ ಎಂದು ಈ ಸಂದರ್ಭದಲ್ಲಿ ಮಾನ್ಯ ಮಂತ್ರಿಗಳಿಗೆ ಹೇಳುತ್ತೇನೆ.

ಇನ್ನು ಜಮಾಬಂದಿ ವಿಚಾರ. ಇದು ಬಹಳ ತಡವಾಗುತ್ತಿದೆ. ಇದುವರೆಗೆ ತಾತನ ಹೆಸರಿನಲ್ಲಿರುವುದು ಮಕ್ಕಳು ಮೊಮ್ಮಕ್ಕಳ ಹೆಸರಿಗೆ ಪಟ್ಟಾ ಆಗಿಲ್ಲ. ಕಾಗದ ಪತ್ರಗಳು ಹೇಗೆ ಇದ್ದವೋ ಹಾಗೆಯೇ ಇವೆ. ಇದು ವಿಳಂಬವಾಗುವುದರಿಂದ ಅನೇಕರಿಗೆ ತೊಂದರೆಯಾಗಿದೆ. ಒಂದು ಬಾವಿ ತೆಗೆಯಲು ಸಾಲ ಪಡೆಯಲು ಬರುವುದಿಲ್ಲ. ಅವರವರ ಹೆಸರಿನಲ್ಲಿ ಇದ್ದರೆ ರೈತನಿಗೆ ಅನುಕೂಲವಾಗುತ್ತದೆ. ಇದನ್ನು ಸರಿಪಡಿಸುವುದಕ್ಕೆ ಸರಕಾರ ಗಮನಕೊಡಬೇಕು ಎಂದು ಹೇಳುತ್ತೇನೆ.

ಎರಡು ತಿಂಗಳ ಹಿಂದೆ ರಾಯಚೂರು ಜಿಲ್ಲೆಯಲ್ಲಿ ಆಲಿಕಲ್ಲು ಮಳೆಯಾಗಿ ರೈತರಿಗೆ ಬಹಳ ನಷ್ಟ ಉಂಟಾಗಿದೆ. ರಾಯಚೂರು ಮತ್ತು ಮಾನ್ವಿ ತಾಲ್ಲೂಕುಗಳಲ್ಲಿ ಒಂದೂವರೆ ಲಕ್ಷ ರೂಪಾಯಿ ಹಾನಿಯಾಗಿದೆ ಎಂದು ಅಂದಾಜು ಮಾಡಲಾಗಿದೆ. ಇದು ವೃತ್ತಪತ್ರಿಕೆಯಲ್ಲಿ ವರದಿಯಾಗಿದೆ. ಈ ಆಲಿಕಲ್ಲು ಮಳೆಯಿಂದ ಜೋಳದ ತೆನೆಗಳಲ್ಲಿಯ ಕಾಳು ಉದುರಿ ಬಹಳ ನಷ್ಟ ಉಂಟಾಗಿದೆ. ಹತ್ತಿ ಬೆಳೆಯಂತೂ ಸಂಪೂರ್ಣವಾಗಿ ನಾಶವಾಗಿದೆ. ರೈತರು ಬಹಳ ಕಷ್ಟದಲ್ಲಿದ್ದಾರೆ. ಜಕ್ಕಲದಿನ್ನಿ ಗ್ರಾಮದಲ್ಲಿ ಹೆಚ್ಚು ಹಾನಿಯಾಗಿದೆ. ಇದನ್ನು ಸರಕಾರದ ಗಮನಕ್ಕೆ ನಾನು ತಂದಿದ್ದೇನೆ. ಈಗ ನಾನು ವಿನಂತಿ ಮಾಡಿಕೊಳ್ಳುವುದು ಏನೆಂದರೆ, ಈ ಪ್ರದೇಶದಲ್ಲಿಯ ರೈತರಿಗೆ ಕಂದಾಯ ಮಾಫೀ ಮಾಡುವುದಕ್ಕೆ ರೆಮಿಶನ್ ಕೊಡುವುದಕ್ಕೆ ನಿರ್ಣಯ ಮಾಡಬೇಕು. ತಕ್ಕಾವಿ ಸಾಲ ತೆಗೆದುಕೊಂಡ ರೈತರಿಂದ ಹಣ ವಸೂಲ್ಮಾಡಬಾದರು. ಇದಲ್ಲದೆ ಈ ವರ್ಷ ಅವರಿಂದ ಲೆವಿ ತೆಗೆದುಕೊಳ್ಳಬಾರದು. ಹೆಚ್ಚು ತಗಾವಿಸಾಲ ರೈತರಿಗೆ ಕೊಡುವ ಅನುಕೂಲತೆ ಮಾಡಿಕೊಡಬೇಕು. ಇದಲ್ಲದೆ ಬಡ ಜನರಿಗೆ 200–300 ರೂಪಾಯಿ ರೀಲೀಫ್ ಕೊಟ್ಟರೆ ಅನುಕೂಲವಾಗುತ್ತದೆ ಎಂದು ಮಾನ್ಯ ಮಂತ್ರಿಗಳ ಗಮನಕ್ಕೆ ತರುತ್ತೇನೆ.

ಇನ್ನು ರೆವೆನ್ಯೂ ಇಲಾಖೆಯಲ್ಲಿ ತಹಶೀಲದಾರರ ಕಚೇರಿಯಲ್ಲಿ ಯಾವ ರೀತಿ ಕೆಲಸ ನಡೆಯುತ್ತಿದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತೇನೆ, ಇವತ್ತಿನ ದಿವಸ 1955 ನೇ ಇಸವಿಯಿಂದ 1965 ರವರೆಗೆ ಅಂದರೆ ಹತ್ತು ವರ್ಷದ ಕಂದಾಯ ಕೊಡಬೇಕೆಂದು ರೈತರಿಗೆ ನೋಟೀಸ್ ಕೊಟಿದ್ದಾರೆ. ಹತ್ತು ವರ್ಷದ ಕಂದಾಯ ಒಂದೇ ಸಲ ಕೊಡುವುದಕ್ಕೆ ಸಾಧ್ಯವೇ? ಇದನ್ನು ವಿಚಾರ ಮಾಡಬೇಕು. ಇದಲ್ಲದೆ 1955ನೇ ಇಸವಿಯಲ್ಲಿ 1960ನೇ ಇಸವಿಯವರೆಗೆ ಅಲ್ಲಿ ನೀರು ಬಂದಿರಲಿಲ್ಲ. ಇದು ಬರಗಾಲ ಪೀಡಿತ ಪ್ರದೇಶ ಎಂದು 1955 ರಿಂದ 1959 ವರೆಗೆ ಲ್ಯಾಂಡ್‌ರೆವಿನ್ಯೂಸಸ್ಪೆನ್‌ಷನ್ ಮಾಡಿತ್ತು. ಒಂದೇ ಸಮನೆ 3 ವರ್ಷ ಕಂದಾಯ ಸಸ್ಪೆನ್‌ಷನ್ ಮಾಡುತ್ತಾ ಬಂದಿದ್ದರೆ ಅದಕ್ಕೆ ಕಮಿಷನ್ ಕೊಡ ಬೇಕಾದುದು ಸರಕಾರದ ಕರ್ತವ್ಯ. ಈ ರೀತಿ ಅಲ್ಲಿ ಪರಿಸ್ಥಿತಿ ಇದ್ದರೂ ಕೂಡ ಒಂದೇ ಸಲ ಹತ್ತು ವರ್ಷದ ಕಂದಾಯ ಕೊಡಬೇಕು ಎಂದು ಹೇಳುವುದು ನ್ಯಾಯವಲ್ಲ. ಯಾವ ರೈತನಿಗೂ ಕೊಡುವುದು ಸಾಧ್ಯವಿಲ್ಲ ಎಂಬುದನ್ನು ನಿಮ್ಮ ಗಮನಕ್ಕೆ ತರುತ್ತೇನೆ ಮತ್ತು ಇದನ್ನು ವಿಚಾರ ಮಾಡಬೇಕು ಎಂದು ಹೇಳುತ್ತೇನೆ.

ಇನ್ನೊಂದು ಸೋಜಿಗದ ಸಂಗತಿ ಅಂದರೆ, ಕೆಲವು ರೈತರು ಕಂದಾಯ ಕೊಟ್ಟು ರಸೀದಿ ಪಡೆದಿದ್ದರೂ ಕೂಡ ಅಂಥ ರೈತರಿಗೆ ಕಂದಾಯ ಕೊಡಬೇಕೆಂದು ಅವರಿಗೆ ನೋಟೀಸ್ ಮೂಲಕ ನೋಟೀಸ್ ಜಾರಿ ಮಾಡಿದ್ದಾರೆ. ನಿರ್ದಿಷ್ಟ ನಿದರ್ಶನ ಬೇಕಾದರೆ

ಕೊಡಬಹುದು. 1963-64 ಮತ್ತು 1964-65ರಲ್ಲಿ ಕಂದಾಯ ಕೊಟ್ಟ ರಸೀದಿ ಇದ್ದಾಗ್ಯೂ ಬಾಕಿ ಕೊಡಬೇಕು ಎಂದು ನೋಟೀಸ್ ಜಾರಿ ಮಾಡಿದ ಸಂದರ್ಬಗಳು. ಇವೆ. ಈ ರೀತಿ ಕೆಲಸ ಮಾಡುವ ಅಧಿಕಾರಿಗಳ ಮೇಲೆ ಯೋಗ್ಯ ಕ್ರಮ ತೆಗೆದುಕೊಳ್ಳಬೇಕು. ಇದು ಮರ್ಯಾದೆಯ ಪ್ರಶ್ನೆ. ಕಂದಾಯ ಕೊಟ್ಟಂಥವರು ಕೊಟ್ಟಿಲ್ಲ ಎಂದು ಹೇಳುವುದು ಸರಿಯಲ್ಲ. ಕಂದಾಯ ಜಮಾ ಯಾಕೆ ಆಗಿಲ್ಲ ಯೋಗ್ಯ ಕ್ರಮ ತೆಗೆದುಕೊಳ್ಳುವುದು ಅಗತ್ಯ. ಯಾಕೆಂದರೆ, ಇದರಿಂದ ರೈತಾಪಿ ಜನರಿಗೆ ಬಹಳ ತೊಂದರೆಯಾಗಿದೆ. ಶ್ಯಾನುಭೋಗರು ಬರೆದ ಲೆಕ್ಕ, ರೆವೆನ್ಯೂ ಇನ್‌ಸ್ಪೆಕ್ಟರ್ ಬರೆಯುವ ಲೆಕ್ಕ ತಹಶೀಲದಾರರ ಲೆಕ್ಕ ಇವು ಒಂದಕ್ಕೊಂದು ಸಂಬಂಧವಿಲ್ಲ. ನೀರಾವರಿ ಬಂದ ಮೇಲೆ ಕಂದಾಯದ ಮೇಲೆ ಸರಚಾರ್ಜ್ ಹಾಕುತ್ತಾರೆ. ಲ್ಯಾಂಡ್ ರೆವೆನ್ಯೂ ಮತ್ತು ವಾಡರ್‌ರೇಟ್ ಎರಡೂ ಕೂಡಿಸಿ ಅದರ ಮೇಲೆ ಸರಚಾರ್ಜ್ ಹಕಿ ವಸೂಲ್ಮಾಡುವುದು ಇದು ಯಾವ ಊರಿನಿಂದ ಬಂದ ಪದ್ಧತಿ? ಈ ರೀತಿ ಮಾಡಿರುವುದು ಸರಿಯಿಲ್ಲ. ಏಕರೂಪವಾದ ಪದ್ಧತಿಯಿಂದ ವಸೂಲ್ಮಾಡಬೇಕು. ಈ ವಿಚಾರದಲ್ಲಿ ಆಫೀಸರರು ತಪ್ಪು ಮಾಡಿದ್ದಾರೆ ಅಂಥವರ ಮೇಲೆ ಕ್ರಮ ತೆಗೆದುಕೊಳ್ಳಬೇಕು ಎಂದು ಮಾನ್ಯ ಮುಂತ್ರಿಗಳ ಗಮನಕ್ಕೆ ತರಲು ಬಯಸುತ್ತೇನೆ.

ಇನ್ನು ಪಶು ಸಂಗೋಪನೆ ಬಗ್ಗೆ ಹೇಳುವುದಾದರೆ, ರೂರಲ್ ವೆಟನರಿ ಡಿಸ್ಪೆನ್ಸರೀಸ್ ನಾಲ್ಕಾರು ಕಡೆ ಪ್ರಾರಂಭ ಮಾಡಿದ್ದಾರೆ. ಆದರೆ ಅಲ್ಲಿ ಔಷಧಗಳಸ ಕೊರತೆ ಇದೆ. ಸಿಬ್ಬಂದಿ ಕೊರತೆಯಂತೂ ತುಂಬಾ ಇದೆ. ಶಿರವಾರ, ಕವಟಾಳ, ಗೆಜ್ಜಲಘಟ್ಟಾ ಈ ಸ್ಥಳಗಳಲ್ಲಿ ಸ್ಟಾರ್‌ಮೆನ್ ಇದ್ದರೂ ಡಾಕ್ಟರ್ ಇಲ್ಲ. ಇದೊಂದು ಡೆವಲಪ್‌ಮೆಂಟ್ ಪ್ರೋಗ್ರಾಂ ಆಗಿರುವುದರಿಂದ ಕೊನೆಯ ಪಕ್ಷ ಆಯಾಯ ಹೋಬಳಿ ಹೆಡ್ ಕ್ವಾರ್ಟರ್ಸಿನಲ್ಲಿ ಒಬ್ಬ ಡಾಕ್ಟರ್ ಇಡಲು ಪ್ರಯತ್ನ ಮಾಡಬೇಕು ಎಂದು ಹೇಳುತ್ತೇನೆ. ಇದಲ್ಲದೆ ಸಾಕಷ್ಟು ಔಷಧಿ ಸಂಗ್ರಹ ಇರುವ ವ್ಯವಸ್ಥೆ ಮಾಡಬೇಕು ಎಂದು ಸಹ ಹೇಳಬೇಕಾಗಿದೆ.

ಇನ್ನು 'ಅರ್ಟಿಫೀಶಿಯಲ್ ಇನ್‌ಸೆಮಿನೇಶನ್ ಸೆಂಟರ್ಸ್' ತೆರೆಯಬೇಕು ಎಂಬ ಒಂದು ಯೋಜನೆ ಇದೆ. ಇದರಿಂದ ದನಗಳ ಸಂಪತ್ತು ಹೆಚ್ಚು ಹೆಚ್ಚು ಬೆಳೆಸಲು ತುಂಬಾ ಅನುಕೂಲ ನಮ್ಮ ಜಿಲ್ಲೆಯಲ್ಲಿ ಇದೆ. ವಿದ್ಯುತ್ ಶಕ್ತಿ ಪೂರೈಕೆ ಇದೆ. ತುಂಗಭದ್ರಾ ನದಿಯಿಂದ ಐದುವರೆ ಲಕ್ಷ ಎಕರೆ ಜಮೀನು ನೀರಾವರಿಯಾಗುತ್ತದೆ. ಹುಲ್ಲು ಬೆಳೆಸುವುದಕ್ಕೆ ಅನುಕೂಲವಿದೆ. ಹೈ ಬ್ರಿಡ್ ಹುಲ್ಲು ಬೆಳೆಸುವುದಕ್ಕೆ ಅನುಕೂಲ ಮಾಡಿಕೊಡಬೇಕೆಂದು ಈ ಸಮಯದಲ್ಲಿ ಕೇಳಿಕೊಳ್ಳುತ್ತೇನೆ. ದನಗಳನ್ನು ಬೆಳೆಸುವುದು ಸಹ ಅಷ್ಟೇ ಮುಖ್ಯವೋ ಅವುಗಳಿಗೆ ಆಹಾರವಾದ ಒಳ್ಳೆಯ ಜಾತಿಯ ಹುಲ್ಲು ಬೆಳೆಸುವುದು ಸಹ ಅಷ್ಟೇ

ಮುಖ್ಯವಾದುದು. ಆದುದರಿಂದ ಹೈಬ್ರಿಡ್ ಹುಲ್ಲು ಗಡ್ಡೆಗಳನ್ನು ಸುಲಭದರದಲ್ಲಿ ಸಾಧ್ಯವಾದರೆ ಉಚಿತವಾಗಿ ಕೊಟ್ಟು ಹುಲ್ಲು ಬೆಳೆಸುವ ಕಾರ್ಯಕ್ರಮವನ್ನು ಯೋಜನೆಯಲ್ಲಿ ಅಳವಡಿಸಿಕೊಳ್ಳಬೇಕೆಂದು ಹೇಳುತ್ತೇನೆ. ಇದು ಬಹು ಜನ ರೈತರಿಗೆ ವಿಷಯ ಗೊತ್ತಿಲ್ಲ. ಈ ವಿಷಯ ಕೆಲವೇ ಜನಕ್ಕೆ ಮಾತ್ರ ಗೊತ್ತಿದೆ. ಆದರೆ ಅವರು ಬೇರೆ ಜನರಿಗೆ ಇದುವರೆಗೆ ತಿಳಿಸಿಲ್ಲ. ಈ ಹೈ ಬ್ರೀಡ್ ಜೋಳದಲ್ಲಿ ತುಂಬ ರಸವಿದ್ದು, ದನಗಳಿಗೆ ಅತಿ ಮುಖ್ಯವಾದ ಮೇವಾಗಿರುತ್ತದೆಂದು ಹೇಳುತ್ತಾರೆ. ಹಸಿರು ಎಲ್ಲಿ ಹೆಚ್ಚು ಹೆಚ್ಚು ಇರುತ್ತದೋ ಅಲ್ಲೆಲ್ಲಾ ಸೈಲೇಜ್ ಮಾಡುವುದಕ್ಕೆ ತುಂಬಾ ಅನುಕೂಲವಾಗುತ್ತದೆ. ಎಂದು ಕೇಳಿದ್ದೇನೆ. ಈ ರೀತಿ ಮಾಡುವ ಪದ್ಧತಿ ಬಹಳ ಜನರಿಗೆ ಗೊತ್ತಿಲ್ಲ. ಇದನ್ನು ತಾವು ಎಲ್ಲಾ ರೈತರಿಗೂ ತಿಳಿಸುವುದಕ್ಕೆ ಪ್ರಯತ್ನ ಮಾಡುವುದು ಒಳ್ಳೆಯದೆಂದು ಹೇಳಬಯಸುತ್ತೇನೆ. ಕೊನೆಯದಾಗಿ, ಪೌಲ್ಟ್ರಿ ವಿಚಾರದಲ್ಲಿ 'ಡೀಪ್‌ಲೀಟರ್ ಸಿಸ್ಟಮ್ ಇನ್‌ಟ್ರ್ಯೂಡ್ಯೂಸ್' ಮಾಡಿದಮೇಲೆ ರೈತಾಪಿ ಜನರು ಹೆಚ್ಚಾಗಿ ಕೋಳಿ ಸಾಕಾಣಿಕೆ ಮಾಡುತ್ತಿದ್ದಾರೆ. ಇದಕ್ಕಾ 200-300 ರೂಪಾಯಿಗಳವರೆಗೆ ಸಾಲ ಕೊಡುತ್ತಿದ್ದೀರಿ. ತಾವು ಒಂದು ಪ್ರೋಗ್ರಾಮ್ ಹಾಕಿಕೊಂಡು ಒಬ್ಬರಿಗೆ ಒಂದು ಸಾವಿರದವರೆಗೆ ಸಾಲ ಕೊಡುತ್ತೀರೆಂದು ಗೊತ್ತಾಗಿದೆ. ಈ ಪ್ರೋಗ್ರಾಮ್ ಇಡೀ ದೇಶಕ್ಕೆ ಅನ್ವಯಿಸುವಂತೆ ಮಾಡಬೇಕು. ಆಗ ಮಾತ್ರ ಕೇವಲ ಸಣ್ಣ ರೈತರು ಸಹ ಪೌಲ್ಟ್ರಿ ಅಭಿವೃದ್ಧಿ ಮಾಡುವುದಕ್ಕೆ ತುಂಬ ಅನುಕೂಲವಾಗುತ್ತದೆ. ಅದರ ಗೊಬ್ಬರ ಸಹ ಅತೀ ಮುಖ್ಯವಾದ ಉತ್ತಮವಾದ ಗೊಬ್ಬರವೆಂದು ತಿಳಿದುಬಂದಿದೆ. ಆದ್ದರಿಂದ ಈ ಪೌಲ್‌ಟ್ರಿ ಅಭಿವೃದ್ಧಿ ಇಡೀ ಮೈಸೂರು ರಾಜ್ಯದ ಎಲ್ಲಾ ಭಾಗಗಳಲ್ಲೂ ಆಗುವುದಕ್ಕೆ ಅನುಕೂಲ ಮಾಡಿಕೊಡಬೇಕು. ಅಲ್ಲದೆ ಯಾರು ಮುಂದೆ ಬರುತ್ತಾರೋ ಅವರಿಗೆ ಸಾಲದ ರೂಪವಾಗಿ ಹಣದ ಜೊತೆಗೆ ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಸಹ ಕೊಡುವುದಕ್ಕೆ ತಾವು ಏರ್ಪಾಡು ಮಾಡಬೇಕು. ಈ ವಿಚಾರದಲ್ಲಿ ನಾಲ್ಕು ಮಾತುಗಳನ್ನು ಹೇಳುವುದಕ್ಕೆ ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಆಹಾರ

## ಆಹಾರದ ಉತ್ಪಾದನೆ ಹೆಚ್ಚಿನ ಅಭಾವನ್ನು ಕಡಿಮೆಗೊಳಿಸುವ ವೇಳೆಯಲ್ಲಿ ಕೈಕೊಳ್ಳಬೇಕಾದ ಕ್ರಮ

**ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ).**- ಮಾನ್ಯ ಅಧ್ಯಕ್ಷರೆ, ಶ್ರೀಮಾನ್ ಸಿದ್ದಯ್ಯನವರು ಈ ಸಭೆಯ ಮುಂದೆ ತಂದಿರತಕ್ಕ ನಿರ್ಣಯವನ್ನು ಸಂಪೂರ್ಣವಾಗಿ ಅನುಮೋದಿಸುತ್ತಾ ಕೆಲವು ವಿಷಯಗಳನ್ನು ಹೇಳಬೇಕೆಂದು ನಾನು ಅಪೇಕ್ಷೆಪಡುತ್ತೇನೆ. ಈಗಾಗಲೇ ಮಾನ್ಯ ಸದಸ್ಯರನೇಕರು ರಚನಾತ್ಮಕವಾದ ಸಲಹೆಗಳನ್ನು ಕೊಟ್ಟಿದ್ದಾರೆ ಹೆಚ್ಚು ಆಹಾರೋತ್ಪಾದನೆಯನ್ನು ಮಾಡತಕ್ಕ ವಿಷಯದಲ್ಲಿ ನಾನು ಸ್ವಲ್ಪ ಮಟ್ಟಿಗೆ ಹೇಳಬೇಕೆಂದಿದ್ದೇನೆ. ಹೈಬ್ರೀಡ್ ಜೋಳ, ಸಜ್ಜೆ ಮತ್ತು ಗೋನುಜೋಳ ಇವುಗಳು ಈಗ ಎರಡು ವರ್ಷಗಳಿಂದ ಪ್ರಚಾರವಾಗುತ್ತಿದೆ. ಅಮೆರಿಕಾದಲ್ಲಿ ಈಗ 15 ವರ್ಷಗಳ ಹಿಂದೆ ಪ್ರಚಾರಮಾಡಿದ್ದರೆ ನಮ್ಮ ದೇಶದಲ್ಲಿ ಈಗ ಎರಡು ವರ್ಷಗಳಿಂದ ಪ್ರಚಾರವಾಗುತ್ತಿದ4. ಆದರೆ ಕೆಲವು ಜನರು ಮಾತ್ರ ಇದರ ಪ್ರಯೋಗವನ್ನು ಮಾಡಿದ್ದಾರೆ. ಹೈಬ್ರೀಡ್ ಜೋಳ, ಗೋನು ಜೋಳ ಸಜ್ಜೆ ಈ ಬೆಳೆಗೆ ಯಾವ ತರಹ ಹೆಚ್ಚು ಆಹಾರವನ್ನು ಉತ್ಪಾದನೆ ಮಾಡುತ್ತವೆ ಎಂಬುದನ್ನು ನಾನು ಸಂಕ್ಷಿಪ್ತವಾಗಿ ತಿಳಿಸುತ್ತೇನೆ. ಒಂದು ಎಕರೆ ಜಮಿೂನಿನಲ್ಲಿ ನೀರು ಕಟ್ಟಿ ಸೈಂಟಿಫಿಕ್ಕಾಗಿ ವ್ಯವಸಾಯಮಾಡುವುದಾದರೆ 20-30 ಚೀಲ ಗೇನೂ ಜೋಳವನ್ನು ಬೆಳೆಯಬಹುದು, ಮುಧೋಳ, ಜಮಖಂಡಿ ಈ ಪ್ರದೇಶದಲ್ಲಿ ಈ ತರಹ ಬೆಳೆಯನ್ನು ಬೆಳೆಯುವುದರಿಂದ ಉತ್ಪತ್ತಿ ಜಾಸ್ತಿಯಾಗಿದೆ, ಎಂದು ನಾವು ಪತ್ರಿಕೆಗಳಲ್ಲಿ ಓದಿದ್ದೇವೆ. ಇದು ಮೂರು ತಿಂಗಳಲ್ಲಿಯೇ ಫಸಲು ಸಿಕ್ಕುತ್ತದೆ. ನಾರ್ಮಲ್ ಜೋಳವನ್ನು ಬೆಳೆಯಬೇಕಾದರೆ 5-6 ತಿಂಗಳು ಬೇಕಾಗುತ್ತದೆ. ಡ್ರೈಕಂಡೀಷನ್ ಇರುವ ಜಮೀನಿನಲ್ಲಿ 20ಚೀಲ ಜೋಳವನ್ನು ಬೆಳೆಯುವುದಕ್ಕೆ ಅವಕಾಶವಿರುವಾಗ ಯಾವಾಗಲೂ ಹಳೆಯ ಪದ್ಧತಿಯನ್ನೇ ಅನುಸರಿಸಿ ಜಮೀನಿನಲ್ಲಿ ಭತ್ತವನ್ನು ಬೆಳೆಯುತ್ತಿದ್ದಾರೆ. ಜಮೀನಿನಲ್ಲಿ ತೆಂಗು ಹಾಕಬೇಕು, ಕಬ್ಬು ಬೆಳೆಯಬೇಕು ಎನ್ನುವ ಪದ್ಧತಿಯನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಬೇಕು. ಒಂದು ಸಾರಿ ಭತ್ತ ಹಾಕಿದರೆ 5 ತಿಂಗಳು ಸಮರ್ಪಕವಾಗಿ ನೀರು ಕೊಡಬೇಕಾಗುತ್ತದೆ. 5 ಎಕರೆ ಭತ್ತದ ಬೆಳೆಗೆ ಕೊಡತಕ್ಕ ನೀರನ್ನು 15-20 ಎಕರೆ ಜೋಳದ ಬೆಳೆಗೆ ಹಾಕಿಸಬಹುದು. ಗೌನು ಜೋಳ ಮತ್ತು ಸಜ್ಜೆಗೆ ಅಷ್ಟು ಹೆಚ್ಚು ನೀರು ಬೇಕಾಗುವುದಿಲ್ಲ. ಹೈಬ್ರೀಡ್ ಜೋಳದ ಬೀಜವನ್ನು ಉಪಯೋಗಿಸುವುದರಿಂದ ಸಾಮಾನ್ಯ ಜೋಳದ ಉತ್ಪತ್ತಿಗಿಂತ ಎರಡು ಪಟ್ಟು. ಮೂರುಪಟ್ಟು ನಾಲ್ಕು ಪಟ್ಟು 5 ಪಟ್ಟುಗಳವರೆಗೂ ಉತ್ಪನ್ನ ಹೆಚ್ಚಾಗುತ್ತದೆ. ಆದರೆ ಇಲ್ಲಿ ಬೀಜಗಳ ಒಂದು ತೊಂದರೆ ಬರುತ್ತಿವೆ. ಇಲ್ಲಿ

ಸೀಡ್ಸ್ ಏನು ಬೆಳೆಯುತ್ತಾರೆಯೋ ಅವು ಮಲ್ಟಿಪ್ಲೈ ಆಗುವುದಿಲ್ಲ. ಆದ್ದರಿಂದ ಸೀಡ್ಸ್ ಅನ್ನು ಬೇರೆ ಸೀಡ್ಸ್ ಪ್ರಾಜೆಕ್ಟ್‌ಗಳಿಂದ ತರಿಸಬೇಕಾದ ತೊಂದರೆಗಳು ಬರುತ್ತವೆ. ಕೆಲವು ರೈತರು ಸೀಡ್ಸ್ ಅನ್ನು ಹೊರಗಡೆಯಿಂದ ಕೊಯಮತ್ತೂರು ಮುಂತಾದ ಪ್ರದೇಶಗಳಿಂದ ತಂದು ಪ್ರಯೋಗ ಮಾಡಿ ಚೆನ್ನಾಗಿ ಬೆಳೆಯುತ್ತಾರೆ. ಇದರಿಂದ ಪ್ರತಿಯೊಬ್ಬ ರೈತರಿಗೂ ಅನುಕೂಲವಾಗುತ್ತದೆ. ಚೆನ್ನಾಗಿ, ಜಾಗ್ರತೆಯಾಗಿ ಬೆಳೆಯುತ್ತದೆ. ಅದಕ್ಕೋಸ್ಕರ ಬೀಜದ ವಿಷಯದಲ್ಲಿ ನಾನು ಸರ್ಕಾರಕ್ಕೆ ಸಲಹೆ ಮಾಡುವುದೇನೆಂದರೆ ರಿಸರ್ಚ್ ಸ್ಟೇಷನ್‌ನಲ್ಲಿ ಆದಷ್ಟು ಬೇಗನೇ ಎಂದರೆ ಖಚಿತವಾಗಿ ಮುಂದಿನ ವರ್ಷ ಜೂನ್ ತಿಂಗಳಲ್ಲಿ ಬೀಜಗಳನ್ನು ನಮ್ಮಲ್ಲಿರತಕ್ಕ ರಿಸರ್ಚ್ ಸ್ಟೇಷನ್‌ನಲ್ಲಿ ತಯಾರು ಮಾಡಿಕೊಡಬೇಕೆಂದು ನಾನು ಸಲಹೆ ಮಾಡುತ್ತೇನೆ. ಇದರಲ್ಲಿ ವರ್ಷಕ್ಕೆ ಎರಡು ಬೆಳೆಗಳನ್ನು ಸುಲಭವಾಗಿ ತೆಗೆದುಕೊಳ್ಳಬಹುದು. ಬಹಳ ಜನ ರೈತರು ಬೀಜಗಳು ಬೇಕೆಂದು ಕೇಳುತ್ತಾರೆ. ಆದ್ದರಿಂದ ಅದನ್ನು ಒದಗಿಸುವುದಕ್ಕೆ ಸರ್ಕಾರದವರು ವ್ಯವಸ್ಥೆಮಾಡಬೇಕೆಂದು ನಾನು ಹೇಳುತ್ತೇನೆ. ನೀರಾವರಿ ಇರತಕ್ಕ ಪ್ರದೇಶದಲ್ಲಿ ಈ ಬೀಜಗಳನ್ನು ಉಪಯೋಗಿಸುವುದರಿಂದ ಬಹಳ ಅನುಕೂಲವಾಗುತ್ತದೆ. ತುಂಗಭದ್ರಾ ಪ್ರಾಜೆಕ್ಟ್ ಕೆಳಗಡೆ ಡ್ರೈಕಂಪೆಟ್ ಪ್ರದೇಶವಿದೆ. ಅವರಿಗೆ ಈ ಬೀಜಗಳನ್ನು ಒದಗಿಸಿದರೆ ಅನುಕೂಲವಾಗುತ್ತದೆ. ಆದ್ದರಿಂದ ಆ ಪ್ರದೇಶದ ರೈತರು ರಿಸರ್ಚ್ ಸ್ಟೇಷನ್‌ನಲ್ಲಿ ತಯಾರುಮಾಡಿದಂತಹ ಜೋಳ, ಸಜ್ಜೆ ಈ ಬೀಜಗಳನ್ನು ಒದಗಿಸುವುದಕ್ಕೆ ಪ್ರಯತ್ನಮಾಡಬೇಕೆಂದು ನಾನು ಸಚಿವರಲ್ಲಿ ವಿನಂತಿಮಾಡಿಕೊಳ್ಳುತ್ತೇನೆ. ನಮ್ಮಲ್ಲಿ ಹಿಂದಿನ ಒಕ್ಕಲುತನದ ಪದ್ಧತಿಯನ್ನು ಬಿಟ್ಟು ಆಧುನಿಕ ಪದ್ಧತಿಯ ಬೇಸಾಯವನ್ನು ಮಾಡತಕ್ಕವರು ಕೆಲವೇ ಜನ ಇದ್ದಾರೆ. ಒಕ್ಕಲುತನದ ವಿಷಯದಲ್ಲಿ ರೈತರು ಮಕ್ಕಳಿಗೆ ತರಬೇತಿಯನ್ನು ಕೊಡುವ ವ್ಯವಸ್ಥೆಯನ್ನು ಮಾಡಬೇಕು. ಅದಕ್ಕೋಸ್ಕರ ಟ್ರೈನಿಂಗ್ ಸ್ಕೂಲ್‌ಗಳನ್ನು ಅಲ್ಲಲ್ಲೇ ತೆರೆಯಬೇಕು ರೈತರಲ್ಲಿ ಚಿಕ್ಕವರು ಮತ್ತು ದೊಡ್ಡವರು ಎಲ್ಲರಿಗೂ ಕೂಡ ಆಧುನಿಕ ಪದ್ಧತಿಯ ವ್ಯವಸಾಯದ ವಿಷಯದಲ್ಲಿ ತರಬೇತಿಯನ್ನು ಕೊಡಬೇಕು. ಜಮಖಂಡಿಯಲ್ಲಿ ರೈತರು ಮಕ್ಕಳು ಒಂದು ಸೀಡ್ ಗ್ರೋಯರ್ಸ್ ಸೊಸೈಟಿಯನ್ನು ಮಾಡಿಕೊಂಡು ಅವರು ಅಲ್ಲಿ ನೂರು ಎಕರೆಗಳಲ್ಲಿ ಬೀಜವನ್ನು ಉತ್ಪತ್ತಿ ಮಾಡಿ ಅವರು ರೈತರಿಗೆ ಕೊಡುತಿದ್ದಾರೆ. ಅವರು ಅಲ್ಲಿ ಉತ್ಪತ್ತಿ ಮಾಡತಕ್ಕಂಥ ಬೀಜದಲ್ಲಿ ಒಂದು ಎಕರೆಗೆ 3 ಸಾವಿರ ರೂಪಾಯಿಗಳ ಆದಾಯ ಬರುತ್ತಿದೆ, ಎಂದು ನಾನು ಕೇಳಿದ್ದೇನೆ. ನಮ್ಮಲ್ಲಿಯೂ ಸಹ ಏತಕ್ಕೆ ಆ ರೀತಿ ಮಾಡಬಾರದು? ಅದರ ಟೆಕ್ನಿಕ್ ಏನಿದೆ ಎಂಬುದನ್ನು ತಿಳಿದುಕೊಳ್ಳಬೇಕು. ಅದಕ್ಕೋಸ್ಕರ ತರಬೇತಿ ಕೇಂದ್ರಗಳನ್ನು ತೆರೆದು ರೈತರಿಗೆ ತರಬೇತಿಯನ್ನು ಕೊಡಬೇಕು.

ಇನ್ನು ಇನ್‌ಸಿಕ್ಟಿಸೈಡ್ ವಿಷಯದಲ್ಲಿ ಹೇಳುವುದಾದರೆ, ಇದರಲ್ಲಿ ಅನೇಕ ಕ್ರಮಗಳಿವೆ. ಬೆಳೆಗಳಿಗೆ ಬರತಕ್ಕಂಥ ರೋಗಗಳಿಗೆ ಸರಿಯಾದ ಔಷಧಿಯನ್ನು ಉಪಯೋಗಿಸದೆ ಹೋದರೆ ಬೆಳೆಗಳು ಯಾರಿಗೂ ಕೈಗೆ ಸಿಕ್ಕುವುದಿಲ್ಲ. ಇನ್‌ಸಿಕ್ಟಿಸೈಡ್‌ಗೋಸ್ಕರ ರೈತನಿಗೆ ಕೊಡುತ್ತಿದ್ದ ಸಬ್ಸಿಡಿಯನ್ನು ಮುಂದಿನ ವರ್ಷದಿಂದ ಸರ್ಕಾರದವರು ಕೊಡುವುದಿಲ್ಲ ಎಂಬ ಕೂಗನ್ನು ನಾನು ಕೇಳಿದ್ದೇನೆ. ಆದ್ದರಿಂದ ಇನ್‌ಸಿಕ್ಟಿಸೈಡ್‌ಗೋಸ್ಕರ ಸರ್ಕಾರದವರು ಕೊಡುತ್ತಿದ್ದಂತಹ ಸಬ್ಸಿಡಿಯನ್ನು ಮುಂದುವರಿಸದೇ ಹೋದರೆ ರೈತರು ಔಷಧಿಯನ್ನು ತಂದು ಬೆಳೆಗಳಿಗೆ ಹೊಡೆಯುವುದಕ್ಕೆ ಸಾಧ್ಯವಿಲ್ಲ. ಈ ದೃಷ್ಟಿಯಿಂದ ರೈತನಿಗೆ ಕೊಡುತ್ತಿದ್ದ ಸಬ್ಸಿಡಿಯನ್ನು ನಿಲ್ಲಿಸಬಾರದು ಎಂದು ನಾನು ಹೇಳುತ್ತೇನೆ.

ಇನ್ನು ತುಂಗಭದ್ರಾ ನೀರಾವರಿ ಪ್ರದೇಶದಲ್ಲಿರುವ ಲೆಫ್ಟ್‌ಬ್ಯಾಂಕ್ ಕೆನಾಲ್ ಪದ್ರೇಶದಲ್ಲಿ $5\frac{1}{2}$ ಲಕ್ಷ ಎಕರೆ ಇದೆ. ಅಲ್ಲಿ ಸಿಂಧನೂರಿನ ಹತ್ತಿರ ಡ್ರೈಕಂವೆಟ್ ಕಲ್ಟಿವೇಷನ್ ಆಗತಕ್ಕ ವಿಶಾಲವಾದ ಬಯಲು ಪ್ರದೇಶವಿದೆ. ಅದನ್ನು ಸಾಗುಮಾಡಿಲ್ಲ ಎನ್ನುವ ಕೂಗು ಎಲ್ಲರಿಗೂ ಗೊತ್ತಿದೆ. ಅಲ್ಲಿ ಒಂದು ಸೀಡ್ ಫಾರವ್ ಮಾಡುತ್ತೇವೆಂದು ಹಿಂದೆ ಮಾನ್ಯ ಮುಖ್ಯಮಂತ್ರಿಗಳು ಹೇಳಿದ್ದರು. ಆದರೆ ಅದನ್ನೂ ಇನ್ನೂ ಅಲ್ಲಿ ಮಾಡಿಲ್ಲ. ಆದ್ದರಿಂದ ಸರ್ಕಾರದವರು ದೊಡ್ಡಮನಸ್ಸುಮಾಡಿ ಅದನ್ನು ಕಾರ್ಯಗತ ಮಾಡಿದರೆ ಅಲ್ಲಿ ಹಾಳಾಗುತ್ತಾ ಇರತಕ್ಕ ಜಮೀನಿನಲ್ಲಿ ಉತ್ಪತ್ತಿಮಾಡಬಹುದು.

ಇನ್ನು ಫರ್ಟಿಲೈಜರ್ಸ್ ವಿಷಯದಲ್ಲಿ ಅನೇಕ ಜನ ಮಾನ್ಯ ಸದಸ್ಯರು ಹೇಳಿದ್ದಾರೆ. ಫರ್ಟಿಲೈಜರ್ಸ್ ಮತ್ತು ಫಾಸ್ಪೇಟ್ ಸರಿಯಾಗಿ ಸಿಕ್ಕುತ್ತಿಲ್ಲ. ಆದ್ದರಿಂದ ಅದನ್ನು ಇಂಡಿಯಾ ಸರ್ಕಾರದಿಂದ ತರಿಸುವುದಕ್ಕೆ ಪ್ರಯತ್ನಮಾಡಬೇಕು. ಈಗ ನಮ್ಮಲ್ಲಿ ಏನು ಮೆನ್ಯೂರ್ ಉತ್ಪತ್ತಿಯಾಗುತ್ತಿದೆಯೋ ಅದನ್ನು ಇನ್ನೊಂದು ಕಡೆಗೆ ಹೋಗದಂತೆ ತಡೆಗಟ್ಟಬೇಕು. ತುಂಗಭದ್ರಾ ಏರಿಯಾದಲ್ಲಿರತಕ್ಕ ಹೊಸಪೇಟೆಯಲ್ಲಿ ತಯಾರಾಗತಕ್ಕ 7 ಲಕ್ಷಟನ್ ಮೆನ್ಯೂರ್ ಬೇರೆ ಕಡೆ ಹೋಗುತ್ತಿದೆ ಎಂದು ನಾನು ಕೇಳಿದ್ದೇನೆ. ಆದ್ದರಿಂದ ಅದು ಬೇರೆ ಸ್ಟೇಟಿಗೆ ಹೋಗದಂತೆ ತಡೆಗಟ್ಟಬೇಕು. ಇಷ್ಟು ಹೇಳಿ ಮಾನ್ಯ ಅಧ್ಯಕ್ಷರು ನನಗೆ ಮಾತನಾಡುವುದಕ್ಕೆ ಅವಕಾಶವನ್ನು ಕೊಟ್ಟಿದ್ದಕ್ಕಾಗಿ ಅವರಿಗೆ ವಂದಿಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

# ಆರೋಗ್ಯ

**ಶ್ರೀಮತಿ ಬಸವರಾಜೇಶ್ವರಿ:** ಅನೇಕ ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯರ ಕೊರತೆ ಇದೆ. ಕೆಲವಡೆ ಎರಡು–ಮೂರು ವರ್ಷಗಳಿಂದ ವೈದ್ಯರ ಮುಖದರ್ಶನವೇ ಇಲ್ಲ. ಇದು ಸರ್ಕಾರದ ಗಮನಕ್ಕೆ ಬಂದಿದೆಯೇ?.

**ಶ್ರೀ ನಾಗಪ್ಪ ಆಳ್ವಾ:** ಖಂಡಿತ ಸರ್ಕಾರದ ಗಮನಕ್ಕೆ ಬಂದಿದೆ. ಆ ಕ್ರಮಕ್ಕೆ ಸಲಹೆ ಮಾಡಲಾಗಿದೆ.

**ಶ್ರೀಮತಿ ಬಸವರಾಜೇಶವರಿ:** ತಮ್ ಪ್ರತಿಕ್ರಿಯೆಯಲ್ಲಿ ಸಚಿವರು, ವ್ಯದ್ಯರ ಕೊರತೆ ಇರುವ ಕಡೆಗಳಲ್ಲಿ ಉಸ್ತುವಾರಿ ವೈದ್ಯರ ವ್ಯವಸ್ಥೆ ಮಾಡಲಾಗಿದೆ ಎಂದರು. ಆದರೆ ವ್ಯವಸ್ಥೆ ಕೇವಲ ತಾಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಮಾತ್ರ ಆಗಿದೆಯೋ ಅಥವಾ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೂ ವಿಸ್ತರಿಸಲಾಗಿದೆಯೋ ?

**ಶ್ರೀ ನಾಗಪ್ಪ ಆಳ್ವಾ:** ಅಂಥ ವ್ಯವಸ್ಥೆ ಸದ್ಯಕ್ಕೆ ಸಾಧ್ಯವಾಗಿಲ್ಲ. ಮುಂದಿನ ದಿನಗಳಲ್ಲಿ ತಮ್ಮ ಪ್ರಶ್ನೆ ಆಧರಿಸಿ, ಸಣ್ಣ–ಮಟ್ಟ ಆರೋಗ್ಯ ಘಟಕಗಳಿಗೂ ಉಸ್ತುವಾರಿ ವೈದ್ಯರ ಸೇವೆ ವಿಸ್ತರಿಸಲಾಗುವುದು.

**ಶ್ರೀ ಆರ್.ಎಸ್.ಹೆಗಡೆ:** 'ಸಾಮಾನ್ಯ ಭರ್ತಿ ನಿಯಮಾವಳಿ' ವ್ಯದ್ಯರ ಕೊರತೆಯನ್ನು ಹೇಗೆ ಸರಿದೂಗಿಸಬಲ್ಲದು?

**ಶ್ರೀ ನಾಗಪ್ಪ ಆಳ್ವಾ:** ಅದು ವ್ಯದ್ಯರ ಭರ್ತಿ ವಿಷಯದಲ್ಲಿ ನಮಗಷಗಟೇ ನೆರವಾಗುತ್ತದೆ.

**ಶ್ರೀ ಜೆ.ಬಿ ಶಂಕರ್ ರಾವ್:** ಆರ್ಥಿಕ ವರ್ಷ ಕೊನೆಗೊಳ್ಳು ಇನ್ನೂ ತಕ್ಕಷ್ಟು ಸಮಯಾವಕಾಶ ಇದೆ. ಇದುವರೆಗೆ ನಮಗೆ ಸಾಮಗ್ರಿಗಳ ಕೊರತೆ ಇತ್ತು ಇದೀಗ ಆ ಕೊರತೆ ನೀಗಿದೆ. ಸಾಮಗ್ರಿ ಸಭ್ಯವಾಗಿವೆ. ಪರಿಸ್ಥಿತಿ ನಿಧಾನವಾಗಿ ಸುಧಾರಿಸುತ್ತಿದೆ. ಸ್ಥಗಿತಗೊಂಡಿದ್ದ ಕೆಲಸ ಕೈಗೆತ್ತಿಕೊಂಡಿದ್ದೇವೆ.

**ಶ್ರೀ ಜೆ.ಬಿ ಶಂಕರ್ ರಾವ್:** ಸಂಗ್ರಹಿತ ಸಾಮಗ್ರಿಗಳ ರಕ್ಷಣೆಗೆ ನಾವು ಶಕ್ತಿಮೀರಿ ಪ್ರಯತ್ನಿಸುತ್ತೇವೆ.

**ಶ್ರೀ ಆರ್.ಎಂ. ದೇಶಾಯಿ:** ಕಾಮಗಾರಿಯ ಕೆಲವು ಮಾಹಿತಿಗಾಗಿ ನಾವು ನೇರ ವಿದ್ಯುತ್ ಇಲಾಖೆಯಲ್ಲಿ ವಿಚಾರಿಸಿದವು. ಅಲ್ಲಿನ ಅಧಿಕಾರಿಗಳಿಂದ ಭಿನ್ನ ಭಿನ್ನ ಉತ್ತರ ಲಭ್ಯವಾಗಿದೆ. ಅವರಿಂದ ದೊರೆತ ಮಾಹಿತಿ ಪ್ರಕಾರ, ಯಾವುದೇ ನಿಶ್ಚಿತ ಗುರಿ ಹಾಗೂ ಯೋಜನೆ ಇಲ್ಲ ಅನ್ನುವುದು ಸ್ಪಷ್ಟವಾಗಿದೆ. ಅದರಲ್ಲಿ ನಿಜಾಂತ ಇಲ್ಲವೇ?

**ಮಾನ್ಯ ಸಭಾಧ್ಯಕ್ಷರು:** ಅವರು ಭಾರೀ ವೇಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಆದ್ದರಿಂದ ಒಬ್ಬರಿಗೆ ತಿಳಿದ ಸಂಗತಿ ಇನ್ನೊಬ್ಬರಿಗೆ ತಿಳಿಯಲಾಗದ ಗೊಂದಲ ನಿರ್ಮಾಣವಾಗಿರಬಹುದು.

**ಶ್ರೀ ಎಸ್. ನಿಜಲಿಂಗಪ್ಪ (ಮುಖ್ಯಮಂತ್ರಿ)**: ಹೌದು, ಅದೇ ನಿಜಾಂಶ. ಕಾರ್ಯಕ್ಷೇತ್ರದ ವ್ಯಾಪ್ತಿ ವಿಶಾಲವಾಗಿದೆ. ಅದು ಆವರಿಸಿರುವ ವಲಯ ವ್ಯಾಪ್ತಿ ಬೃಹದಾಕಾರದ್ದಾಗಿದೆ. ಪರಿಸ್ಥಿತಿ, ಯಾವ ಸಮಯಕ್ಕೆ ಏನು ಮಾಡಲಾಗುತ್ತಿದೆ ಎಂದು ಲೆಕ್ಕಾ ಇಡುವುದು ಸ್ವಲ್ಪ ಕಷ್ಟದ ಕೆಲಸವೇಸರಿ.

**ಶ್ರೀ ಜೆ.ಪಿ.ಸರ್ವೇಶ್**: ಸೇಡಂ ತಾಲೂಕಿನ ಗ್ರಾಮಗಳನ್ನು ಕಾಡುತ್ತಿರುವ ವಿದ್ಯುತ್ ಸಮಸ್ಯೆ ನಿವಾರಿಸಲು, ಸರ್ಕಾರ ಅಗ್ರ ನೀಡಲು ಸಾಧ್ಯವೆ?

**ಶ್ರೀ ಜೆ.ಬಿ. ಶಂಕರ್ ರಾವ್**: ಈ ಸಲಹೆಯನ್ನು ಸರ್ಕಾರ ಸಹನುಭೂತಿಯಿಣದ ಪರಿಶೀಲಿಸುತ್ತದೆ.

**ಶ್ರೀಮತಿ ಬಸವರಾಜೇಶ್ವರಿ**: ರಾಯಚೂರು ಜಿಲ್ಲೆಯ ಎಷ್ಟು ಹಳ್ಳಿಗಳಿಗೆ ಉನ್ನೂ ವಿದ್ಯುತ್ ಕಲ್ಪಿಸಬೇಕಾದುದ್ದು ಬಾಕಿ ಇದೆ ಅನ್ನುವುದನ್ನು ನಾನು ತಿಳಿದುಕೊಳ್ಳಲು ಸಾಧ್ಯವೆ?

**ಶ್ರೀಮತಿ ಬಸವರಾಜೇಶ್ವರಿ (ಮಾನ್ವಿ).**– ಮಾನ್ಯ ಅಧ್ಯಕ್ಷರೆ, ನಮ್ಮ ಮುಂದೆ ಇರತಕ್ಕಂಥ ಬೇಡಿಕೆಗಳನ್ನು ಅನುಮೋದಿಸುತ್ತ ಕೆಲವು ಸಲಹೆಗಳನ್ನು ಕೊಡಬೇಕೆಂದು ಅಪೇಕ್ಷೆ ಪಟ್ಟಿದ್ದೇನೆ. ಮಾನ್ಯ ಮಂತ್ರಿಗಳ ಹೇಳಿಕೆ ಕೊಟ್ಟಿರುವ ಪ್ರಕಾರ ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಯೊಳಗೆ ಸುಮಾರು ನೂರು ಟ್ರಾಕ್ಟರುಗಳನ್ನು ಹೈರ್ ಪರ್ಚೇಸ್‌ಸಿಸ್ಟಂ ಮೇಲೆ ಹಂಚುತ್ತಾರೆ 30 ಟ್ರಾಕ್ಟರುಗಳನ್ನು ಇಲಾಖೆಗೆ ತೆಗೆದುಕೊಳ್ಳುತ್ತಾರೆ. ಈಗ ರಾಯಚೂರಿನಲ್ಲಿ ಡೆವಲಪ್‌ಮೆಂಟ್ ಲೋನ್ಸ್ ಕೊಟ್ಟು ಸುಮಾರು ನೂರು ಟ್ರಾಕ್ಟರುಗಳನ್ನು ರೈತರೇ ಖರೀದಿ ಮಾಡಿದ್ದಾರೆ. ಫುಡ್ ಕಮಿಷನ್‌ನಿಂದ ಹತ್ತಿಪ್ಪತ್ತು ಟ್ರಾಕ್ಟರುಗಳನ್ನು ಖರೀದಿ ಮಾಡಿದ್ದಾರೆ. ಇಲಾಖೆಯವರು ಕೂಡ ಕೆಲವು ಟ್ರಾಕ್ಟರುಗಳನ್ನು ಈಗಾಗಲೇ ಖರೀದಿ ಮಾಡಿದ್ದಾರೆ. ಇಷ್ಟು ಟ್ರಾಕ್ಟರುಗಳು ಒಂದು ಜಿಲ್ಲೆಯಲ್ಲಿ ಕೆಲಸ ಮಾಡುವಾಗ ಅಲ್ಲಿ ಒಂದು ಸರ್ವಿಸ್ ಸ್ಟೇಷನ್ ಇಲ್ಲದೆ ಇರುವುದರಿಂದ ಟ್ರಾಕ್ಟರುಗಳಿಗೆ ಏನಾದರೂ ತೊಂದರೆ ಬಂದರೆ ಅದನ್ನು ಹೇಗೆ ಸರಿಪಡಿಸುವುದು? ಈಗ ಅಲ್ಲಿ ಒಂದು ಖಾಸಗಿಯವರು ವರ್ಕ್‌ಷಾಪ್ ಇದೆ. ಆದರೂ ರೈತರಿಗೆ ಬಹಳ ತೊಂದರೆಯಾಗುತ್ತ ಇದೆ, ಕಾರಣ ರಾಯಚೂರಿನಲ್ಲಿ ಒಂದು ಡಿಪಾರ್ಟ್‌ಮೆಂಟ್ ಸರ್ವಿಸ್ ಸ್ಟೇಷನ್ ಕೊಡಲೇಬೇಕು ಎಂದು ಹೇಳುತ್ತೇನೆ.

ನಮ್ಮ ಭಾಗದಲ್ಲಿ ಅಭಿವೃದ್ಧಿಯಾಗುವ ಸಲುವಾಗಿ ಮುಂದೆ ತೊಂದರೆ ಬೇಡ ಎಂದು ಒಂದು ಸಲಹೆಕೊಡುತ್ತೇನೆ. ಪಬ್ಲಿಕ್‌ವರ್ಕ್ಸ್ ಇಲಾಖೆಯವರು ನೀರು ಕೊಡುತ್ತಾರೆ. ತಾವೂ ಕೂಡ ಭೂಮಿಯನ್ನು ಹದಮಾಡಲಿಕ್ಕೆ, ಒಂದು ಲೆವಲ್ ಮಾಡುವ ಸಲುವಾಗಿ 30 ಟ್ರಾಕ್ಟರುಗಳನ್ನು ನಮ್ಮ ಜಿಲ್ಲೆಗೆ ಎಂದರೆ ಸಿಂಧೂನೂರು ತಾಲ್ಲೂಕಿಗೆ 10, ಮಾನ್ವಿ ತಾಲ್ಲೂಕಿಗೆ 10, ಗಂಗಾವತಿ ತಾಲ್ಲೂಕಿಗೆ 10 ಈ ಪ್ರಕಾರ ಕೊಟ್ಟರೆ ಜಮೀನನ್ನು ಲೆವಲ್ ಮಾಡುವುದಕ್ಕೆ ಅನುಕೂಲವಾಗಿ ರೈತರು ಆಹಾರ ಹೆಚ್ಚು ಬೆಳೆಯಲಿಕ್ಕೆ ಅನುಕೂಲವಾಗುತ್ತದೆ ಎಂದು ಸರ್ಕಾರದವರನ್ನು ಕೇಳಿಕೊಂಡಿದ್ದೇನೆ. ಅದೇ ಪ್ರಕಾರವಾಗಿ ಈ ಪ್ರಸಂಗಗಳಲ್ಲಿಯೂ ಕೇಳಿಕೊಳ್ಳುತ್ತೇನೆ. ಸರ್ಕಾರದವರು ಇದಕ್ಕೆ ಗಮನಕೊಟ್ಟು ನಮ್ಮ ಬೇಡಿಕೆಯನ್ನು ಈಡೇರಿಸಿ ಆ ಭಾಗದ ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ,ಮಾಡಬೇಕೆಂದು ಈ ಸಮಯದಲ್ಲಿ ಕೇಳಿಕೊಳ್ಳುತ್ತೇನೆ.

ರಷ್ಯನ್ ಬುಲ್‌ಡೋಜರುಗಳು ಬಂದಿದ್ದು ಐದಾರು ತಿಂಗಳಿನಿಂದ ಹಾಗೆಯೇ ನಿಂತಿವೆ. ನಮ್ಮ ಭಾಗದಲ್ಲಿ ದಪ್ಪಿ ಇರಿಗೇಷನ್ ಮಾಡತಕ್ಕ ಜಮೀನು ಇವೆ. ಅಲ್ಲಿರತಕ್ಕ

ಟ್ರಾಕ್ಟರುಗಳು ಸರಿಯಾಗಿ ಕೆಲಸ ಮಾಡುತ್ತ ಇಲ್ಲ. ಈಗ ಬೇಸಿಗೆ ಕಾಲ. ಈ ಸೀಸನ್ ಬಿಟ್ಟರೆ ಮುಂದೆ ಮಳೆಗಾಲ ಬರುವುದರಿಂದ ಆಗ ಕೆಲಸ ಮಾಡುವುದಕ್ಕೆ ಬರುವುದಿಲ್ಲ. ನಾವು ಪದೇ ಪದೇ ಕೇಳುತ್ತಿದ್ದರೂ ಏನು ಹೇಳುತ್ತಾರೆಂದರೆ: ಅದಕ್ಕೆ ಸ್ಪೆಷಲ್ ಟೈಪ್ ಟ್ರೇಲರ್ಸ್ ಬೇಕು, ಅವು ಇಲ್ಲದೆ ಇರುವುದರಿಂದ ಏನು ಮಾಡುವುದಕ್ಕೆ ಆಗುತ್ತಿಲ್ಲ, ನಾವು ಪಬ್ಲಿಕ್ ವರ್ಕ್ಸ್ ಇಲಾಖೆಯನ್ನು ಕೇಳಿದ್ದೇವೆ, ಅವರು ಇನ್ನೂ ಕೊಟ್ಟಿಲ್ಲ. ಹೀಗೆ ಹೇಳುತ್ತಾರೆ. ಈ ಸೀಸನ್ ಆದಮೇಲೆ ಮುಂದೆ ಬುಲ್‌ಡೋಜರ್ ಕೊಟ್ಟರೂ ಅದರಿಂದ ಉಪಯೋಗವಾಗುವುದಿಲ್ಲ ಎಂದು ಅವರಿಗೆ ತಿಳಿಸಲಿಚ್ಛಿಸುತ್ತೇನೆ. ಆದುದರಿಂದ ಇದರ ಕಡೆಗೆ ಲಕ್ಷ್ಯ ಕೊಟ್ಟು ಟ್ರಾಕ್ಟರ್ ಮತ್ತು ಬುಲ್‌ಡೋಜರನ್ನು ನಮ್ಮ ರಾಯಚೂರು ಜಿಲ್ಲೆಗೆ ಒಂದೊಂದು ತಾಲ್ಲೂಕಿಗೆ ಎರಡೆರಡು ಕೊಡಬೇಕು ಎಂದು ಸರ್ಕಾರದವರನ್ನು ಕೇಳಿಕೊಳ್ಳುತ್ತೇನೆ.

ಈ ವರ್ಷ ಸಾವಿರಾರು ಎಕರೆಯಲ್ಲಿ ಲಕ್ಷ್ಮಿ ಹತ್ತಿ ಮತ್ತು 120 ಸಿಒ 2 ಹತ್ತಿಯನ್ನು ಹೆಚ್ಚಾಗಿ ಹಾಕಿದ್ದಾರೆ. ಆದರೆ ಯಾವ ಕಾರಣದಿಂದಲೋ ಇವತ್ತು ಹತ್ತಿ ಬೆಳೆ ತುಂಬ ಹಾಳಾಗುತ್ತದೆ. 120 ಸಿಒ 2 ಹತ್ತಿಗೆ ರೋಗ ಬಂದು ರೈತರಿಗೆ ಬಹಳ ಹಾನಿಯಾಗುತ್ತಿದೆ. ಇದರ ಬಗ್ಗೆ ಸರ್ಕಾರದವರು ಹೆಚ್ಚಿನ ನಿಗಾ ಕೊಟ್ಟು ರೀಸರ್ಚ್ ಮಾಡಬೇಕು ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಕಾಟನ್ ಕಂಟ್ರೋಲ್ ಮಾಡುವುದು ಉತ್ತಮ. ಸಾವಿರಾರು ಎಕರೆಯಲ್ಲಿ ಬೆಳೆಯತಕ್ಕ ಪ್ರದೇಶದಲ್ಲಿ ಒಂದೆರಡು ಎಕರೆ ಮಾಡಿದರೆ ಉಪಯೋಗವಿಲ್ಲ. ರಾಲೀಸ್ ಇಂಡಿಯಾ ಸಂಸ್ಥೆಯವರು ಒಂದು ರಿಪೋರ್ಟನ್ನು ಕೊಟ್ಟಿದ್ದಾರೆ. ಅವರು ಬಿಜಾಪುರ, ಬೆಳಗಾಂ, ರಾಯಚೂರು ಮತ್ತು ಧಾರವಾಡ ಜಿಲ್ಲೆಗಳಲ್ಲಿ ಸರ್ವೆ ಮಾಡಿದ್ದಾರೆ. ಕ್ಯಾಪ್ಟನ್ ಲೀಡರ್ಾನ್ ಎಂಬ ಒಬ್ಬ ಸ್ಪೆಷಲಿಸ್ಟ್ ಇನ್‌ಹೆಲಕಾಪ್ಟರ್ ಸ್ಪ್ರೇಯಿಂಗ್ ಅವರು ಈ ಜಿಲ್ಲೆಗಳಲ್ಲಿ ಸುಮಾರು 20 ಸಾವಿರ ಎಕರೆ ಜಮೀನು ಹತ್ತಿ ಬೆಳೆಯತಕ್ಕ ಪ್ರದೇಶಗಳನ್ನು ಸರ್ವೆ ಮಾಡು ಒಂದು ಎಕರೆಗೆ ಎಷ್ಟು ಖರ್ಚು ತಗಲುತ್ತದೆ ಎನ್ನುವ ಅಭಿಪ್ರಾಯವನ್ನು ಸರ್ಕಾರದ ಮುಂದೆ ಇಟ್ಟರು. ಅವರು ಹೇಳಿರುವ ಪ್ರಕಾರ ಒಂದು ಎಕರೆಗೆ ಎರಡು ಸಲ ಸ್ಪ್ರೇಮಾಡುವುದಕ್ಕೆ 32 ರೂಪಾಯಿ ಖರ್ಚು ಬೀಳುತ್ತದೆ. ಅದನ್ನು ಈ ಪ್ರಕಾರ ವಿಂಗಡಿಸಿದ್ದಾರೆ. ಫ್ಲೈಯಿಂಗ್ ಚಾರ್ಜಸ್ 20 ರೂಪಾಯಿ, ಮೆಡಿಸಿನ್ ಚಾರ್ಜಸ್ ಹನ್ನೊಂದೂವರೆ ರೂಪಾಯಿ ಆಗಬಹುದು ಎಂದು ತಿಳಿಸಿದ್ದಾರೆ. ಔಷಧಿಗೆ ಆಗುವ ಖರ್ಚಿನಲ್ಲಿ ನಮ್ಮ ಸರ್ಕಾರದವರು ಅರ್ಧ ಭಾಗ ಸಬ್ಸಿಡಿ ಕೊಡುತ್ತಿರುವುದನ್ನು ಮುಂದುವರಿಸಬೇಕು. 20 ರೂಪಾಯಿ ಫ್ಲೈಯಿಂಗ್ ಚಾರ್ಜಸ್‌ನಲ್ಲಿ ಕೇಂದ್ರ ಸರ್ಕಾರದವರು ನೂರಕ್ಕೆ 75 ಭಾಗ ಸಬ್ಸಿಡಿ ರೂಪದಲ್ಲಿ ಇತರ ರಾಜ್ಯಗಳಿಗೆ ಕೊಡುತ್ತಿದ್ದಾರೆಂದು ನಮಗೆ ತಿಳಿದು ಬಂದಿದೆ. ಎರಡೂ ಸಬ್ಸಿಡಿಗಳು ದೊರೆಯುವುದಾದರೆ ಒಂದು ಎಕರೆಗೆ ಹತ್ತೂವರೆ

ರೂಪಾಯಿ ಬೀಳುತ್ತದೆ. ಇದು ರೈತನಿಗೆ ಭಾರವಾಗುವುದಿಲ್ಲ. ರೋಗ ಬಂದ ಮೇಲೆ ಅದನ್ನು ನಿವಾರಣೆ ಮಾಡುವುದಕ್ಕಿಂತಲೂ ಅದು ಬಾರದೆ ಇರುವ ಹಾಗೆ ಪ್ರಿವೆಂಟಿವ್ ಮೆಷರ್ಸ್ ತೆಗೆದುಕೊಳ್ಳುವುದು ಒಳ್ಳೆಯದು. ರೈತರು ಇದಕ್ಕೆ ತಮ್ಮ ಅನುಮತಿಯನ್ನು ಕೊಡುವುದಕ್ಕೆ ಸಿದ್ಧರಾಗಿದ್ದಾರೆ. ಈ ಯೋಜನೆಯನ್ನು ತೆಗೆದುಕೊಳ್ಳುವ ಕಾಲಕ್ಕೆ ರೈತರಿಂದ ಔಷಧಿ ಸ್ಪ್ರೇಮಾಡುವುದಕ್ಕೆ ತಗಲುವ ಖರ್ಚನ್ನೂ ಪಡೆಯುವಂತೆ ಮಾಡಬೇಕೆಂದು ಸರ್ಕಾರಕ್ಕೆ ಈ ಸಮಯದಲ್ಲಿ ನಾನು ಸಲಹೆ ಮಾಡುತ್ತೇನೆ. ಈಗ ಹತ್ತಿ ಬೆಳೆ ಪೂರಾ ನಷ್ಟವಾಗಿ ರೈತರಿಗೆ ತುಂಬ ಅನ್ಯಾಯವಾಗುತ್ತಿದೆ. ಕೇವಲ ಎರಡು ಪಿಕಿಂಗ್ ಆಗಿ ಮೂರನೆಯ ಪಿಕಿಂಗ್ ಆಗುವಷ್ಟರಲ್ಲಿ ಫೇಲಾಗಿಹೂವು, ಮೊಗ್ಗು ಇರುವಾಗ ರೋಗ ಬಂದು ನಷ್ಟವಾಗುವುದನ್ನು ತಪ್ಪಿಸಲು ಇಲಾಖೆಯ ಮೂಲಕ ಪ್ರಯತ್ನ ಮಾಡಬೇಕೆಂದು ನಾನು ಹೇಳುತ್ತಿದ್ದೇನೆ.

ಫರ್ಟಿಲೈಸರ್ ಬಗ್ಗೆ ಶ್ರೀಮಾನ್ ಹುಚ್ಚಮಾಸ್ತಿಗೌಡರು ಹೇಳಿದ್ದಾರೆ. ಇದನ್ನು ಕೊಳ್ಳುವುದಕ್ಕೆ ರೈತರಿಗೆ ಬಹಳ ಅನಾನುಕುಲವಾಗಿದೆ ಎಂದು ಅವರು ಹೇಳಿದರು. ಇದು ತಪ್ಪಬೇಕು. ನಮಗೆ ಸೂಪರ್ ಫಾಸ್ಫೇಟ್ ಬೇಕು. ಇದಕ್ಕೆ ಶೇಕಡ 25ರಷ್ಟು ರಿಯಾಯಿತಿ ಕೊಡಬೇಕು ಎಂದು ಸರ್ಕಾರದ ಅಭಿಪ್ರಾಯವಿದೆ. ಇದಕ್ಕೆ ಒಂದು ಕಾರ್ಯಕ್ರಮವನ್ನು ಹಾಕಿಕೊಂಡು ಈ ರಿಯಾಯಿತಿಯನ್ನು ಕೊಟ್ಟು ರೈತರಿಗೆ ಸಹಾಯ ಮಾಡಬೇಕೆಂದು ಹೇಳುತ್ತೇನೆ.

ಸಾಯಿಲ್ ಕನ್‌ಸರ್ವೇಷನ್ ಬಗ್ಗೆ ಹೇಳಬೇಕಾದರೆ ಎಲ್ಲ ಕಡೆಯೂ ಈ ಕೆಲಸ ನಡೆಯುತ್ತಿದೆ. ಎಂದು ಹೇಳುತ್ತಾರೆ. ಆದರೆ ಇದಕ್ಕೆ ಸಾಕಷ್ಟು ಸಿಬ್ಬಂದಿ ಇಲ್ಲ ಒಂದು ಜಿಲ್ಲೆಗೆ ನಾಲ್ಕೈದು ಜನ ಕೆಲಸ ಮಾಡುತ್ತಿದ್ದಾರೆ. ಇದರಿಂದ ಕೆಲಸ ಬೇಗ ಆಗಲು ಸಾಧ್ಯವಿಲ್ಲವಾಗಿದೆ. ಈಗ ಕುಷ್ಟಗಿ ತಾಲ್ಲೂಕಿನಲ್ಲಿ ಬರಗಾಲ ಪ್ರದೇಶವೆಂದು ಡಿಕ್ಲೇರ್ ಮಾಡಿ ಕೆಲಸ ಪ್ರಾರಂಭವಾಗಿದೆ. ಆದರೆ ಅಲ್ಲಿ ಕೂಲಿ ಜನರು ಸರಿಯಾಗಿ ಬರುತ್ತಿಲ್ಲ. ಅವರಿಗೆ ಕೂಲಿ ಸರಿಯಾಗಿ ಸಿಕ್ಕುವುದಿಲ್ಲವೆಂದು ಅವರು ಬರುತ್ತಿಲ್ಲ. ಇದರ ಸಲುವಾಗಿ ಈಗ ಏನು ಪ್ರೋಸೀಜರ್ ಇದೆ, ಅದರಿಂದ ರೈತರಿಗೆ ತುಂಬಾ ತ್ರಾಸವಾಗುತ್ತದೆ ಮತ್ತು ವಿಳಂಬವಾಗುತ್ತದೆ. ಆದುದರಿಂದ ಪ್ರೋಸೀಜರ್ ಏನಿದೆ ಅದನ್ನು ಕೂಡಲೇ ಬದಲಾಯಿಸಿ ರೈತರು ಅವರ ಭೂಮಿಯಲ್ಲಿ ಒಡ್ಡು ಹಾಕುವುದಕ್ಕೆ ಒಪ್ಪಿಗೆಯನ್ನು ಕೊಟ್ಟು ಕೂಡಲೇ ಕೆಲಸ ತೆಗೆದುಕೊಳ್ಳುವಂತೆ ಮಾಡಬೇಕೆಂದು ಈ ಸಮಯದಲ್ಲಿ ನಾನು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ.

ರಾಯಚೂರು ಜಿಲ್ಲೆಯ ಗಂಗಾವತಿ ಕೊಪ್ಪಳ ತಾಲ್ಲೂಕುಗಳಲ್ಲಿ ಪ್ಯಾಕೆಜ್‌ಗ ಪ್ರೋಗ್ರಾಂ ಕೆಲಸ ಪ್ರಾರಂಭವಾಗಿದೆ. ಈ ಸಂರ್ಭದಲ್ಲಿ ಒಂದು ವಿಷಯ ಹೇಳಬೇಕು ಎಂದರೆ ಇವತ್ತು ಮಾನ್ವಿಯಲ್ಲಿ ಸಾವಿರಾರು ಎಕರೆಯಲ್ಲಿ ಸೇಂಗಾ ಹಾಕಿದ್ದಾರೆ. ಬೆಳೆ ಬಹಳ ಚೆನ್ನಾಗಿ ಬಂದಿದೆ. ಸಾವಿರಾರು ಎಕರೆ ಬೆಳೆಯತಕ್ಕ ಪ್ರದೇಶದಲ್ಲಿ ಏನಾದರೂ ರೋಗ ರುಜಿನಗಳು ಬಂದರೆ ಬಹಳ ಲುಕ್ಸಾನಾಗುತ್ತದೆ. ಅಲ್ಲಿರತಕ್ಕ ಫೀಲ್ಡ್ ಡೆಮಾನ್‌ಸ್ಟೇಟರ್ಸ್ ಸಾವಿರಾರು ಎಕರೆಯಲ್ಲಿ ಕೆಲಸ ಮಾಡುವುದಕ್ಕೆ ಆಗುವುದಿಲ್ಲ. ಆದುದರಿಂದ ಒಬ್ಬ ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಆಫೀಸರನ್ನು ಮಾನ್ವಿ ಮತ್ತು ಸಿಂಧನೂರು ಭಾಗಗಳಿಗೆ ಪೋಸ್ಟ್ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಮಾನ್ವಿ ತಾಲ್ಲೂಕು ಕೆಂಪು ಮಣ್ಣಿನಿಂದ ಕೂಡಿದ ಭೂಮಿಯಾಗಿದೆ. ಇದು ಹಣ್ಣು ಹಂಪಲುಗಳನ್ನು ಬೆಳೆಯುವುದಕ್ಕೆ ಬಹಳ ಯೋಗ್ಯವಾಗಿದೆ. ಹಾರ್ಟಿಕಲ್ಚರಲ್ ಇಲಾಖೆಯವರು ತುಂಬ ಆಸಕ್ತಿ ವಹಿಸಿ ಅಲ್ಲಿ ರೈತರಿಗೆ ಬೇಕಾದಂಥ ಹಣ್ಣು ಹಂಪಲುಗಳನ್ನು ಬೆಳೆಸುವುದಕ್ಕೆ ಆಸ್ಪದ ಕೊಡಬೇಕು. ಕ್ಯಾಷ್ಯೂನಟ್ ಮುಂತಾದ ಗಿಡಗಳನ್ನು ಬೆಳೆಸುವ ಯೋಜನೆಯನ್ನು ಈ ಭಾಗಕ್ಕೆ ಮುಂದುವರಿಸಿದರೆ ಬಹಳ ಚೆನ್ನಾಗಿ ಹಣ್ಣು ಹಂಪಲು ಬೆಳೆಯುವುದಕ್ಕೆ ಅವಕಾಶವಾಗುತ್ತದೆಂದು ತಿಳಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಪ್ರಶ್ನೋತ್ತರಗಳು

6ನೇ ಅಧಿವೇಶನ ಸಂದರ್ಭದಲ್ಲಿ 1969ರಲ್ಲಿ ಮಹಿಳಾ ಮತ್ತು ಮಕ್ಕಳ ಶಿಕ್ಷಣ ಸಚಿವೆಯಾಗಿ ಮಾನ್ಯ ಸದಸ್ಯರುಗಳಿಗೆ ನೀಡಿರುವ ಉತ್ತರಗಳು ನೇರ ಮತ್ತು ಸರಳವಾಗಿದ್ದು ಎಲ್ಲಿಯೂ ನುಸುಳಿಕೊಳ್ಳುವ ಗೋಜಿಗೆ ಅವರು ಹೋಗುವುದಿಲ್ಲ.

**ಶ್ರೀ ಬಿ. ಗಂಗಣ್ಣ.**– ತಾವು ಒದಗಿಸಿಕೊಟ್ಟಿರುವ ಉತ್ತರದಲ್ಲಿ ನೇಮಿಸಿರತಕ್ಕ ಅಧಿಕಾರಿಗಳ ಕರ್ತವ್ಯವನ್ನು ವಿವರಿಸಿದ್ದೀರಿ. ಪ್ರತಿ ಜಿಲ್ಲೆಯಲ್ಲಿ ಯಾವಯಾವ ಅಪರಾಧಿಗಳಿಗೆ ಸಹಾಯ ಒದಗಿಸಿ ಕೊಡಬೇಕೆಂದು ರಿಪೋರ್ಟ್ ಕೊಟ್ಟಿದ್ದಾರೆ ಮತ್ತು ಬಿಡುಗಡೆಯಾಗಿರುವ ಸುಧಾರಿಸಿರುವ ಅಪರಾಧಿಗಳ ಪೈಕಿ ಹೆಂಗಸರು ಎಷ್ಟು ಮಕ್ಕಳು ಎಷ್ಟು ದಯವಿಟ್ಟು ತಿಳಿಸುತ್ತಿರಾ?

**ಶ್ರೀಮತಿ ಬಸವರಾಜೇಶ್ವರಿ.**– ಅಪರಾಧಿಗಳನ್ನು ವಿಚಾರ ಮಾಡಿ, ರಿಫಾರಮ್ ಆಗಿರತಕ್ಕವರ ಸಂಖ್ಯೆಯನ್ನು ಈಗಾಗಲೇ ಒದಗಿಸಿದೆ. ಇಲ್ಲಿಯವರೆಗೆ 2,201 ಕೇಸುಗಳನ್ನು ತನಿಖೆ ಮಾಡಿದ್ದಾರೆ. ಅಂದರೆ ಒಬ್ಬೊಬ್ಬ ಪ್ರೊಬೇಷನ್ ಆಫೀಸರ ಸರಾಸರಿ 117 ಕೇಸ್‌ಗಳನ್ನ ವಿಚಾರ ಮಾಡಿದ್ದಾರೆ, ಅದರಲ್ಲಿ ರಿಫಾರ್ಮ್ ಆಗಿತಕ್ಕವ್ವರ ಡಿಸ್ಟ್ರಿಕ್ಟವೈಸ್ ಪಟ್ಟಿಯನ್ನ ಈಗಾಗಲೇ ತಮ್ಮ ಮುಂದೆ ಇಡಲಾಗಿದೆ.

**ಶ್ರೀ ಬಿ. ಗಂಗಣ್ಣ.**– ಬಿಡುಗಡೆ ಅಗಿರತಕ್ಕ ಅಪರಾಧಿಗಳಲ್ಲಿ ಹೆಂಗಸರು ಮತ್ತು ಮಕ್ಕಳ ಸಂಖ್ಯೆ ಎಷ್ಟು ಎಂದು ಕೇಳಿದ್ದೇನೆ. ಜಿಲ್ಲಾವಾರು ಒದಗಿಸಿರತಕ್ಕ ಅಂಕಿಅಂಶಗಳಲ್ಲಿ ಎಷ್ಟು ಜನ ಹೆಂಗಸರು, ಎಷ್ಟು ಜನ ಗಂಡಸರು ಮತ್ತು ಎಷ್ಟು ಜನ ಮಕ್ಕಳು ಇದ್ದಾರೆ ಎನ್ನುವ ವಿವರಣೆ ಇಲ್ಲ. ಅದನ್ನು ದಯವಿಟ್ಟು ಕೊಡುತ್ತೀರಾ ?

**ಶ್ರೀಮತಿ ಬಸವರಾಜೇಶ್ವರಿ.**– ಅಂಥಾ ವಿವರಣೆ ಈಗ ನನ್ನ ಹತ್ತಿರ ಇಲ್ಲ, ತಮಗೆ ಅದನ್ನು ಅದಷ್ಟು ಜಲ್ದೀ ಒದಗಿಸುತ್ತೇನೆ.

**ಶ್ರೀ ಬಿ. ಗಂಗಣ್ಣ.**– ಈಗ ಕರ್ತವ್ಯ ನಿರ್ವಹಣೆ ಮಾಡುವ ಇಲಾಖೆಯ ನೇರವಾದ ಸಂಬಂಧ ಜೈಲು ಅಧಿಕಾರಿಗಳಿಗೆ ಒಳಪಡುತ್ತದೆ ಎಂದು ನಾನು ತಿಳಿದುಕೊಂಡಿದ್ದೇನೆ. ಅವರೂಕೂಡ ಈ ಬಗ್ಗೆ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಈ ಅಧಿಕಾರಿಗಳ ವ್ಯಾಪ್ತಿಯನ್ನು ಜೈಲು ಅಧಿಕಾರಿಗಳಿಗೆ ಒಳಪಡಿಸಬೇಕು ಎಂದು ಕೇಳಿದ್ದಾರೆ. ಈ ಅಧಿಕಾರಿಗಳನ್ನು ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟಿನಿಂದ ಜೈಲು ಇಲಾಖೆಗೆ ಬಿಡುಗಡೆ ಮಾಡಿಕೊಡುವುದಕ್ಕೆ ಸರ್ಕಾರದ ಪ್ರಯತ್ನ ಮಾಡುತ್ತದೆಯೇ?

**ಶ್ರೀಮತಿ ಬಸವರಾಜೇಶ್ವರಿ.–** ಅಂಥಾ ಅಭಿಪ್ರಾಯ ಸರ್ಕಾರದ ಮುಂದೆ ಇಲ್ಲ. ಅವರ ಮೂಲ ಉದ್ದೇಶಕ್ಕೆವಿರೋಧವಾಗಿ ಕೇಳಿದ್ದಾರೆ. ಆ ತರಹ ಸರ್ಕಾರದ ಅಭಿಪ್ರಾಯ ಪಟ್ಟಿಲ್ಲ ಮತ್ತು ಹಾಗೆ ಮಾಡುವುದಕ್ಕೆ ಆಗುವುದಿಲ್ಲ.

**ಶ್ರೀ ಎನ್. ಲೋಕಯ್ಯ ನಾಯಕ್.–** ಕೋರ್ಟ್ ಜಡ್ಜ್‌ಮೆಂಟ್ ಪ್ರಕಾರ ಜ್ಯುವನೈಲ್ ಅಫೆಂಡರ್ಸ್‌ನ್ನು ರಿಮ್ಯಾಂಡ್ ಹೋಮಿಗೆ ಸೇರಿಸಿದ ಮೇಲೆ ಅವರಿಗೆ ಪ್ರಾಯ ಬಂದನಂತರ ಕೋರ್ಟಿನವರು ನಿಗದಿ ಮಾಡಿದ ಅವಧಿ ಮುಗಿದ ನಂತರವೂ ಅವರನ್ನು ರಿಮ್ಯಾಂಡ್ ಹೋಮಿನಲ್ಲಿ ಇಟ್ಟುಕೊಂಡ ವಿಚಾರ ಸರ್ಕಾರದ ಗಮನಕ್ಕೆ ಬಂದಿಯೇ ?

**ಶ್ರೀಮತಿ ಬಸವರಾಜೇಶ್ವರಿ.–** ಆ ತರಹ ಜನರಲ್ ಇನ್‌ಸ್ಟಾನ್‌ಸಸ್ ಏನೂ ಇಲ್ಲ. ಮಾನ್ಯ ಸದಸ್ಯರು ಸ್ಪೆಸಿಫೀಕ್ ಇನ್‌ಸ್ಟೆನ್ ಹೇಳುತ್ತೀದ್ದಾರೆ. ಅದನ್ನು ಸರ್ಕಾರದ ಗಮನಕ್ಕೆ ತಂದರೆ ನೋಡಲಾಗುತ್ತದೆ. ಕ್ಲಾಸ್ 3 ಆಫೀಸರ್ಸ್ ಕೆಲವರು ಇದ್ದಾರೆ, ಕ್ಲಾಸ್ 2 ಆಫೀಸರ್ಸ್ ಕೆಲವರು ಇದ್ದಾರೆ

ಸಾಧಾರಣವಾಗಿ ಈಗ ಸಮಾಜ ಕಲ್ಯಾಣ ಇಲಾಖೆಯಿಂದ ಈ ಕೆಲಸಕ್ಕೆ ಸ್ಥಳೀಯ ಅಭ್ಯರ್ಥಿಗಳನ್ನು ತೆಗೆದುಕೊಂಡಿದ್ದೇವೆ. ಸ್ಪೆಷಲಿಸ್ಟ್ ಆದವರನ್ನು ಈಗ ತೆಗೆದುಕೊಂಡಿಲ್ಲ. ಮುಂದೆ ಕಾಯಂ ಅಭ್ಯರ್ಥಿಗಳನ್ನು ತೆಗೆದುಕೊಳ್ಳಬೇಕಾದಾಗ ಸೋಷಿಯಾಲಜಿಯನ್ನು ಓದಿದವರಿಗೆ ಪ್ರಾಶಸ್ತ್ಯವನ್ನು ಕೊಡಬೇಕೆಂಬ ಉದ್ದೇಶ ಇದೆ.

**ಶ್ರೀ ಎಂ. ಎಸ್ ಕೃಷ್ಣನ್.–** ಕೆಲವು ಕೈದಿಗಳನ್ನು ಸುಧಾರಿಸಲಾಗಿದೆ ಎಂದು ಹೇಳಿದ್ದೀರಿ. ಸ್ವಲ್ಪ ದಿವಸಗಳನಂತರ ಇದೇ ಕೈದಿಗಳೇ ಮತ್ತೇ ಅದೇ ಹವ್ಯಾಸಕ್ಕೆ ಇಳಿದಿರುವ ನಿದರ್ಶನಗಳು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀಮತಿ ಬಸವರಾಜೇಶ್ವರಿ.–** ಅಪರಾಧ ಮಾಡಿದ ಕೈದಿಗಳಿಗೆ ಸೂಕ್ತ ತಿಳಿವಳಿಕೆ ಕೊಟ್ಟು ಅವರು ಯಾವುದಾದರೂ ಗೃಹಕೈಗಾರಿಕೆಗಳಲ್ಲಿ ಕೆಲಸ ಮಾಡುವ ಏರ್ಪಾಡನ್ನು ಮಾಡಲಾಗಿದೆ. ಆದರೆ ಮಾನ್ಯ ಸದಸ್ಯರು ಹೇಳುವ ಪ್ರಕಾರ ಒಂದೆರೆಡು ಕೇಸ್‌ಗಳು ಆ ರೀತಿ ಆಗಿರಬಹುದು. ಅಂತಹವರನ್ನು ಮತ್ತೆ ಸುಧಾರಿಸಬೇಕೆಂದೇ ಈ ಅಧಿಕಾರಿಗಳನ್ನು ನೇಮಕ ಮಾಡಿರುವುದು.

**ಶ್ರೀಮತಿ ಬಸವರಾಜೇಶ್ವರಿ.–** ಮೊದಲು ಪ್ಲಾನ್ ಮತ್ತು ಎಸ್ಟಿಮೇಟ್ ತಯಾರಾಗಿದ್ದು 1,600 ಎಕರೆಗೆ. ಪ್ರಸ್ತುತ ವ್ಯವಸಾಯಕ್ಕೆ ಅನೂಕೂಲವಾಗತಕ್ಕಂಥ ಭಾಗದಲ್ಲಿ ಫಾರೆಸ್ಟ್ ಡಿಪಾರ್ಟ್‌ಮೆಂಟಿನವರಿಂದ ರಿಲೀಸ್ ಮಾಡುವುದಿಲ್ಲ ಎನ್ನುವ ಅಭಿಪ್ರಾಯ ಬಂದಮೇಲೆ ಈಗ 700 ಎಕರೆಗೆ ಪ್ಲಾನ್ ಮತ್ತು ಎಸ್ಟಿಮೇಟ್ ತಯಾರಾಗುತ್ತಿವೆ.

**ಶ್ರೀ ಎಸ್. ಆರ್. ಬೊಮ್ಮಾಯಿ.**– ಪ್ರಸ್ತುತ ಬಡ್ಜೆಟ್ಟಿನಲ್ಲಿ ಈ ಯೋಜನೆ ಬಂದಿಲ್ಲ ಮುಂದಿನ ಬಡ್ಜೆಟ್ಟ್‌ನಲ್ಲಾದರೂ ಸೇರಿಸುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀಮತಿ ಬಸವರಾಜೇಶ್ವರಿ.**– ಪ್ಲಾನ್, ಎಸ್ಟಿಮೇಟ್ ತಯಾರಾಗಿ ಬಂದಮೇಲೆ ಮುಂದಿನ ಬಡ್ಜೆಟ್ಟಿನಲ್ಲೆ ಸೇರಿಸುವುದಕ್ಕೆ ಪ್ರಯತ್ನ ಮಾಡುತ್ತೇನೆ.

6ನೇ ಅಧಿವೇಶನ 1969 ಏಪ್ರಿಲ್ 3ರಂದು ನಡೆದಾಗ ತಿಮ್ಮನಾಯಕನಹಳ್ಳಿ ಟ್ಯಾಂಕ್ ಗುತ್ತಿಗೆ ಕುರಿತಂತೆ ಬಿಲ್ಸ್ ಸಪ್ಲಿಮೆಂಟ್ ಸಂಧರ್ಭ ಸ್ವಾರಸ್ಯಕಾರವಾದ ಪ್ರಶ್ನೆ ಮತ್ತು ಉತ್ತರಗಳು ಸಣ್ಣ ನೀರಾವರಿ ಸಚಿವರಾದ AJ ದೊಡ್ಡಮೇಟಿ ಪರವಾಗಿ ಉತ್ತರಗಳು.

**ಶ್ರೀ ಗಂಗಾಬೋವಿ.**– ಕೊರಟಗೆರೆ ತಾಲ್ಲೂಕು ಕೋಳಾಲ ಹೋಬಳಿ ತಿಮ್ಮನಾಯಕನಹಳ್ಳಿ ಹೊಸಕೆರೆ ಕೆಲಸ ಮುಗಿದು ಸಮಾರು 6 ವರ್ಷಗಳಾದರೂ ಕಂಟ್ರಾಕ್ಟುದಾರರುಗಳಿಗೆ ಇದುವರೆವಿಗೂ ಫೈನಲ್ ಬಿಲ್ ಕೊಟ್ಟಿಲ್ಲ, ಕಂಟ್ರಾಕುರುಗಳ ಹೆಸರೇನು?

**ಶ್ರೀಮತಿ ಬಸವರಾಜೇಶ್ವರಿ.**– ಫೈನಲ್ ಬಿಲ್ ಕೊಡಲಾಗಿದೆ. ಅಧ್ಯಕ್ಷರು ಅಪ್ಪಣೆ ಕೊಟ್ಟರೆ ಹೆಸರು ಬೇಕಾದರೆ ಹೇಳುತ್ತೇನೆ. ಮುದ್ದರಂಗಯ್ಯ, ತಾಲನೇಶಯ್ಯ, ರತ್ನಯ್ಯ, ಸಯದ್ ಉಮರ್, ಲಕ್ಷೀನರಸಿಂಹಯ್ಯ, ಅಬ್ದುಲ್ ಅಜೀಜ್.

**ಶ್ರೀ ಗಂಗಾಬೋವಿ.**– ಎಷ್ಟು ಹಣ ಕೊಡಬೇಕಾಗಿದೆ ಎಂದು ತಪಶೀಲು ಹೇಳುತ್ತಿರಾ?

**ಶ್ರೀಮತಿ ಬಸವರಾಜೇಶ್ವರಿ.**– ಫೈನಲ್ ಬಿಲ್ಲುಗಳು ಪಾವತಿಯಾಗಿವೆ. ಶೇಕಡ 5 ರಷ್ಟು ಡಿಪಾಜಿಟ್ ಇಟ್ಟುಕೊಂಡಿರುವುದು ಮಾತ್ರ ನಮ್ಮಲ್ಲಿದೆ.

**ಶ್ರೀ ಗಂಗಾಬೋವಿ.**– ಫೈನಲ್ ಬಿಲ್ಲನ್ನು ಕೊಟ್ಟಮೇಲೆ ಶೇಕಡ 5 ರಷ್ಟು ಸರಕಾರದಲ್ಲಿದೆ ಎಂದು ಹೇಳುವುದರ ಅರ್ಥವೇನು?

**ಶ್ರೀಮತಿ ಬಸವರಾಜೇಶ್ವರಿ.**– ಪುನಃ ರಿವೈಜ್ಡ್ ಎಸ್ಟಿಮೇಟ್ ಆಗಿದೆ. ಅದನ್ನು ಅಪ್ರೂವ್ ಮಾಡುವವರೆಗೆ ಡಿಪಾಜಿಟ್ಟನ್ನು ಹಿಡಿದುಕೊಳ್ಳಲಾಗಿದೆ.

**ಶ್ರೀ ಗಂಗಾಬೋವಿ.**– ಕೆಲಸವಾಗಿ 6 ವರ್ಷವಾದರೂ ರಿವೈಜ್ಡ್ ಎಸ್ಟಿಮೇಟ್ ಆಗಿರುವುದರಿಂದ ಶೇಕಡ 5ರಷ್ಟು ಡಿಪಾಜಿಟ್ಟು ಹಿಡಿದುಕೊಂಡಿದೆ ಎಂದು ಹೇಳಿರುವುದು ಸತ್ಯಕ್ಕೆ ದೂರವಾದುದು. ಆದುದರಿಂದ ಸಂಬಂಧಪಟ್ಟ ಆಫೀಸರಮೇಲೆ ಕ್ರಮ ತೆಗೆದುಕೊಳ್ಳುತ್ತೀರಾ?

**ಶ್ರೀಮತಿ ಬಸವರಾಜೇಶ್ವರಿ.–** ಇದರಲ್ಲಿ ಸತ್ಯಕ್ಕೆ ದೂರವಾದ ಅಂಶವೇನೂ ಇಲ್ಲ. ಈಗಾಗಲೇ ಫೈನಲ್ ಬಿಲ್ ಕೊಟ್ಟು ರಿವೈಜ್ಡ್ ಎಸ್ಟಿಮೇಟ್ ಮಾಡಿದೆ. ಚೀಫ್ ಎಂಜಿನಿಯರು ಎಸ್ಟಿಮೇಟ್ ಸ್ಯಾಂಕ್ಷನ್ ಮಾಡಿದಮೇಲೆ 5 ಪರ್ಸೆಂಟ್ ಇರುವುದನ್ನು ಕೊಡಲಾಗುವುದು.

**ಶ್ರೀ ಸದಾಶಿವಪ್ಪ ಪಾಟೀಲ್.–** ತಾವು ಹೋದ ಸಾರಿ ಈ ಸಭೆಯಲ್ಲಿ ಭರವಸೆ ಕೊಟ್ಟ ಬಳಿಕ ಪ್ರೋಗ್ರೆಸ್ ಆಗಿದೆ ಎಂದು ಹೇಳಿದಿರಿ. ಆದುದರಿಂದ ಇದರ ಬಗ್ಗೆ ಎಸ್ಟಿಮೇಟ್ ಮಾಡುವುದರಲ್ಲಿ ಪ್ರೋಗ್ರೆಸ್ ಆಗಿದೆಯೇ ವರ್ಕ ಪ್ರೋಗ್ರೆಸ್ ಆಗಿದೆಯೇ?

**ಶ್ರೀ ಬಸವರಾಜ ಮಾಗಾವಿ.–** ಈಗಾಗಲೇ ಅದರ ಬಗ್ಗೆ ಉತ್ತರ ಹೇಳಿದ್ದೇನೆ ಎರಡು ಕೆಲಸಗಳೂ ಕೂಡ ಪ್ರಾರಂಭವಾಗಿವೆ.

**ಶ್ರೀ ಎಸ್. ಪುಟ್ಟಸ್ವಾಮಿ.–** 17·ನೀರಾವರಿ ಯೋಜನೆಗಳ ಬಗ್ಗೆ ಅಂದಾಜು ಮತ್ತು ನಕ್ಷೆ ತಯಾರಾಗಿದೆ ಎಂದು ಹೇಳಿದ್ದಾರೆ. ಇವುಗಳಲ್ಲಿ ಎಷ್ಟು ಮಂಜೂರಾಗಿವೆ ಎಷ್ಟು ಮಂಜೂರಾಗಬೇಕು ಎಂಬುದನ್ನು ತಿಳಿಸುವುದಕ್ಕೆ ಸಾಧ್ಯಾವೇ?

**ಶ್ರೀಮತಿ ಬಸವರಾಜೇಶ್ವರಿ.–** ಕೆಲಸ ಪ್ರಾರಂಭ ಮಾಡಿ ನಿಂತಿರತಕ್ಕ ಎರಡು ಯೋಜನೆಗಳ ಬಗ್ಗೆ ಮಾನ್ಯ ಸದಸ್ಯರು ಕೇಳಿದ್ದಾರೆ. ಅದನ್ನು ಸ್ಪಿಲ್ ಓವರ್ ವರ್ಕ್ಸ್ ಎಂದು ತಿಳಿದುಕೊಂಡು ಆ ಕೆಲಸಗಳನ್ನು ಮಾಡಬೇಕಾಗುತ್ತದೆ. ಈ 17 ಕೆಲಸಗಳಲ್ಲಿ ಯಾವುದು ಮಂಜೂರಾಗಿದೆ ಯಾವುದು ಆಗಿಲ್ಲ ಎನ್ನವ ವಿಷಯ ನನ್ನ ಮುಂದೆ ಇಲ್ಲ. ಈಗ ಹೊಸ ಕೆಲಸಗಳನ್ನು ತೆಗೆದುಕೊಳ್ಳಬೇಕೆಂದು ಆಲೋಚನೆ ಇನ್ನೂ ಮಾಡಿಲ್ಲ.

**ಶ್ರೀ ಎಸ್. ಪುಟ್ಟಸ್ವಾಮಿ.–** ಈ 17 ಕೆಲಸಗಳು ಯಾವುವು ಎಂದು ಹೇಳುವುದಕ್ಕೆ ಆಗುತ್ತದೆಯೇ?

**ಶ್ರೀಮತಿ ಬಸವರಾಜೇಶ್ವರಿ.–** ಅದು ಬಹಳ ದೊಡ್ಡ ಪಟ್ಟಿ ಇರುವುದರಿಂದ ಅದನ್ನು ಸಭೆಯ ಮುಂದೆ ಮಂಡಿಸುತ್ತೇನೆ ಸ್ವಾಮಿ.

**ಶ್ರೀ ಎಸ್. ಪುಟ್ಟಸ್ವಾಮಿ.–** (ಬಿ) ಭಾಗಕ್ಕೆ ಉತ್ತರ ಕೊಡುತ್ತ ಎರಡು ಕಾಮಗಾರಿಗಳನ್ನು 1968ನೇ ಇಸವಿ ಏಪ್ರಿಲ್ ಮತ್ತು ಸೆಪ್ಟೆಂಬರ್ ತಿಂಗಳಿನಿಂದ ನಿಲ್ಲಿಸಲಾಗಿದೆ ಎಂದು ಹೇಳಿದ್ದಾರೆ. ಇವೆರಡನ್ನೂ ಅಂದಾಜು ಪರಿಷ್ಕರಣ ಮಾಡುವ ದೃಷ್ಟಿಯಿಂದ ನಿಲ್ಲಿಸಲಾಗಿದೆಯೆಂದು ತಿಳಿದು ಬಂದಿದೆ. ಇದು ನಿಜವೇ? ಹಾಗಿದ್ದರೆ ಎರಡೂ ಕಾಮಗಾರಿಗಳ ಪರಿಷ್ಕರಣವಾದ ಅಂದಾಜು ಮೊಬಲಗೆಷ್ಟು ಎಂದು ತಿಳಿಸುವುದಕ್ಕೆ ಸಾಧ್ಯವೇ?

**ಶ್ರೀಮತಿ ಬಸವರಾಜೇಶ್ವರಿ.–** ಮೊದಲನೆಯದು ಅಂದಾಜು ಪರಿಷ್ಕರಣದ ಸಲುವಾಗಿ ನಿಂತಿಲ್ಲ. ಅಲ್ಲಿ ಬಂಡ್ ಹಾಕುವುದಕ್ಕೆ ಬೇಕಾದ ಗ್ರಾವಲ್ ಯಾವ ಜಮೀನಿನಿಂದ

ತೆಗೆದುಕೊಳ್ಳಬೇಕಾಗಿತ್ತೋ ಆ ಜಮೀನ್ದಾರರು ಅಡ್ಡಿ ಮಾಡಿದ್ದರಿಂದ ಲ್ಯಾಂಡ್ ಅಕ್ವಿಜಿಷನ್ ಪ್ರೊಸೀಡಿಂಗ್ಸ್ ನಡೆಯುತ್ತಿದೆ. ಅದು ಪುರ್ತಿಯಾದ ತಕ್ಷಣ ಕೆಲಸ ಪ್ರಾರಂಭ ಮಾಡಿ ಅದನ್ನು ಮುಗಿಸುತ್ತೇವೆ. ಇನ್ನೊಂದು ಕೆಲಸದ ಬಗ್ಗೆ ರಿವೈಸ್ಡ್ ಅಂದಾಜು ತಯಾರಾಗಿದೆ. ಈಗಿರತಕ್ಕ ಕಂಟ್ರಾಕ್ಟರು ಆ ಕೆಲಸ ಮಾಡುವುದಕ್ಕೆ ಸ್ವಲ್ಪ ನಿರಾಕರಣೆ ಮಾಡುತ್ತಿದ್ದಾರೆ. ಅವರನ್ನು ಒಪ್ಪಿಸತಕ್ಕ ಪ್ರಯತ್ನಗಳು ನಡೆಯುತ್ತಿವೆ. ಒಂದು ವೇಳೆ ಅವರು ಒಪದೆ ಇದ್ದರೆ ಬೇರೆ ಎಜೆನ್ಸಿಯಿಂದ ಆದಷ್ಟು ತೀವ್ರ ದೆಸೆಯಿಂದ ಕೆಲಸವನ್ನು ಮುಗಿಸುತ್ತೇವೆ.

**ಶ್ರೀ ಎನ್. ಎ. ಚನ್ನೇಗೌಡ.**– ಪ್ರಾರಂಭ ಮಾಡಿದ ಕೆಲಸವನ್ನು ಅರ್ಧಂಬರ್ಧ ಮಾಡಿ ನಿಲ್ಲಸುವುದಕ್ಕೆ ಮುಖ್ಯ ಕಾರಣ ಅಂದಾಜು ಮಾಡುವಾಗ ಒಂದು ಎಕರೆಗೆ ಇಂತಿಷ್ಟು ದುಡ್ಡು ಖರ್ಚು ಮಾಡಬೇಕು ಎನ್ನುವ ಆದರ ಮೇಲೆ ಮಾಡುತ್ತಾರೆ. ಅದರ ಪ್ರಕಾರ ಕೆಲಸ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಆ ಮೊತ್ತವನ್ನು ಜಾಸ್ತಿ ಮಾಡುವುದಕ್ಕೆ ಸಾಧ್ಯವಾಗುತ್ತದೆಯೇ?

**ಶ್ರೀಮತಿ ಬಸವರಾಜೇಶ್ವರಿ.**– ಈಗಾಗಲೇ ಅದನ್ನು ರಿವೈಸ್ ಮಾಡಿದೆ. ರೆಸ್ಟೊರೇಷನ್‌ಗೆ 750 ರೂಪಾಯಿ ಇದ್ದುದನ್ನು 1,000ಕ್ಕೆ ಹೆಚ್ಚಿಸಲಾಗಿದೆ ಮತ್ತು ಹೊಸ ಕೆಲಸಗಳಿಗೆ 1,000 ರೂಪಾಯಿ ಇದ್ದುದನ್ನು 1,200 ರೂಪಾಯಿ ಮಾಡಿದೆ.

**ಶ್ರೀ ಡಿ. ಎಂ. ಸಿದ್ದಯ್ಯ.**– ಚಾಮರಾಜನಗರ ತಾಲ್ಲೂಕಿನಲ್ಲಿ 17 ಕೆಲಸಗಳನ್ನು ತೆಗೆದು ಕೊಂಡಿದ್ದೇವೆಂದು ಹೇಳಿದ್ದಾರೆ. ಇವೆಲ್ಲ ದೊಡ್ಡ ದೊಡ್ಡ ಕೆಲಸಗಳು, ಬಹಳ ಸಂತೋಷ. ಪಕ್ಕದ ತಾಲ್ಲೂಕಾದ ಯಳಂದೂರಿನಲ್ಲಿ ಕೆರೆ ಆಗಬೇಕಾಗಿದೆ. ಅದನ್ನು ಮಂಜೂರು ಮಾಡಿ ಈ ಕೆಲಸಗಳ ಜೊತೆಗೆ ತೆಗೆದುಕೊಳ್ಳುವ ಯೋಚನೆ ಮಾಡುತ್ತೀರಾ?

**ಶ್ರೀಮತಿ ಬಸವರಾಜೇಶ್ವರಿ.**– ಪಕ್ಕದ ತಾಲ್ಲೂಕು ವಿಚಾರ ನನ್ನ ಮುಂದೆ ಇಲ್ಲ.

**ಶ್ರೀ ಎಸ್. ಪುಟ್ಟಸ್ವಾಮಿ.**– ಯಡಿಯೂರು ಅಡ್ಡ ಹಳ್ಳ ಮತ್ತು ಬೆಲ್ಲತಸಾನೆ ಹಳ್ಳ ಇವೆರಡಕ್ಕೂ ಬೇಕಾಗಿರುವ ಜಮೀನನ್ನ ಬೇಗ ತೆಗೆದುಕೊಂಡು, ನಿಂತಿರತಕ್ಕ ಕೆಲಸಗಳನ್ನು ಪ್ರಾರಂಭ ಮಾಡಿ ನಿಗದಿಯಾದ ಕಾಲಕ್ಕೆ ಮುಗಿಸುವುದಕ್ಕೆ ಪ್ರಯತ್ನ ಮಾಡಲಾಗುವುದೇ ಸ್ವಾಮಿ?

**ಶ್ರೀಮತಿ ಬಸವರಾಜೇಶ್ವರಿ.**– ನಿಗದಿಯಾದ ವೇಳೆಗೆ ಮುಗಿಸಬೇಕು ಎನ್ನುವುದೇ ಸರ್ಕಾರದ ಆಶಯ.

**ಶ್ರೀ ಗಂಗಾಬೋವಿ.**– ತುಮಕೂರು ತಾಲ್ಲೂಕು ಮೈದಾಳ ಗ್ರಾಮದ ಮಾಚೇಹಳ್ಳಿ ಪಿಕಪ್ ಈ 1963ರಲ್ಲಿ ಮಂಜೂರಾಯಿತು ಎಂದು ಹೇಳಿದ್ದಾರೆ. 6 ವರ್ಷದಿಂದ ಕೆಲಸವಾಗದೆ ನಿಧಾನವಾಗಿರುವುದಕ್ಕೆ ಕಾರಣವೇನು, ಸ್ವಾಮಿ?

**ಶ್ರೀಮತಿ ಬಸವರಾಜೇಶ್ವರಿ.**– ಅನೇಕ ಕಾರಣಗಳಿಂದ ವಿಳಂಬವಾಗಿದೆ. ಕಂಟ್ರಾಕ್ಟರಿಗೆ ಈ ಕೆಲಸವನ್ನು ಒಪ್ಪಿಸತಕ್ಕ ಸಂದರ್ಭದಲ್ಲಿ ಪೀಸ್‌ಮೀಲ್ ಆಗಿ ಕೊಟ್ಟಿರುತ್ತಾರೆ. ಎರಡು ಮೂರು ಸಲ ನೋಟೀಸ್ ಕೊಟ್ಟಿದ್ದರೂ ಆತ ಕೆಲಸಮಾಡಿಲ್ಲ. ಸ್ವಲ್ಪಮಟ್ಟಿಗೆ ಪ್ರವಾಹ ಬಂದು ಕೊಚ್ಚಿಹೋಯಿತು. ಈ ಎಲ್ಲಾ ಕಾರಣಗಳಿಂದ ವಿಳಂಬವಾಗಿದೆ.

**ಶ್ರೀ ಗಂಗಾಬೋವಿ.**– ಕಂಟ್ರಾಕ್ಟರ ಜವಾಬ್ದಾರಿ ಎಂದು ಹೇಳುವುದನ್ನು ನಾನು ಒಪ್ಪುವುದಕ್ಕಾಗುವುದಿಲ್ಲ. ಕೆಲವು ಅಧಿಕಾರಿಗಳಿಂದ ನಿಧಾನವಾಗಿದೆ. ಆ ಅಧಿಕಾರಿಗಳ ಮೇಲೆ ಏನು ಕ್ರಮ ತೆಗೆದುಕೊಂಡಿದ್ದೀರಿ?

**ಶ್ರೀಮತಿ ಬಸವರಾಜೇಶ್ವರಿ.**– ಸರ್ಕಾರದ ಗಮನಕ್ಕೆ ಬಂದಾಗ, ಅಧಿಕಾರಿಗಳು ಯಾರು ಇದಕ್ಕೆ ಜವಾಬ್ದಾರರಿದ್ದಾರೆ ಎನ್ನುವ ವಿಚಾರದಲ್ಲಿ ಎನ್‌ಕ್ವೈರಿ ಮಾಡುತಿದ್ದೇವೆ.

**ಶ್ರೀ ಗಂಗಾಬೋವಿ.**– ಎಷ್ಟು ದಿವಸಗಳಲ್ಲಿ ಸಂಬಂಧಪಟ್ಟವರಮೇಲೆ ಕ್ರಮ ತೆಗೆದುಕೊಳ್ಳುತ್ತೀರಿ?

**ಶ್ರೀಮತಿ ಬಸವರಾಜೇಶ್ವರಿ.**– ಎನ್‌ಕ್ವೈರಿ ಮಾಡುತ್ತಿದ್ದೇವೆ. ವರದಿ ಬಂದಕೂಡಲೆ ಯಾರು ಜವಾಬ್ದಾರರೋ ಅವರ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳುತ್ತೇವೆ.

**ಶ್ರೀ ಎನ್. ಚಿಕ್ಕೇಗೌಡ.**– ಡ್ಯಾಮೇಜ್ ಆಗಲು ಜವಾಬ್ದಾರರು ಯಾರು? ನಿಧಾನವಾದುದ್ದರಿಂದ ಫ್ಲಡ್ ಬಂದು ಡ್ಯಾಮೇಜ್ ಆಗಿದೆ.

**ಶ್ರೀಮತಿ ಬಸವರಾಜೇಶ್ವರಿ.**– ಈಗಾಗಲೆ ಹೇಳಿದೆ, ಲೋಕಲ್ ಕಂಟ್ರಾಕ್ಟರಿಗೆ ಪೀಸ್‌ಮೀಲ್ ಆಗಿ ಕೆಲಸ ಕೊಡಲಾಗಿತ್ತು. ಸ್ವಲ್ಪ ಕೆಲಸವಾಗಿದೆ, ಫ್ಲಡ್ ಬಂದು ವಾಷಔಟ್ ಆಗಿರುವುದಕ್ಕೆ ಜವಾಬ್ದಾರಿ ಸ್ವಲ್ಪಮಟ್ಟಿಗೆ ಅಧಿಕಾರಿಗಳ ಮೇಲೂ ಇದೆ

**ಶ್ರೀ ಎಂ. ನಾಗಪ್ಪ.**– ಕಂಟ್ರಾಕ್ಟರಿಗೆ ಯಾವ ವರ್ಷ ಕೊಟ್ಟಿದೆ? ತಾಂತ್ರಿಕ ತೊಂದರೆಯಿಂದ ಎಷ್ಟು ವರ್ಷ ಪೆಂಡಿಂಗ್ ಇತ್ತು?

**ಶ್ರೀಮತಿ ಬಸವರಾಜೇಶ್ವರಿ.**– 1963ರಲ್ಲಿ ಸುಮಾರು 8 ಸಾವಿರ ರೂಪಾಯಿಗೆ ಅಂದಾಜು ಮಾಡಿ ಕಂಟ್ರಾಕ್ಟರಿಗೆ ಕೊಡಲಾಗಿತ್ತು, ಇಲ್ಲಿಯವರೆಗೆ ಮಾಡಿಲ್ಲ, ಈಗ 8,220 ರೂಪಾಯಿ ಖರ್ಚಾಗಿದೆ, ಕಂಟ್ರಾಕ್ಟರು ಕೆಲಸ ಮಾಡುವುದಕ್ಕಾಗುವುದಿಲ್ಲವೆಂದು ತಿಳಿಸಿದ್ದಾರೆ. ಈಗ ರಿವೈಜ್ಡ್ ಎಸ್ಟಿಮೇಟ್ ಮಾಡಿ ಕೆಲಸ ಪ್ರಾರಂಭಿಸುತ್ತೇವೆ.

**ಶ್ರೀ ಸಿ.ಕೆ ರಾಜಯ್ಯಶೆಟ್ಟಿ.**– ರಿವೈಜ್ಡ್ ಎಸ್ಟಿಮೇಟ್ ಮಾಡಲು ನಿಧಾನವಾಗಿರುವುದರಿಂದ ಕೆಲಸ ನಿಧಾನವಾಗಿದೆ ಎಂಬುದು ಗಮನಕ್ಕೆ ಬಂದಿದೆಯೇ?

**ಶ್ರೀಮತಿ ಬಸವರಾಜೇಶ್ವರಿ.**– ಹಾಗಿಲ್ಲ. ವಾಷೌಟ್ ಆಗಿರುವುದರಿಂದ ಸ್ವಲ್ಪ ಡೀಪ್ ಆಗಿ ಫೌಂಡೇಷನ್ ಹಾಕಿದರೆ ಉತ್ತಮ ಎಂದು ಎಂಜಿನಿಯರ್ ಅಭಿಪ್ರಾಯವಿರುವುದರಿಂದ ರಿವೈಜ್ಡ್ ಎಸ್ಟಿಮೇಟ್ ಮಾಡಿ ಕೆಲಸ ಮುಗಿಸಬೇಕೆಂದು ತೀರ್ಮಾನವಾಗಿದೆ.

**ಶ್ರೀ ಬಿ. ಪರಮೇಶ್ವರಪ್ಪ.**– ಜವಾಬ್ದಾರಿಯನ್ನು ಕಂಟ್ರಾಕ್ಟರ ಮೇಲೆ ಮತ್ತು ಅಧಿಕಾರಿಗಳ ಮೇಲೆ ಯಾವ ಪ್ರಮಾಣದಲ್ಲಿ ಹೇಗೆ ಹೊರಿಸಲಾಗುವುದು?

**ಶ್ರೀಮತಿ ಬಸವರಾಜೇಶ್ವರಿ.**– ಈಗ ನಿರ್ದಿಷ್ಟವಾಗಿ ಹೇಳುವುದಕ್ಕಾಗುವುದಿಲ್ಲ, ಎನ್‌ಕ್ವೈರಿಯಾದ ಮೇಲೆ ನಿಗದಿ ಮಾಡಬೇಕು.

**ಕೊಟ್ಟೂರು ಟ್ಯಾಂಕ್ ಪರಿಷ್ಕರಣೆ**

**ಶ್ರೀ ಎಂ. ಎಂ. ಜೆ. ಸದ್ಯೋಜಾತ.**– ಈ ಯೋಜನೆಯು ಪರಿಶೀಲನೆಯಲ್ಲಿವೆ ಎಂದು ಹೇಳಿದ್ದೀರಿ. ಈ ಯೋಜನೆ ಪರಿಶೀಲನೆಯಾಗಬೇಕಾದರೆ ಎಷ್ಟು ವರ್ಷಗಳು ಆಗಬಹುದು?

**ಶ್ರೀಮತಿ ಬಸವರಾಜೇಶ್ವರಿ.**– 22–1–1969ರಲ್ಲಿ ಪರಿಶೀಲನೆಗಾಗಿ ಸೂಪರಿಂಟೆಂಡಿಂಗ್ ಇಂಜನಿಯರ್, ಗುಲ್ಬರ್ಗ ಅವರಿಗೆ ಕಳಿಸಿಕೊಡಲಾಗಿದೆ.

**ಸಣ್ಣ ನೀರಾವರಿ ಸಚಿವರಾದ ಮಾನ್ಯ ಎಜೆ ದೊಡ್ಡಮೇಟಿ ರವರ ಪರವಾಗಿ ಶ್ರೀಮತಿ ಬಸವರಾಜೇಶ್ವರಿಯವರ ಉತ್ತರಗಳು.**

**ಶ್ರೀ ಜೆ. ಆರ್ ಹಾಲಸ್ವಾಮಿ.**– ಮೊದಲನೆಯ ಪ್ರಶ್ನೆಗೆ ಉತ್ತರವಾಗಿ 26 ಎಂದು ಹೇಳಿದ್ದೀರಿ, ಅದರಲ್ಲಿ ದೊಡ್ಡ ಕೆರೆಗಳು ಎಷ್ಟು ಸಣ್ಣ ಕೆರೆಗಳು ಎಷ್ಟು?

**ಶ್ರೀಮತಿ ಬಸವರಾಜೇಶ್ವರಿ.**– ದೊಡ್ಡ ಕೆರೆಗಳು 8 ಸಣ್ಣ ಕೆರೆಗಳು 18.

**ಶ್ರೀ ಜೆ. ಆರ್ ಹಾಲಸ್ವಾಮಿ.**– ಎರಡನೆ ಪ್ರಶ್ನೆಗೆ ಯಾವುದೂ ಇಲ್ಲ ಎಂದು ಹೇಳಿದ್ದೀರಿ, ಸಮಾರು 3–4 ವರ್ಷಗಳಿಂದ 4–5 ಕೆರೆಗಳು ಎಸ್ಟಿಮೇಟು, ಸರ್ವೆನಡೆದದ್ದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀಮತಿ ಬಸವರಾಜೇಶ್ವರಿ.**– ನೀವು ಕೇಳಿರುವುದು ಎಸ್ಟಿಮೇಟು ಸ್ಟೇಜಿನಲ್ಲಿ ಇದೆಯೇ ಅಂತ, ಎಸ್ಟಿಮೇಟು ಸ್ಟೇಜಿನಲ್ಲಿ ಇಲ್ಲ, ಕೆಲವು ಪ್ರೋಗ್ರೆಸ್‌ನಲ್ಲಿ ಇವೆ. ಎರಡು ಮಾತ್ರ ಇನ್‌ವೆಸ್ಟಿಗೇಷನ್ ಸ್ಟೇಜಿನಲ್ಲಿ ಇವೆ.

**ಶ್ರೀ ಜೆ. ಆರ್ ಹಾಲಸ್ವಾಮಿ.**– ಎರಡು ವರ್ಷದ ಕೆಳಗೆ ಕಾನೂರು ಕಟ್ಟೆ ಕೆರೆ ಮಂಜೂರು ಆಗಿದ್ದು ಹೈಕೋರ್ಟನಲ್ಲಿ ಡಿಸ್‌ಪ್ಯೂಟ್ ಆಗಿದೆ. ಅದನ್ನು ತೆಗೆದುಕೊಳ್ಳುವುದು ಪರಿಶೀಲನೆಯಲ್ಲಿದೆಯೇ?

**ಶ್ರೀಮತಿ ಬಸವರಾಜೇಶ್ವರಿ.**– ಮಾಗಡಿ ಮತ್ತು ಲಕ್ಕಂಪುರ ಕೆರೆ ಕೆಲಸ ಪ್ರಾರಂಭದಲ್ಲಿ ಇವೆ, ಕೆಲಸ ನಡೆಯುತ್ತಾ ಇದೆ. ಇನ್ನು ಉಜ್ಜಿಕೆರೆ, ತರಗನಹಳ್ಳಿ ಕೆರೆ ಇನ್‌ವೆಸ್ಟಿಗೇಷನ್ ಸ್ಟೇಜಿನಲ್ಲಿ ಇದೆ, ಬಾಕಿ ವಿಷಯ ಸರ್ಕಾರದ ಗಮನದಲ್ಲಿ ಇಲ್ಲ.

**ಸಂವಾದ ಉತ್ತರ ಮುಂದುವರೆದೆದೆ.**

**ಶ್ರೀ ಎಸ್. ಪುಟ್ಟಸ್ವಾಮಿ.**– ಮೊದಲನೆಯ ಪ್ರಶ್ನೆಗೆ ಉತ್ತರವಾಗಿ ಬಡ್ಜೆಟ್ಟಿನಲ್ಲಿ 4 ಕಾಮಗಾರಿಗಳನ್ನು ಸೇರಿಸಲಾಗಿತ್ತು, ಅದರಲ್ಲಿ ಒಂದನ್ನು ಮತ್ತು ಒಪ್ಪಲಾದ ಹೊಸ ಕಾಮಗಾರಿಗಳ ಪೈಕಿ ಒಂದನ್ನು ಮಾಡಿದೆ, 2 ಕಾಮಗಾರಿಗಳಿಗೆ ಮಾತ್ರ ಟೆಕ್ನಿಕಲ್‌ಸ್ಯಾಂಕ್ಷನ್ ಹೊರೆತು ಟೆಂಡರನ್ನು ಕರೆಯಲಾಗಿದೆ ಎಂದು ತಿಳಿಸಿದೆ. ಬಡ್ಜೆಟ್ಟಿನಲ್ಲಿ ಸೇರಿಸಿದ್ದ ಉಳಿದ 3 ಕೆಲಸಗಳಿಗೆ ಟೆಕ್ನಿಕಲ್‌ಸ್ಯಾಂಕ್ಷನ್ ದೊರೆಯದಿರುವುದಕ್ಕೆ ಕಾರಣವೇನು?

**ಶ್ರೀಮತಿ ಬಸವರಾಜೇಶ್ವರಿ.**– ಉಳಿದ ಕೆಲಸಗಳಿಗೆ ಹಣದ ಅನುಕೂಲ ದೊರೆತ ಹಾಗೆ ಅವನ್ನು ಪ್ರಾರಂಭಿಸುವುದನ್ನು ವಿಚಾರಮಾಡುತ್ತಿದ್ದೇವೆ.

**ಶ್ರೀ ಎಸ್. ಪುಟ್ಟಸ್ವಾಮಿ.**– ಮೊದಲನೆಯ ಪ್ರಶ್ನೆಗೆ ಉತ್ತರವಾಗಿ ತಿಳಿಸಿರುವಂತೆ ಬಡ್ಜೆಟ್ಟಿನಲ್ಲಿ ಸೇರಿಸಿ ಟೆಕ್ನಿಕಲ್ ಸ್ಯಾಂಕ್‌ಷನ್ ದೊರೆತಿರುವ ಬಂಡಿಗೌಡನಹಳ್ಳಿ ಕೆರೆ ನಿರ್ಮಾಣದ ಬಗ್ಗೆ ಟೆಂಡರನ್ನು ಹಿಂದೆಗೆದುಕೊಳ್ಳಲು ಕಾರಣವೇನು? ಇತ್ತೀಚಿನ ದರ್ಜೆ ಹಾಗೂ 69–70ರ ದರಗಳ ಪ್ರಕಾರ ಅಂದಾಜನ್ನು ರೀಕ್ಯಾಸ್ಟ್ ಮಾಡಲು ಹಾಗೆ ಮಾಡಲಾಗಿದೆ ಎಂದು ಉತ್ತರ ಕೊಡಲಾಗಿದೆ. ಆದರೆ ನನಗೆ ತಿಳಿದ ಪ್ರಕಾರ ಈ ಕೆಲಸವನ್ನು ಇಂಥವರು ತೆಗೆದುಕೊಳ್ಳಬಾರದೆಂದು ಒಬ್ಬ ಕಾಂಗ್ರೆಸ್ ಅಭ್ಯರ್ಥಿ ಸರಕಾರದಮೇಲೆ ಪ್ರಭಾವ ಬೀರಿ ಅದನ್ನು ನಿಲ್ಲಿಸಿರುವುದು ನಿಜವೇ?

**ಶ್ರೀಮತಿ ಬಸವರಾಜೇಶ್ವರಿ.**– ಹಾಗೇನು ಅಭಿಪ್ರಾಯವಿಲ್ಲ. 69–70ನೇ ಸಾಲಿನ ದರಗಳ ಪ್ರಕಾರ ಅಂದಾಜನ್ನು ರೀಕ್ಯಾಸ್ಟ್ ಮಾಡಬೇಕಾಗಿದೆ, ರೀ ಎಗ್ಸಾಮಿನ್ ಮಾಡಿ ಇನ್‌ವೆಸ್ಟಿಗೇಟ್ ಮಾಡಬೇಕಾಗಿದೆ. ಕಾಂಪೆನ್ಸೇಷನ್ ವಿಚಾರ ಸಮರ್ಪಕವಾಗಿ ಅಳವಡಿಸಿಲ್ಲ. ರೆವೆನ್ಯೂ ಆಫೀಸರು ಅಂಕಿಅಂಶ ನೋಡಿ ಸರಿಯಾದ ಪರಿಹಾರ ಕೊಡಬೇಕಾಗಿದೆ. ಅಲ್ಲಿ ಸಬ್‌ಮರ್ಜ್ ಆಗುವ ಭೂಮಿ ಬಹಳ ಬೆಳೆಬಾಳತಕ್ಕದ್ದು. ನೀರಾವರಿ ಸಾಕಷ್ಟು ಪ್ರದೇಶದಲಿ ಆಗುವುದೇ ಎಂಬುದನ್ನು ಸಹ ವಿಮರ್ಶೆ ಮಾಡಬೇಕಾಗಿದೆ.

**ಶ್ರೀ ಎಸ್. ಶಿವಪ್ಪ**– ಟೆಂಡರ್ ಕರೆದಮೇಲೆ ವಿತ್‌ಡ್ರಾ ಮಾಡಿರುವುದರಿಂದ ಯಾರದೋ ಪ್ರಭಾವದಿಂದ ಸರಕಾರ ಹಾಗೆ ಮಾಡಿದೆಯೆಂಬ ಅಭಿಪ್ರಾಯ ಬರುವುದಿಲ್ಲವೇ? ಟೆಂಡರನ್ನು ವಿತ್‌ಡ್ರಾ ಮಾಡಲು ಒತ್ತಾಯವೇನು ಬಂತು?

**ಶ್ರೀಮತಿ ಬಸವರಾಜೇಶ್ವರಿ.**– ಆಗಲೇ ಹೇಳಿದಂತೆ ಒತ್ತಾಯವೇನೂ ಬಂದಿಲ್ಲ ಅಲ್ಲಿ ಸಬ್‌ಮರ್ಜ್ ಆಗುವ ಜಮೀನು ಬಹಳ ಬೆಳೆಬಾಳುವುದು. ಅದಕ್ಕೆ ಸರಿಯಾದ ಪರಿಹಾರ ಕೊಡಬೇಕು. ಈ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರಕಾರ ಕೆಲಸ ಪ್ರಾರಂಭಿಸುವುದು.

**ಶ್ರೀ ಸದಾಶಿವಪ್ಪ ಪಾಟೀಲ್.**– ಟೆಕ್ನಿಕಲ್ ಸ್ಯಾಂಕ್ಷನ್ ಮತ್ತು ಅಡ್ಮಿನಿಸ್ಟ್ರೇಟೀವ್ ಸ್ಯಾಂಕ್ಷನ್ ಆಗಲಾಗದೆ ಬಡ್ಜೆಟ್‌ನಲ್ಲಿ ಈ ಕೆಲಸ ತೆಗೆದುಕೊಳ್ಳಬಹುದೇ?

**ಶ್ರೀಮತಿ ಬಸವರಾಜೇಶ್ವರಿ.**– ಬಡ್ಜೆಟ್‌ನಲ್ಲಿ ಇದು ಬರುತ್ತದೆ, ಬಂದಮೇಲೆ ಅಡ್ಮಿನಿಸ್ಟ್ರೇಟೀವ್ ಸ್ಯಾಂಕ್ಷನ್ ತೆಗೆದುಕೊಳ್ಳುತ್ತೇವೆ, ಟೆಕ್ನಿಕಲ್ ಸ್ಯಾಂಕ್ಷನ್ ಕೊಡ ತೆಗೆದುಕೊಳ್ಳುತ್ತೇವೆ.

**ಶ್ರೀ ಎಚ್. ಬಿ ಜ್ವಾಲನಯ್ಯ .**– ಈ ಸಣ್ಣ ನೀರಾವರಿ ಯೋಜನೆಗಳ ಬಗ್ಗೆ ಸರ್ಕಾರ ಅಯಾಯ ತಾಲ್ಲೂಕು ಮಟ್ಟದಲ್ಲಿ ಕ್ರಮ ತೆಗೆದುಕೊಳ್ಳಬೇಕಾದರೆ ಯಾವ ವಿಧಿಯ, ನಿಯಮದ ಮೇಲೆ ಕ್ರಮ ತೆಗೆದುಕೊಳ್ಳುತ್ತಾರೆ? ಆ ಇನ್‌ವೆಸ್ಟಿಗೇಷನ್ ಯಾವ ರೀತಿ ಮಾಡುತ್ತಾರೆ? ಎಲ್ಲಿ ಅವಶ್ಯಕ ಅಂತ ಹೇಳುತ್ತಾರೆಯೋ ಅಲ್ಲಿ ಮಾಡುತ್ತಾರೆಯೇ ಅಥವಾ ರಾಜಕೀಯ ಒತ್ತಡದ ಮುಖಾಂತರ ಮಾಡಿ, ಆ ಒತ್ತಡ ಇಲ್ಲದೇ ಹೋದಾಗ ಅದನ್ನು ನಿಲ್ಲಿಸುತ್ತಾರೆಯೇ?

**ಶ್ರೀಮತಿ ಬಸವರಾಜೇಶ್ವರಿ.**– ಅಲ್ಲಿರತಕ್ಕ ಮಾನ್ಯ ಸದಸ್ಯರ ಮತ್ತು ಜನರ ಒಂದು ಬೇಡಿಕೆ ಮೇಲೆ ಕೂಡ ಸರ್ಕಾರ ಅದನ್ನು ವಿಚಾರ ಮಾಡುತ್ತದೆ. ಎಲ್ಲಿ ಕೆರೆಗಳು ಅವಶ್ಯಕ ಎಂಬುದನ್ನು ನೋಡುತ್ತೇವೆ. ಆ ರೀತಿ ಅಂದಾಜು ತಯಾರಾಗಿ ಕೆಲಸ ಪ್ರಾರಂಭ ಮಾಡುತ್ತಾರೆ. ಮಾನ್ಯ ಸದಸ್ಯರು ಹೇಳುವಂತೆ ಒತ್ತಾಯದಮೇಲೆ ಮಾಡಿವುದಿಲ್ಲ.

**ಶ್ರೀ ಎನ್. ಜಿ. ಹಾಲಪ್ಪ.**– ಇದು ವ್ಯಾಲ್ಯುಬಲ್ ಲ್ಯಾಂಡ್ ಅಂತ ಹೇಳಿದಿರಿ, ಟೆಂಡರ್ ಕರೆಯುವುದಕ್ಕೆ ಮುಂಚೆ ಇದು ಗೊತ್ತಿರಲಿಲ್ಲವೇ? ಹಾಗಿದ್ದ ಪಕ್ಷದಲ್ಲಿ ಯಾವ ರಾಜಕೀಯ ಕಾರಣಕ್ಕಾಗಿ ಇದನ್ನು ವ್ಯಾಲ್ಯುಬಲ್ ಲ್ಯಾಂಡ್ ಎಂದು ಹೇಳುತ್ತಾ ಇದ್ದೀರಿ?

**ಶ್ರೀಮತಿ ಬಸವರಾಜೇಶ್ವರಿ.**– ಸುಮಾರು 19 ಎಕರೆ ಡ್ರೈ ಲ್ಯಾಂಡ್, 5 ಎಕರೆ ಗಾರ್ಡನ್ ಲ್ಯಾಂಡ್ ಸಬ್‌ಮಜ್ ಆಗುತ್ತದೆ, ಅದಕ್ಕೂ ಕೂಡ ನಾವು ಕೊಟ್ಟಿರತಕ್ಕ ಪರಿಹಾರ ಬಹಳ ಕಡಿಮೆ. ಸ್ವಲ್ಪ ಹೆಚ್ಚು ಮಾಡಿರಿ ಎಂದು ಪುನಃ ಪುನಃ ಸಬ್‌ಮಜ್ ಆಗತಕ್ಕ ಓನರ್ಸ್ ಸರ್ಕಾರಕ್ಕೆ ಮನವಿ ಮಾಡುತ್ತಾ ಇದ್ದಾರೆ. ಮಾನವೀಯತೆ ದೃಷ್ಟಿಯಿಂದ ನೋಡಿಕೊಂಡು ಅದನ್ನು ವಿಚಾರ ಮಾಡಬೇಕೆಂದು ಮಾಡಿದ್ದೇವೆ.

**ಶ್ರೀ ದೊಡ್ಡ ಬೋರೇಗೌಡ.**– ಹೊಸ ಹೊಸ ಕೆರೆಗಳನ್ನು ನಿರ್ಮಾಣಮಾಡುವಾಗ ಮುಳುಗಡೆಯಾಗತಕ್ಕ ಪ್ರದೇಶಕ್ಕೆ ಒಂದಕ್ಕೆ ನಾಲ್ಕು ಪಟ್ಟು ಬೆಲೆಯಾಗತಕ್ಕಂಥವುಗಳಿಗೆ ಮಂಜೂರಾತಿ ಕೊಟ್ಟಿರುತ್ತೀರಿ. ಈ ಪ್ರಕಾರ ಹೇಗೆ ಕೊಟ್ಟಿರಿ ಎಂಬುದನ್ನು ತಿಳಿಸುತ್ತೀರಾ?

**ಶ್ರೀಮತಿ ಬಸವರಾಜೇಶ್ವರಿ.**– ಮಂಜೂರಾತಿ ಕೊಡಬಾರದು ಎಂಬುದನ್ನು ಸರ್ಕಾರದ ಅಭಿಪ್ರಾಯವಲ್ಲ. ಪುನಃ ಪುನಃ ಹೇಳಿದ್ದೇನೆ ಮತ್ತೆ ಅದನ್ನು ವಿಮರ್ಶೆ ಮಾಡುವುದಕ್ಕೆ ಹೋಗುವುದಿಲ್ಲ. ಈ ವಿಷಯಗಳು ಸರ್ಕಾರದ ಗಮನಕ್ಕೆ ಬಂದು ಇತ್ಯರ್ಥವಾದ ಮೇಲೆ ಕೆಲಸ ಪ್ರಾರಂಭ ಮಾಡುತ್ತಾರೆ ಎಂದು ಹೇಳಿದ್ದೇನೆ.

**ಶ್ರೀ ಎಫ್. ಎಸ್ ಪಾಟೀಲ್.**– ಇಲ್ಲಿ (ಸಿ) ಪ್ರಶ್ನೆಗೆ ಉತ್ತರವಾಗಿ ಇಲ್ಲ ಎಂದು ತಿಳಿಸಲಾಗಿದೆ ಈ ಪ್ಲಾನ್ ಮತ್ತು ಅಮದಾಜುಗಳನ್ನು ತಯಾರಿಸುವುದಕ್ಕೆ ಇನ್ನೂ ಎಷ್ಟು ಕಾಲ ಬೇಕಾಗಬಹುದು?

**ಶ್ರೀಮತಿ ಬಸವರಾಜೇಶ್ವರಿ.**– ಪ್ಲಾನ್ ಮತ್ತು ಎಸ್ಟಿಮೇಟಿಗಳನ್ನು ತಯಾರಿಸತಕ್ಕ ಹಂತಕ್ಕೆ ಇನ್ನೂ ಈ ವಿಚಾರ ಹೋಗಿಲ್ಲ. ಈಗತಾನೆ ಇನ್‌ವೆಸ್ಟಿಗೇಷನ್ ಕಾರ್ಯ ಮುಗಿದಿದೆ. ಈ ಯೋಜನೆಯನ್ನು ಕೈಗೊಂಡರೆ 5 ಲಕ್ಷ 10 ಸಾವಿರ ರೂಪಾಯಿಗಳ ಖರ್ಚು ಬರಬಹುದೆಂಬುದು ಅಂದಾಜು ಮಾಡಲಾಗಿದೆ. ಇಷ್ಟು ಹಣ ಖರ್ಚಾಗುವುದಾದರೆ ಇದು ಫೀಜಿಬಲ್ ಆಗುವುದಿಲ್ಲ. ಅದಕ್ಕಾಗಿ ಮೈಂಟನೆನ್ಸ್ ವೆಚ್ಚಗಳೂ ಜಾಸ್ತಿ ಬರಿತ್ತವೆ. ಇದನ್ನು ಈ ಕಾರಣಾಗಳಿಂದ ಮತ್ತೆ ರೀ ಇನ್‌ವೆಸ್ಟಿಗೇಟ್ ಮಾಡಬೇಕೆಂದು ತಿಳಿಸಿದೆ.

**ಶ್ರೀ ಎಫ್. ಎಸ್ ಪಾಟೀಲ್.**– ಈ ಕೆಲಸವನ್ನು ಕೈಗೊಳ್ಳುವಿದಕ್ಕಾಗೆ ಮುಂದಿನ ಬಜೆಟ್ಟಿನಲ್ಲಿ ಹಣವನ್ನು ಒದಗಿಸತಕ್ಕ ಭರವಸೆಯನ್ನು ಕೊಡುವುದಕ್ಕಾಗುವುದಿಲ್ಲವೇ?

**ಶ್ರೀಮತಿ ಬಸವರಾಜೇಶ್ವರಿ.**– ಕೇಂದ್ರ ಸರ್ಕಾರದವರ ಕೆಲವು ನಿಬಂಧನೆಗಳಿವೆ. ಆ ನಿಬಂಧನೆಗಳ ಪರಿಮಿತಿಯಲ್ಲಿ ಇದು ಬಂದರೆ ಸರಿ, ಇಲ್ಲವಾದರೆ ಇದನ್ನು ತೆಗೆದುಕೊಳ್ಳುವುದಕ್ಕಾಗುವುದಿಲ್ಲ.

**ಸರ್ಕಾರಿ ಆಸ್ಪತ್ರೆಗಳಲ್ಲಿ ಖಾಲಿ ವೈದ್ಯರ ಹುದ್ದೆಗಳು ಮತ್ತು ಆರೋಗ್ಯ ಕೇಂದ್ರ**

**ಶ್ರೀ ಕೆ. ನಾಗಪ್ಪ ಆಳ್ವ .**– ಉತ್ತರದಲ್ಲಿ ಕೊಟ್ಟಿರುವ ಸಂಖ್ಯೆಗೆ ಸಣ್ಣ ತಿದ್ದುಪಡಿ ಇದೆ. ಈಗ ಪಬ್ಲಿಕ್ ಸರ್ವಿಸ್ ಕಮಿಷನ್ ಸೆಲೆಕ್ಷನ್ ಆಗಿದ್ದು ಪೋಸ್ಟ್ ಗ್ರ್ಯಾಜ್ಯುಯೇಟ್ ಸ್ಟೇಟಿಸ್ಟಿನ ಡಾಕ್ಟರ್ರ್ಸ್ ಬಂದಿದ್ದಾರೆ. ಉತ್ತರ (ಎ) ನಲ್ಲಿ 517 ಎಂದು ಇರುವುದನ್ನು 319 ಎಂದು ಓದಿಕೊಳ್ಳತಕ್ಕದು; ಉತ್ತರ (ಬಿ) ನಲ್ಲಿ 209 ಮತ್ತು 308 ಎಂದಿರುವುದನ್ನು ಅನುಕ್ರಮವಾಗಿ 156 ಮತ್ತು 256 ಎಂದು ಓದಿಕೊಳ್ಳಬೇಕು.

**ಶ್ರೀ ಎ. ಜೆ. ದೊಡ್ಡಮೇಟಿ.**– ರಾಜ್ಯದಲ್ಲಿರುವ ಆಸ್ಪತ್ರೆಗಳ ಪ್ರಮಾಣ ನಗರಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಎಷ್ಟು ಇದೆ.?

**ಶ್ರೀ ಕೆ. ನಾಗಪ್ಪ ಆಳ್ವ .**– ರೂರಲ್ ಏರಿಯಾದಲ್ಲಿ 987 ಇವೆ. ಅರ್ಬನ್ ಏರಿಯಾದಲ್ಲಿ ಎಷ್ಟು ಇವೆ ಎಂಬುದಕ್ಕೆ ಖಚಿತವಾದ ಅಂಕಿ ಈಗ ನನ್ನ ಹತ್ತಿರ ಇಲ್ಲ. ಸುಮಾರು 45 ಇರಬಹುದು ಎಂದು ಅನಿಸುತ್ತದೆ.

**ಶ್ರೀ ಎ. ಜೆ. ದೊಡ್ಡಮೇಟಿ.**– ಉತ್ತರದಲ್ಲಿ ಹೇಳಿದ ಹಾಗೆ ಕ್ರಮ ತೆಗೆದುಕೊಂಡಿರುವುದರ ಪರಿಣಾಮವಾಗಿ ಹೆಚ್ಚಿಗೆ ಡಾಕ್ಟರ್ಸ್ ಬಂದಿದ್ದಾರೆಯೇ? ಇದಕ್ಕೆ ಕಾರಣವೇನು?

**ಶ್ರೀ ಕೆ. ನಾಗಪ್ಪ ಆಳ್ವ .**– ಈ ಕ್ರಮ ಕೈಕೊಂಡಿರುವುದರಿಂದ ಹೆಚ್ಚು ಡಾಕ್ಟರ್ಸ್ ಬಂದಿದ್ದಾರೆ. ಅಲ್ಲದೇ ಈ ಕೆಲಸ ಸಾಧ್ಯವಾದ ಮಟ್ಟಿಗೆ ಸರಿಯಾಗಿ ನಡೆಯುವುದಕ್ಕೆ ಅನರರಿ ಡಾಕ್ಟರ್ಸ್ ಅನ್ನು ಅಪಾಯಿಂಟ್ ಮಾಡಲು 176 ಪೋಸ್ಟ್ಸ್ ಕ್ರಿಯೇಟ್ ಮಾಡಿದೆ. ಇದರಲ್ಲಿ 113 ಡಾಕ್ಟರ್ಸ್ ಡಿಸ್ಟ್ರಿಕ್ಟ್ ಹಾಗು ತಾಲ್ಲೂಕ್ ಲೆವಲ್ಲಿನಲ್ಲಿ ಕೆಲಸ ಮಾಡುತ್ತಿದ್ದಾರೆ.

**ಶ್ರೀ ಸಿದ್ದಯ್ಯ ಕಾಶೀಮಠ.**– ರೂರಲ್ ಏರಿಯಾಗಳಲ್ಲಿ ಡಾಕ್ಟರುಗಳ ಕೊರತೆ ಬಹಳ ಇರುವುದರಿಂದ, ಮೈಸೂರು ಜಿ. ಎ. ಎಂ. ಎಸ್. ಪಾಸಾದ ಡಾಕ್ಟರಿಗೆ ನೌಕರಿ ಕೊಡುವುದಕ್ಕೆ ಸಾಧ್ಯವೆ?.

**ಎಸ್. ಗೋಪಾಲಗೌಡ.**– ಸ್ವಾಮಿ ಗ್ರಾಮಾಂತರ ಪ್ರದೇಶಗಳಲ್ಲಿ 308 ವೈದ್ಯರ ಹುದ್ದೆಗಳು ಖಾಲಿ ಇವೆಯೆಂದು ಹೇಳಿದ್ದೀರಿ. ಮಲೆನಾಡು ಪ್ರದೇಶದಲ್ಲಿ, ಅದರಲ್ಲಿಯೂ ಶಿವಮೊಗ್ಗ ಜಿಲ್ಲೆಯಲ್ಲಿ, ಎಷ್ಟುಕಡೆ ಡಾಕ್ಟರುಗಳು ಇಲ್ಲವೆಂದು ಹೇಳುವುದಕ್ಕೆ ಸಾಧ್ಯವೇ?

**ಶ್ರೀ ಕೆ. ನಾಗಪ್ಪ ಆಳ್ವ .**– ಪ್ರತ್ಯೇಕ ಪ್ರತ್ಯೇಕವಾಗಿ ಇಲ್ಲಿ ಅಂಕಿ ಸಂಖ್ಯೆಗಳಿಲ್ಲ.

**ಶ್ರೀ ಎಸ್. ಸುಬ್ಬಯ್ಯನಾಯಕ್.**– ಈಗ ಡಾಕ್ಟರುಗಳಿಲ್ಲದ ಆಸ್ಪತ್ರೆಗಳಲ್ಲಿ ಇನ್–ಚಾರ್ಜ್ ಅರೇಂಜ್ ಮೆಂಟು ಮಾಡಿದ್ದೇವೆಂದು ಹೇಳಿದಿರಿ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಳೆ ಬಂದು ನೆರೆ ಬಂದಾಗ, 4 ತಿಂಗಳಿಗೆ, ಸಾರಿಗೆ ಸಂಪರ್ಕವಿಲ್ಲದೆ, ಹೋಗುವುದಕ್ಕೆ ಸಾಧ್ಯವಿಲ್ಲ ; ಅಲ್ಲಿಗೆ ಪ್ರಥಮ ಪ್ರಾಶಸ್ತ್ಯ ಕೊಡಲು ಪ್ರಯತ್ನ ಮಾಡುತ್ತೀರಾ?

**ಶ್ರೀ ಅನ್ನದಾನಯ್ಯ.**– ಬೆಂಗಳೂರಿನಲ್ಲಿ ಬೌರಿಂಗ್ ಮತ್ತು ವಿಕ್ಟೋರಿಯ ಆಸ್ಪತ್ರೆಗಳಲ್ಲಿ ಕೆಲಸವಿಲ್ಲದೆ, ಹೆಚ್ಚು ಸಂಖ್ಯೆಯಲ್ಲಿ ಡಾಕ್ಟರುಗಳಿದ್ದಾರೆ. ಆ ಡಾಕ್ಟರುಗಳನ್ನು ಗ್ರಾಮಾಂತರ ಪ್ರದೇಶಗಳಿಗೆ ಏಕೆ ಟ್ರಾನ್ಸ್‌ಫರ್ ಮಾಡಬಾರದು?

**ಶ್ರೀ ಕೆ. ನಾಗಪ್ಪ ಆಳ್ವ.**– ಅದು ಸರಿಯಾದ ಅಭಿಪ್ರಾಯವಲ್ಲ. ನಿಜವಾಗಿ ನೋಡಿದರೆ, ಬೆಂಗಳೂರಿನಲ್ಲಿರುವ ಆಸ್ಪತ್ರೆಗಳಲ್ಲಿ ಕೂಡ ಡಾಕ್ಟರುಗಳು ಕಡಿಮೆ ಸಂಖ್ಯೆಯಲ್ಲಿದ್ದಾರೆ; ಅಲ್ಲಿರುವ

ಡಾಕ್ಟರುಗಳು ಸ್ಯಾಂಕನ್ಡ್ ಸ್ಟ್ರೆಂಗ್ತಿಗೆ ಸರಿಹೋಗುವುದಿಲ್ಲ. ಹೌಸ್ ಸರ್ಜನ್ನುಗಳು ಹೆಚ್ಚಾಗಿ ವರ್ಕ್ ಮಾಡುವುದರಿಂದ, ಹೆಚ್ಚಾಗಿ ಇದ್ದಹಾಗೆ ಕಾಣಬಹುದು.

**ಶ್ರೀ ಬಿ. ಭಾಸ್ಕರಶೆಟ್ಟಿ.**– ಸರಕಾರಿ ಮೆಡಿಕಲ್ ಕಾಲೇಜಿನಿಂದ ಎಂ. ಬಿ. ಬಿ. ಎಸ್ ಪಾಸಾಗಿ, ಬೆಂಗಳೂರಿನಲ್ಲಿ ಹೌಸ್ ಸರ್ಜನ್ ಆಗಿ ಟ್ರೇನಿಂಗ್ ಮುಗಿಸಿದ ಅನೇಕರು ಆಸ್ಪತ್ರೆಗಳಲ್ಲಿ ಇನ್ನೂ ಟೆಂಪೊರರಿಯಾಗಿ ಕೆಲಸ ಮಾಡುತ್ತಿದ್ದಾರೆ. ಅವರನ್ನು ಏಕೆ ಪೋಸ್ಟು ಮಾಡಬಾರದು;

**ಶ್ರೀ ಕೆ. ನಾಗಪ್ಪ ಆಳ್ವ .**– ಅಂಥವರೇನೂ ಇಲ್ಲ.ಹೌಸ್ ಸರ್ಜನ್ನಾಗಿ ಇಷ್ಟು ಸಮಯ ಕೆಲಸ ಮಾಡಬೇಕೆಂದಿದೆ; ಅಷ್ಟು ಸಮಯವಾದಮೇಲೆ ಅವರನ್ನು ಅಪಾಯಿಂಟ್ ಮಾಡಿದರೆ, ಅವರು ಆಸ್ಪತ್ರೆಗಳಲ್ಲಿರಬಹುದು.

**ಶ್ರೀ ಆರ್. ಎನ್. ಲಕ್ಷ್ಮೀಪತಿ.**–ಗ್ರಾಮಾಂತರ ಪ್ರದೇಶಗಳಲ್ಲಿ ಡಾಕ್ಟರ್ ಹುದ್ದೆಗಳು ಜಾಸ್ತಿ ಖಾಲಿ ಇವೆ, ನಗರ ಪ್ರದೇಶಗಳಲ್ಲಿ ಖಾಲಿ ಇರುವ ಸ್ಥಾನಗಳು ಕಡಿಮೆ. ನಗರ ಪ್ರದೇಶಗಳಲ್ಲಿ ಆನೊರರಿ ಡಾಕ್ಟರುಗಳನ್ನು ಇಟ್ಟಿದ್ದೀರ? ಅದರಿಂದ ಪ್ರೈವೇಟು ಪ್ರಾಕ್ಟೀಷನರುಗಳು ಸಿಗುತ್ತಾರೆ. ಹಾಗೆಯೆ ಆನೊರರಿ ವರ್ಕ್ ಮಾಡುವುದಕ್ಕೆ ಖಾಸಗಿ ಡಾಕ್ಟರುಗಳನ್ನು ಆಹ್ವಾನಿಸಿ ಗ್ರಾಮಾಂತರ ಪ್ರದೇಶಗಳಿಗೂ ಹಾಕುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಕೆ. ನಾಗಪ್ಪ ಆಳ್ವ .**– ಇದೀಗ ಹೇಳಿದ್ದೇನೆ, ಆನರರಿ ಸರ್ಜನ್ನಗಳನ್ನೂ ಮತ್ತು ಆನರರಿ ಅಸಿಸ್ಟೆಂಟು ಸರ್ಜನ್ನುಗಳನ್ನು ಬೇರೆ ಬೇರ ಕಡೆಗಳಲ್ಲಿ ಕ್ರಿಯೇಟು ಮಾಡುತ್ತಾ ಇದ್ದೇವೆಂದು.

**ಶ್ರೀ ಕೆ. ಪಿ. ರೇವಣಸಿದ್ದಪ್ಪ.**– ನಮ್ಮ ರಾಜ್ಯದ ಮೆಡಿಕಲ್ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಪಡೆದ ಡಾಕ್ಟರುಗಳು ಇಷ್ಟು ವರ್ಷ ನಮ್ಮ ಸರಕಾರದಲ್ಲಿ ಸರ್ವ್ ಮಾಡಬೇಕೆಂದು ಕಡ್ಡಾಯವಾಗಿ ವಿಧಿಸುವುದಕ್ಕೆ ನಿಯಮ ಮಾಡಿದ್ದೀರೋ?

**ಶ್ರೀ ಕೆ. ನಾಗಪ್ಪ ಆಳ್ವ .**– ಇದನ್ನು ಆಗಲೆ ಹಾಳಿದೆ. ಕಾಮನ್ ರಿಕ್ರೂಟ್ ಮೆಂಟ್ ರೂಲ್ಸ್ ಈಗ ಆಗುತ್ತಾ ಇದೆ. ಸಾಧಾರಣವಾಗಿ ಒಂದು ತಿಂಗಳಲ್ಲಿ ಕಾಮನ್ ರಿಕ್ರೂಟ್ ಮೆಂಟ್ ರೂಲ್ಸ್ ಪ್ರಕಾರ, ಪಿ.ಎಸ್.ಸಿ. ಮುಖಾಂತರ ಅಪಾಯಿಂಟ್ ಮಾಡುತ್ತೇವೆ.

**ಶ್ರೀ ಬಿ. ಬೈರಪ್ಪಾಜಿ.**– ಏಕರೀತಿ ನೇಮಕಾತಿ ನಿಯಮಾವಳಿಯನ್ನು ರಚಿಸಲಾಗುತ್ತದೆ ಎಂದು ಸರ್ಕಾರದವರು ಹೇಳಿದ್ದಾರೆ. ಈ ನಿಯಮಾವಳಿ ರಚಿತವಾಗುವ ತಾರೀಖು ಯಾವುದು? ಇದು ರಚಿತವಾದ ನಂತರ ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲಿಕ್ಕೆ ಸಾಧ್ಯ?

**ಶ್ರೀ ಗಂಗಾಧರ ಸಾಮೋಷಿ.–** ಮೈಸೂರು ಸಂಸ್ಥಾನದಲ್ಲಿ ಸಂಬಳ ಕಡಿಮೆ ಇದ್ದ ಕಾರಣ ಯಾರೂ ಡಾಕ್ಟರುಗಳು ಬರುದಿಲ್ಲ. ಸಂಬಳ ಹೆಚ್ಚಿಗೆ ಕೊಡ್ಡು ಅಟ್ರಾಕ್ಷನ್ ಮಾಡಿ ಬೇರೆ ಪ್ರಾಂತದಿಂದ ಕರೆಸಲಿಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಕೆ. ನಾಗಪ್ಪ ಆಳ್ವ .–** ಪ್ರಯತ್ನ ಮಾಡುತ್ತಾ ಇದ್ದೇವೆ ಎಂದು ಇದೀಗ ಹೇಳಿದೆ.

**ಶ್ರೀ ಎಸ್. ಗೋಪಾಲಗೌಡ.–** 517 ಖಾಲಿ ಬಿದ್ದ ಸ್ಥಾನಗಳಲ್ಲಿ 390 ಸ್ಥಾನಗಳು ಖಾಲಿ ಉಳಿದಿವೆ ಎಂದು ಹೇಳಿದಿರಿ. 390 ಜನರನ್ನು ಭರ್ತಿ ಮಾಡಲು ಡಾಕ್ಟರುಗಳು ಇಲ್ಲವೇ? ಅಥವಾ ಅವರು ಇದ್ದರೂ ಅವರನ್ನು ಆಕರ್ಷಣೆ ಮಾಡುವಷ್ಟು ಸಂಬಳ ಕೊಡದೇ ಇರುವುದರಿಂದ ಈ ಸ್ಥಳಗಳು ಖಾಲಿ ಬಿದ್ದಿವೆಯೇ? ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿ ಆಸ್ಪತ್ರೆಗಳನ್ನು ಪಾಳು ಬಿಡುವುದಕ್ಕಿಂತ ಅಲ್ಲಿ ಡಾಕ್ಟರುಗಳನ್ನು ಕಳುಹಿಸಿ ಭರ್ತಿ ಮಾಡುವುದಕ್ಕೆ ಸರ್ಕಾರದವರು ಇಚ್ಚಿಸಿದ್ದಾರೆಯೇ?

**ಶ್ರೀ ಕೆ. ನಾಗಪ್ಪ ಆಳ್ವ .–** 319 ವೇಕೆನ್ಸಿಗಳು ಇವೆ. ಒಂದು ವಿಚಾರವನ್ನು ಈ ಸಭೆಯ ಮುಂದೆ ಇಡಬೇಕಾಗುತ್ತದೆ. ಇದರಲ್ಲಿ 158 ಮಂದಿ ಪೋಸ್ಟ್ ಗ್ರಾಜುಯೇಟ್ಸ್ ಸ್ಟಡೀಸ್‌ನಲ್ಲಿ ಇದ್ದಾರೆ ಇದನ್ನೆಲ್ಲಾ ಭರ್ತಿ ಮಾಡಲಿಕ್ಕೆ ಬೇಕಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳತ್ತಾ ಇದ್ದೇವೆ.

**ಶ್ರೀಮತಿ ಬಸವರಾಜೇಶ್ವರಿ.–** ಈ ವರ್ಷ ಬಡ್ಜೆಟ್ಟಿನಲ್ಲಿ ಸೇರಿಸಿರುವ ಕೆಲಸ ಇನ್ನೂ ಪ್ರಾರಂಭವಾಗಿಲ್ಲದಿರಲು ಕಾರಣವೇನು?

**ಶ್ರೀ ಸಿದ್ದಯ್ಯ ಕಾಶೀಮಠ್.–** ಮೇಲಿಂದ ಮೇಲೆ ಸರಕಾರದವರು ಬೋರ್ಡಿನವರು ಉಪಕರಣಗಳಿಲ್ಲವೆಂದು ಹೇಳುತ್ತಿರುವುದನ್ನು ಗಮನಿಸಿ ಹೆಚ್ಚಾಗಿ ಅವನ್ನು ತರಿಸಲು ಏನಾದರೂ ಏರ್ಪಾಡು ಮಾಡಿರುವರೇ?

**1994 9ನೇ ಅಧಿವೇಶನ 10ನೇ ಲೋಕಸಭೆಯಲ್ಲಿ ಅಂದಿನ The Minister of state in the Minister of Human Resource development ನ ಸಚಿವೆಯಾಗಿ ಸಂಸದರ ಸಲಹೆ–ಮತ್ತು ಪ್ರಶ್ನೆಗಳಿಗೆ ಸಾಂತ್ವನದಿಂದ ಇಡೀ ಇಲಾಖೆಯ ನೀತಿ ರೀತಿಗಳನ್ನು ಲೋಕಸಭೆಯೊಳಗೆ ತೆರೆದಿಡುತ್ತಾ ವಿಷಯ ಮಂಡನೇ ಮಾಡುವ ಅವರ ವೈಖರಿಯನ್ನು ಅದರ ಸಾರವನ್ನು ಸವಿಯುವಾ–**

ಮಕ್ಕಳು ಮತ್ತು ಮಹಿಳಾ ಅಭಿವೃದ್ಧಿ ದಿಶೆಯಲ್ಲಿ ಅನೇಕ ಹೊಸ ಯೋಜನೆಗಳನ್ನು SAARC ಶೃಂಗ ಸಭೆ ನಂತರ ಅಳವಡಿಸಿ ಕೊಂಡಿದಲ್ಲಿ "ರಾಷ್ಟ್ರೀಯ ಮಹಿಳಾ ಕೋಶ" ಬಾಲವಾಡಿ ನ್ಯೂಟ್ರಿಷಿಯನ್ ಪ್ರೋಗ್ರಾಂ" 'ಮಹಿಳಾ ಸಂವೃದ್ಧಿ ಯೋಜನೆ' ಕುರಿತಂತೆ ತ್ವರಿತಗತಿಯಲ್ಲಿ ರಾಷ್ಟ್ರಾದ್ಯಂತ ಕ್ರಮ ಜರುಗಿಸಲಾಗಿದೆ.

ಮಹಿಳೆಯು ಸ್ವಾವಲಂಬಿಯಾಗಿ ಕುಟುಂಬದ ಆರ್ಥಿಕತೆಯಲ್ಲಿ ತೊಡಗಲು ಮಹಿಳಾ ಸಬಲೀಕರಣ ತುರ್ತಾಗಿ ರಾಷ್ಟ್ರಾದ್ಯಂತ ಆಗಬೇಕು ಮಕ್ಕಳಿಗೆ ಪೌಷ್ಠಿಕ ಆಹಾರ ದೊರೆಯಬೇಕು ಎಂಬ ಸದುದ್ದೇಶದಿಂದ ಕೈಕೊಳ್ಳಲಾದ ಯೋಜನೆಗಳನ್ನು ಕುರಿತಂತೆ ರಾಷ್ಟ್ರವ್ಯಾಪ್ತಿ ಚರ್ಚೆಯಾಗುತ್ತಿರುವುದು ಸ್ವಾಗತಾರ್ಹ.

ಮಾನ್ಯ ಸಂಸತ್‌ಸದಸ್ಯರು ನೀಡಿರುವ ಸಲಹೆಸೂಚನೆಗಳನ್ನು ಪರಿಶೀಲನೆ ಮಾಡುವುದಲ್ಲದೇ ಶೀಘ್ರ ಪರಿಹಾರ ಕಲ್ಪಿಸಲಾಗುವುದು ಮಹಿಳೆ ಮೇಲೆ ಅದರಲ್ಲೂ ದಲಿತ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯ ಕುರಿತಂತೆ ಸರ್ಕಾರ ಕಠಿಣ ಕ್ರಮ ಜರುಗಿಸುವುದಲ್ಲದೇ-ಅದರಲ್ಲಿ ರಾಜೀ ಮನೋಭಾವನೆ ಇಲ್ಲವೇ ಇಲ್ಲ. ಗ್ರಾಮೀಣ ಅನಕ್ಷರಸ್ತ ಮಹಿಳೆಯರ ಮೇಲೆ ಇಂಥ ಅನಾಗರಿಕ ದೌರ್ಜನ್ಯಗಳು-ನಡೆಯುತ್ತಿರುವುದು ಗಮನಕ್ಕೆ ಬಂದಿರುತ್ತದೆ. ಇಂಥ ಅನಿಷ್ಟಗಳ ವಿರುದ್ಧ ದನಿಎತ್ತಲು ಮಹಿಳೆಯರನ್ನು ಜಾಗ್ರತೆಗೊಳಿಸಲು ಅರಿವುಕಾರ್ಯಕ್ರಮ ಕೈಕೋಳ್ಳಲಾಗುವುದು ಇಂಥ Awarness ಮಾಡಿಸಲು ಸ್ವಯಂ ಸೇವಾ ಸಂಘ ಸಂಸ್ಥೆಗಳ ನೆರವನ್ನು ಸರ್ಕಾರ ಪಡೆದುಕೊಂಡು ಸಾಮಾಜಿಕವಾಗಿ ಶೈಕ್ಷಣಿಕವಾಗಿ ಆರ್ಥಿಕವಾಗಿ ಮಹಿಳೆಯರನ್ನು ಮೇಲೆತ್ತುವ ಕಾರ್ಯಕ್ರಮವನ್ನು ಸರ್ಕಾರ ರೂಪಿಸುವುದು.

ರಾಜಕೀಯದಲ್ಲಿ ಮಹಿಳೆ ಪಾತ್ರ ಕುರಿತಂತೆ ಪಂಚಾಯತಿಯಿಂದ ಮುನ್ನದಿಂದ ಸಂಸತ್‌ವರೆಗೆ ಮಹಿಳಾ ಮೀಸಲಾತಿಯನ್ನು ಜಾರಿಗೆ ತರಲಾಗುವುದು ಎಂದು ಅವರು ಎಲ್ಲಾ ಅಂಕಿ ಅಂಶಗಳೊಂದಿಗೆ ಲೋಕಸಭೆಯಲ್ಲಿ ವಿಷಯಮಂಡಿಸುತ್ತಾರೆ.

# ಅರಬೈಲುಕಟ್ಟೆ ಡ್ಯಾಂ

6ನೇ ಅಧಿವೇಶನಗಳಲ್ಲಿ ಸಣ್ಣನೀರಾವರಿ ಸಚಿವರ ಏವರವಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವೆಯಾಗಿ ಉತ್ತರಿಸುವ ಕೆಲವು ಉದಾಹರಣೆಗಳು.

ಮೈನರ್ ಇರಿಗೇಷನ್ ಸಚಿವರಾದ ಮಾನ್ಯ ಶ್ರೀ A. J. ದೊಡ್ಡಮೇಟಿ ಅವರ ಪರವಾಗಿ ಶ್ರೀಮತಿ ಬಸವರಾಜೇಶ್ವರಿ ರವರು ಮಾನ್ಯ ಸದಸ್ಯರಾದ ಬಾಸ್ಕರ್‌ಶೆಟ್ಟಿ ರವರ ಪ್ರಶ್ನೆಗಳಿಗೆ ಸ್ವಾರಸ್ಯಕರವಾಗಿ ಉತ್ತರಿಸಿದ್ದಾರೆ ಕೆಳಗಿನ ಉದಾ : ನೋಡಬಹುದು

**ಶ್ರೀ ಬಿ. ಬಾಸ್ಕರ್‌ಶೆಟ್ಟಿ.**-(ಇ) ಪ್ರಶ್ನೆಗೆ ಉತ್ತರವಾಗಿ 'ವೆಂಟೆಡ್' ಡ್ಯಾಮ್ ತೃಪ್ತಿಕರವಾಗಿ ಕೆಲಸ ಮಾಡಲಿಲ್ಲ ಎಂದು ಹೇಳಿದ್ದಾರೆ. ಅದಕ್ಕೆ ಕಾರಣವೇನು?

**ಶ್ರೀಮತಿ ಬಿ. ಬಸವರಾಜೇಶ್ವರಿ.**-ಈ ಬಗ್ಗೆ ಸ್ವಲ್ಪ ದೊಡ್ಡ ಇತಿಹಾಸ ಇದೆ. ಕಾರಣವೇನೆಂದರೆ ಮೊದಲು ಈ ಡ್ಯಾಮನ್ನು ಮದ್ರಾಸ್ ಸರ್ಕಾರದವರು ಕಟ್ಟಿದ್ದು. ಈ ಡ್ಯಾಮಿನ ಎತ್ತರವನ್ನು ಹೆಚ್ಚಿಸಿ ನೀರನ್ನು ಹೆಚ್ಚು ಶೇಖರಣೆ ಮಾಡಬೇಕೆಂದು ವಿಚಾರ ಇತ್ತು. ಈ ರೀತಿ ಮಾಡಿದರೆ ಖರ್ಚು ಹೆಚ್ಚು ಬರುತ್ತದೆಂದು ಅದನ್ನು ಕೈಬಿಡಲಾಯಿತು. ಈಗ ರೈತರೇ ಮಣ್ಣಿನ ಅಣೆಕಟ್ಟುಗಳನ್ನು ಕಟ್ಟಿಕೊಂಡು ನೀರನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಈಗ ಈ ಡ್ಯಾಮನ್ನು ರಿಪೇರಿ ಮಾಡಿದರೆ ರೈತರಿಗೆ ಅನುಕೂಲವಾಗುತ್ತದೆಯೇ ಎಂಬುದನ್ನು ಸರ್ಕಾರದ ಪರಿಶೀಲನೆಯಲ್ಲಿದೆ.

**ಶ್ರೀ ಬಿ. ಭಾಸ್ಕರ್ ಶೆಟ್ಟಿ.**– ಈ ವೆಂಟೆಡ್ ಡ್ಯಾಮ್‌ನಿಂದ 1959–60ನೇ ಸಾಲಿನಿಂದಲೂ ಕೂಡ ಒಂದು ಇಂಚ್ ಪ್ರದೇಶಕ್ಕೂ ಕೂಡ ನೀರು ಹೋಗದೇ ಇರುವುದರಿಂದ ಆ ಭಾಗದಲ್ಲಿ ನೀರಾವರಿ ತೆರಿಗೆಯನ್ನು ಹಾಕದಂತೆ ನೋಡಿಕೊಳ್ಳುತ್ತೀರಾ?

**ಶ್ರೀಮತಿ ಬಿ. ಬಸವರಾಜೇಶ್ವರಿ.**:– ಮೊದಲು 44 ಎಕರೆ ಪ್ರದೇಶಕ್ಕೆ ಮೂರು ಬೆಳೆ ಬೆಳೆಯಲು ನೀರನ್ನು ಈ ಡ್ಯಾಮ್ ನಿಂದ ಒದಗಿಸಬಹುದೆಂಬ ಅಂದಾಜಿತ್ತು. ಮತ್ತು ವಾಟರ್ ರೇಟನ್ನು ಕಲೆಕ್ಟ್ ಮಾಡುವ ವಿಚಾರದಲ್ಲಿ ಗೆಜಿಟ್‌ನಲ್ಲಿ ಪ್ರಕಟಿಸಲಾಗಿತ್ತು. ಆದರೆ ನೀರಿನ ತೆರಿಗೆಯನ್ನು ಕಲೆಕ್ಟ್ ಮಾಡಿಲ್ಲ.

**ಶ್ರೀ ಬಿ. ಭಾಸ್ಕರ್ ಶೆಟ್ಟಿ.**– ನೀರಿನ ತೆರಿಗೆಯನ್ನು ಕಲೆಕ್ಟ್ ಮಾಡದೆ ಮಾಫಿ ಮಾಡುತ್ತೀರಾ?

**ಶ್ರೀಮತಿ ಬಿ. ಬಸವರಾಜೇಶ್ವರಿ.**– ಇದುವರೆಗೆ ಕಲೆಕ್ಟ್ ಮಾಡಿಲ್ಲ, ಕಲೆಕ್ಟ್ ಮಾಡಬೇಕೇ ಬೇಡವೇ ಎಂಬುದನ್ನು ಸರ್ಕಾರ ವಿಚಾರ ಮಾಡುತ್ತದೆ.

ಅದೇರೀತಿ ಹೊಳೆನರಸೀಪುರದ ಮುಖ್ಯ ಶಾಸಕರಾಗಿದ್ದ, ಈಗಿನ ಮಾಜಿ ಪ್ರಧಾನಿ ಶ್ರೀ ದೇವೇಗೌಡರ ಪ್ರಶ್ನೆಗಳಲ್ಲಿ ಸಣ್ಣ ನೀರಾವರಿ ಸಚಿವರ ಪರವಾಗಿ ಶ್ರೀಮತಿ ಬಸವರಾಜೇಶ್ವರಿಯವರು ಹಾಡಿರುವ ಉತ್ತರವನ್ನು ನೋಡಬಹುದು.

**ಶ್ರೀ ಎಚ್.ಡಿ. ದೇವೇಗೌಡ (ಹೊಳೆನರಸೀಪುರ).–** 63ನೇ ನಿಯಮದ ಮೇರೆಗೆ ಜರೂರಾದ ಸಾರ್ವಜನಿಕ ಪ್ರಮುಖ್ಯತೆಯ ವಿಚಾರವನ್ನು ಎಂದರೆ ಹೊಳೇನರಸೀಪುರದ ಮುನ್ಸೀಫ್ ನ್ಯಾಯಾಲಯದವರು ಹೊಳೇನರಸೀಪುರದ ಸರ್ಕಾರಿ ಉರ್ದು ಮಾಧ್ಯಮಿಕ ಶಾಲಾಕಟ್ಟಡವನ್ನು ಜಫ್ತಿ ಮಾಡಿರುವ ವಿಚಾರವನ್ನು ಸಣ್ಣ ನೀರಾವರಿ ರಾಜ್ಯ ಮಂತ್ರಿಗಳ ಗಮನಕ್ಕೆ ತರುವುದು, ಈ ವಿಚಾರವನ್ನು ಸಭೆಯ ಮುಂದೆ ಇಟ್ಟಿದ್ದೇನೆ.

ಕಳೆದ 3 ವರ್ಷದ ಹಿಂದೆ ಕೊಟ್ಟಂಥ ಹೇಳಿಕೆಗೂ ಇವತ್ತು ಕೊಟ್ಟಂಥ ಹೇಳಿಕೆಗೂ ವ್ಯತ್ಯಾಸವಿದೆ, 18,750 ರೂಪಾಯಿನಲ್ಲಿ ಅಕ್ವೀಸಿನ್ ಹಣ ಸೇರಿತ್ತು ಎಂಬುದನ್ನು ಸತ್ಯಕ್ಕೆ ದೂರವಾದುದಲ್ಲವೇ? ಒರಿಜಿನಲ್ ಎಸ್ಟಿಮೇಟ್ ಮಾಡುವಾಗ ಅಕ್ವೀಸಿಷನ್‌ಗೆ ಪ್ರಪೋಸಲ್ ಮಾಡದೇ ಶಾಲೆ ಕಟ್ಟಿದ್ದರಿಂದ ಇಷ್ಟು ಕಾಲ ಹಿಡಿಯಿತು ಎಂಬುದನ್ನು ಸರ್ಕಾರಕ್ಕೆ ಗೊತ್ತಿಲ್ಲವೇ ?

**ಶ್ರೀಮತಿ ಬಿ. ಬಸವರಾಜೇಶ್ವರಿ.–** ಮೊದಲು ಇನಿಷಿಯೇಟ್ ಮಾಡಿದ್ದು 2600 ರೂಪಾಯಿ ಕಾಂಪೆನ್‌ನೇಷನ್. ಲ್ಯಾಂಡ್ ಅಕ್ವಿಸಿಷನ್ ಇನಿಷಿಯೇಟ್ ಮಾಡಿ ಆ ಜಮೀನು ತೆಗೆದುಕೊಂಡಿದ್ದಾರೆ, ಮುಂದೆ ಲ್ಯಾಂಡ್ ಅಕ್ವಿಸಿಷನ್ ಪ್ರೊಸೀಡಿಂಗ್ಸ್ 4–6ನೇ ನಂಬರ್ ನೋಟಿಫಿಕೇಷನ್ ಆದಮೇಲೆ ಕ್ರಾಪ್ ಕಾಂಪೆನ್ನೇಷನ್ ಕೊಡಬೇಕೆಂದು ಪುನಃ ಪುನಃ ಮನವಿ ಮಾಡಿದರು. ಸಿವಿಲ್ ಕೋರ್ಟ್‌ನಲ್ಲೂ ಕೂಡ ಕೇಸ್ ಫೈಲ್ ಮಾಡಿ ಹೆಚ್ಚು ಹಣ ಕೊಡಬೇಕೆಂದು ಡಿಕ್ರಿ ಪಾಸ್ ಆಯಿತು 6 ಪರ್ಸೆಂಡ್ ಇಂಟರೆಸ್ಟ್ ಮತ್ತು ಅದರ ಜೊತೆಗೆ ಕ್ರಾಪ್ ಕಾಂಪೆನೇಷನ್ ಎಲ್ಲಾ ಸುಮಾರು 3 ಸಾವಿರ ರೂಪಾಯಿ ಕೂಡಬೇಕೆಂದು ಡಿಕ್ರಿ ಪಾಸ್ ಆಯಿತು. ಆ ಅಮೌಂಟ್ ಸಹ ಕೊಟ್ಟದ್ದು ಆಗಿದೆ.

13.5 ಲಕ್ಷ ರೂಪಾಯಿಗಳು.

**ಶ್ರೀ ಕೆ. ಎಚ್. ರಂಗನಾಥ್.** (ಈ)ಗೆ ಉತ್ತರವಾಗಿ ಐದು ಚದರಮೈಲಿಗಳ ಪ್ರದೇಶವಿರುವ ಸ್ವಾವಲಂಬಿ ಜಲಾನಯನ ಪ್ರದೇಶವೊಂದು ನೀರೊದಗಿಸುವ ಮೂಲವಾಗಿದೆ ಎಂದು ಹೇಳಿದ್ದೀರಿ. ಈ ಕೆರೆಗೆ ನೀರನ್ನು ಒದಗಿಸಲು ಯಾವುದಾದರು ಅಣೆಕಟ್ಟೆ ಅಥವಾ ಹಳ್ಳವನ್ನು ಆಧಾರವಾಗಿ ಇಟ್ಟು ಕೊಂಡಿದ್ದೀರಾ ?

**ಶ್ರೀಮತಿ ಬಸವರಾಜೇಶ್ವರಿ.–** ಈ ಕೆರೆಗೆ ಹೊನ್ನಮ್ಮನ ಹಳ್ಳದ ನೀರನ್ನು ಒದಗಿಸದಿದ್ದರೆ ಆ ಕೆರೆಯನ್ನು ಭರ್ತಿ ಮಾಡುವುದು ಕಷ್ಟವಾಗುತ್ತದೆ.

**ಶ್ರೀ ಕೆ. ಎಚ್. ರಂಗನಾಥ್.**– ಈ ಕೆರೆಗೆ ಪೂರ್ತಿಯಾಗಿ ಯಾವ ಯಾವ ಕಡೆಗಳಿಂದ ಎಷ್ಟೆಷ್ಟು ನೀರನ್ನು ಒದಗಿಸುವುದಕ್ಕೆ ಸರ್ವೆ ಮಾಡಿದ್ದಾರೆ?

**ಶ್ರೀಮತಿ ಬಸವರಾಜೇಶ್ವರಿ.**– ಹೊನ್ನಮ್ಮನಹಳ್ಳ ದಾಸರಹಳ್ಳಿ ಹಳ್ಳದ ಜೊತೆಗೆ ಒರಿಕೊಳ್ಳಹಳ್ಳಿ, ಮಾಡಗಹಳ್ಳಿ ಹಳ್ಳಗಳಿಂದಲೂ ಕೂಡ ನೀರನ್ನು ತಿರುಗಿಸಬೇಕೆಂಬ ಪ್ರಪೋಜಲ್ ಇದೆ. ಈಗ ಇನ್ವೆಸ್ಟಿಗೇಷನ್ ಸ್ಟೇಜ್‌ನಲ್ಲಿದೆ. ಇನ್ವೆಸ್ಟಿಗೇಷನ್ ಆದಮೇಲೆ ಅಂಕಿಅಂಶಗಳನ್ನು ಒದಗಿಸುವುದಕ್ಕೆ ಸಾಧ್ಯವಾಗಬಹುದು, ಸದ್ಯಕ್ಕೆ ಹೇಳುವುದಕ್ಕಾಗುವುದಿಲ್ಲ.

**ಶ್ರೀ ಕೆ. ಎಚ್. ರಂಗನಾಥ್.**– ಹೊನ್ನಮ್ಮನ ಹಳ್ಳದಿಂದ ನೀರನ್ನು ಈ ಕರೆಗೆ ತಿರುಗಿಸಬೇಕೆಂದು ಮಾನ್ಯ ಮುಖ್ಯಮಂತ್ರಿಗಳಿಗೆ ಒಂದು ರೆಪ್ರಜೆಂಟೇಷನ್ ಕೊಟ್ಟಿದ್ದೆವು. ಈ ಬಗ್ಗೆ ಮುಖ್ಯಮಂತ್ರಿಗಳು ಆರ್ಡರ್ ಮಾಡಿದ್ದಾರೆಂದು ತಿಳಿದುಬಂತು. ಆದ್ದರಿಂದ ಈ ಬಗ್ಗೆ ಸರ್ವೆ ಕೆಲಸ ಮಾಡಲಾಗಿದೆಯೇ ಮತ್ತು ನೀರನ್ನ ಒದಗಿಸುವ ವ್ಯವಸ್ಥೆಯನ್ನು ಮಾಡಲಾಗಿದೆಯೇ? ಏಕೆಂದರೆ 13 ಲಕ್ಷ ರೂಪಾಯಿಗಳನ್ನು ಖರ್ಚುಮಾಡಿ ನೀರು ಇಲ್ಲದಿರುವ ಪರಿಸ್ಥಿತಿ ಬಂದರೆ ಕಷ್ಟವಾಗುತ್ತದೆ.

**ಶ್ರೀಮತಿ ಬಸವರಾಜೇಶ್ವರಿ.**– ಈಗಾಗಲೇ ಪ್ರಪೋಜಲ್ ಇನ್ವೆಸ್ಟಿಗೇಷನ್ ಸಲುವಾಗಿ ಎಕ್ಸಿಕ್ಯುಟಿವ್ ಇಂಜಿನಿಯರ್ ನಂಬರೆ–2 ಮೇಜರ್ ಇರಿಗೇಷನ್ ಅಂಡ್ ಇನ್ವೆಸ್ಟಿಗೇಷನ್ ಡಿವಿಜನ್ ಅವರಿಗೆ ಕಳಿಸಲಾಗಿದೆ. ಅವರು ಇನ್ವೆಸ್ಟಿಗೇಷನ್ ಮಾಡುತ್ತಿದ್ದರೆ.

**ಶ್ರೀ ಎನ್. ಜಿ ಹಾಲಪ್ಪ**– ಈ ಕೆರೆಯ ಕೆಲಸವನ್ನು ಯಾವ ಕಂಟ್ರಾಕ್ಟರ್‌ಗೆ ವಹಿಸಲಾಗಿದೆ; ಮತ್ತು ಈ ಎಷ್ಟು ಎಕರೆಗೆ ನೀರಾವರಿಯಾಗುತ್ತಿದೆ ?

**ಶ್ರೀಮತಿ ಬಸವರಾಜೇಶ್ವರಿ.**– ಯಾವ ಕಂಟ್ರಾಕ್ಟರ್ ಎಂಬುದು ಸರ್ಕಾರದ ಗಮನಕ್ಕೆ ಬಂದಿಲ್ಲ. ಈ ಕರೆಯಿಂದ 910 ಎಕರೆ ನೀರಾವರಿಯಾಗುತ್ತದೆಂದು ಸರ್ಕಾರಿ ಗಮನಕ್ಕೆ ಬಂದಿಲ್ಲ.

1956-57 ರಲ್ಲಿ 3 ಲಕ್ಷ ರೂಪಾಯಿಗಳಿಗೆ ಅಂದಾಜನ್ನು ತಯಾರು ಮಾಡಲಾಗಿತ್ತು. ಈಗಿನ ಪರಿಸ್ಥಿತಿಗೆ ಅನುಗುಣವಾಗಿ ಈ ಅಂದಾಜಿನ ಮೊತ್ತ ಹೆಚ್ಚಾಗುತ್ತ ಹೋಗಿದೆ.

**ಶ್ರೀ ಮಹದೇವ್ ಜಿ. ಬಣಕಾರ್.**–ಕೆರೆಯ ಕಂಟ್ರಾಕ್ಟರ್ ಯಾವ ಜಿಲ್ಲೆಯವರು ಎನ್ನುವುದನ್ನು ಹೇಳುವುದಕ್ಕಾಗುತ್ತದೆಯೇ?

**ಶ್ರೀಮತಿ ಬಸವರಾಜೇಶ್ವರಿ.**– ಈ ವಿಷಯ ನನ್ನ ಮುಂದಿಲ್ಲ.

**ಶ್ರೀ ಬಿ.ಪಿ. ಗಂಗಾಧರ್.–** 1956-57 ರಿಂದ 1969 ನೇ ಇಸವಿಯವರೆಗೆ ಒಂದಲ್ಲ ಒಂದು ರಿವೈಸು ಮಾಡಿರುವ ಅಂದಾಜುಗಳು ಬರುತ್ತಿರುವುದರಿಂದ ಒಂದೊಂದು ಕೆರೆ ನಿರ್ಮಾಣವಾಗಬೇಕಾದರೆ ನೂರು ವರ್ಷಗಳೇ ಆಗುತ್ತದಲ್ಲವೇ ?

**ಶ್ರೀಮತಿ ಬಸವರಾಜೇಶ್ವರಿ.–** 100 ವರ್ಷಗಳು ಏನೂ ಆಗುವುದಿಲ್ಲ. ಪರಿಶೀಲನೆ ಮಾಡುವಾಗ ಕೆಲವು ವೇಳೆ ಇನ್ನೂ ಹೆಚ್ಚು ನೀರಾವರಿಯಾಗುವ ಅನುಕೂಲ ಇದೆ ಎಂದು ಪ್ರಪೋಸಲ್‌ಗಳು ಬಂದುದರಿಂದ ಕೆಲವು ವೇಳೆ ಬದಲಾವಣೆಯಾಗುತ್ತದೆ.

**ಅಧ್ಯಕ್ಷರು.–** ಪ್ರಶ್ನೋತ್ತರ ವೇಳೆಯಾಯಿತು. Now Short Notice Question.

1965 ಮಾರ್ಚ್ 17 ರಂದು ಜರುಗಿದ 5 ನೇ ಅಧಿವೇಶನದಲ್ಲಿ ಮಾನ್ಯ ಸದಸ್ಯರು ಮತ್ತು ಶ್ರೀಮತಿ ಬಸವರಾಜೇಶ್ವರಿ ಮಧ್ಯ ನಡೆದ ಪ್ರಶ್ನೋತ್ತರಗಳು– ಚುಟುಕಾಗಿ ಖಾರ ಮಂಡಿಸುವ ಪ್ರಶ್ನೆಗಳನ್ನು ಬಸವರಾಜೇಶ್ವರಿಯವರು ಹಾಕುವುದು ಅದಕ್ಕೆ ಪೆನ್ನಾಂಬಿಡದೆ ಉತ್ತರವನ್ನು ನಿರೀಕ್ಷಿಸುವುದು ಕುತುಹಲಕರವಾಗಿದೆ ಗಮನಿಸುವಾ

**ಶ್ರೀ ಕುಂದೂರು ರುದ್ರಪ್ಪ.–** ಶಿವಮೊಗ್ಗಾದಲ್ಲಿ 6 ಕೆರೆಗಳನ್ನ ಮೈನರ್ ಇರೀಗೆಷನ್ ವರ್ಕ್ಸ್‌ನಲ್ಲಿ ತೆಗೆದುಕೊಂಡಿದೆ ಎಂಬುದಾಗಿ ಹೇಳಿದ್ದೀರಿ. ಅವು ಯಾವುವು?

**ಶ್ರೀ ಆಲೂರು ಹನುಮಂತಪ್ಪ.–** ಅದು ಒಂದು ಪಟ್ಟಿ ಇದೆ. ಮಾನ್ಯ ಸದಸ್ಯರು ಅದನ್ನು ಕೇಳಿದರೆ ಕೊಡುತ್ತೇನೆ.

**ಅಧ್ಯಕ್ಷರು.–**ಪಟ್ಟಿಯನ್ನು ಮಂತ್ರಿಗಳು ಕೊಡುತ್ತಾರೆ, ಅದನ್ನು ಓದಿ ನೋಡಿ.

**ಶ್ರೀಮತಿ ಬಸವರಾಜೇಶ್ವರಿ.–** ಪರಿಶಿಷ್ಟದಲ್ಲಿ ರಾಯಚೂರು ಜಿಲ್ಲೆಯಲ್ಲಿ ಕೇವಲ ಎರಡು ಮೈನರ್ ವರ್ಕ್ಸನ್ನು ಮಾತ್ರ ತಗೆದುಕೊಂಡಿದೆ ಎಂಬುದಾಗಿ ಹೇಳಿದ್ದೀರಿ. ಅವು ಯಾವುವು? ಇಲ್ಲಿಯವರೆಗೂ ಆ ಕೆಲಸಗಳನ್ನು ಪ್ರಾರಂಭಮಾಡದೇ ಇರುವುದಕ್ಕೆ ಕಾರಣಗಳೇನು?

**ಶ್ರೀ ಆಲೂರು ಹನುಮಂತಪ್ಪ.–** ಪಟ್ಟಿ ಕೊಡುತ್ತೇನೆ. ಅದರಲ್ಲಿ ನೋಡಬಹುದು.

**ಶ್ರೀಮತಿ ಬಸವರಾಜೇಶ್ವರಿ.–** ಹೆಸರು ಕೇಳಿ. ಕೇವಲ ಎರಡೇ ಇರುವುದು.

**ಶ್ರೀ ಕುಂದೂರು ರುದ್ರಪ್ಪ.–** ಪಾಯಿಂಟ್ ಆಫ್ ಆರ್ಡರ್. ನಾನು ಕೇಳಿದ ಪ್ರಶ್ನೆಗೆ ಹೆಸರುಗಳನ್ನು ಹೇಳುವುದಿಲ್ಲ ಎಂದರು. ತಾವು ಸಹ ಅದಕ್ಕೆ ಅಲೋ ಮಾಡುವುದಿಲ್ಲವೆಂದಿರಿ. ಅವರಿಗೆ ಕೇವಲ ಎರಡು ಇರುವುದರಿಂದ ಆ ಹೆಸರುಗಳನ್ನು ಹೇಳಿ ಎಂದು ತಾವೇ ಅದಕ್ಕೆ ಅಲೋ ಮಾಡುತ್ತಿದ್ದೀರಿ. ಇದಕ್ಕೆ ಕಾರಣವೇನು ? ನಮ್ಮ ಜಿಲ್ಲೆಗೆ ಸಂಬಂಧಪಟ್ಟಿದರಲ್ಲಿ ಮೂರು ಹೆಸರುಗಳೇನಾದರೂ ಹೇಳಿರಿ.

**ಅಧ್ಯಕ್ಷರು.**– ಮಾನ್ಯ ಸದಸ್ಯರು ಮೆಲ್ಲಗೆ ಮಾತನಾಡಿದರೆ ಒಳ್ಳೆಯದು. ಅವರು ಸಂಪೂರ್ಣ ಸಮಾಧಾನವಾಗಬೇಕು. ಅವಸರಮಾಡಬಾರದು. ಅವರಿಗೂ ಸಮಯ ಕೊಡುತ್ತೇನೆ.

**ಶ್ರೀ ಕುಂದೂರು ರುದ್ರಪ್ಪ.**– ಬೇರೊಬ್ಬ ಸದಸ್ಯರಿಗೆ ಹೆಸರುಗಳನ್ನು ಹೇಳುವಾಗ ನನ್ನ ಪ್ರಶ್ನೆಗನುಗುಣವಾಗಿ 3 ಹೆಸರುಗಳನ್ನಾದರೂ ಉಪಮಂತ್ರಿಗಳು ಹೇಳಲಿ. ಅಧ್ಯಕ್ಷರಿಗೆ ನನ್ನಮೇಲೆ ಅಷ್ಟು ಅಭಿಮಾನವಿಲ್ಲದಿದ್ದರೆ ನಾನು ಪ್ರಶ್ನೆ ಹಾಕುವುದನ್ನೆ ನಿಲ್ಲಿಸಿಬಿಡುತ್ತೇನೆ.

**ಅಧ್ಯಕ್ಷರು.**– ಶ್ರೀಮಾನ್ ಕುಂದೂರು ರುದ್ರಪ್ಪನವರು ನನಗೆ ಪರಮಮಿತ್ರರು. ಅವರಿಗೂ ಅವಕಾಶವನ್ನು ಕೊಡುತ್ತೇನೆ.

**ಶ್ರೀ ಕುಂದೂರು ರುದ್ರಪ್ಪ.**– ನಾನು ಶಿವಮೊಗ್ಗಾ ಜಿಲ್ಲೆಯವನಾದ್ದರಿಂದ ಆ ಜಿಲ್ಲೆಗೆ ಸಂಬಂಧಪಟ್ಟ ಪ್ರಶ್ನೆಯನ್ನು ಕೇಳುವುದಕ್ಕೆ ನನಗೆ ಇಲ್ಲಿ ಅಲೋ ಮಾಡದಿದ್ದರೆ ಹೇಗೆ? ನಾನು ಬೇರೆ ಜಿಲ್ಲೆಗಳ ವಿಷಯವನ್ನು ಕೇಳುವುದಕ್ಕೆ ಹೋಗುವುದಿಲ್ಲ. ನನ್ನ ಜಿಲ್ಲೆಗೆ ಸಂಬಂಧಪಟ್ಟುದನ್ನು ಮಾತ್ರ ಕೇಳುತ್ತೇನೆ.

ಶಿವಮೊಗ್ಗ ಜಿಲ್ಲೆಯ 6 ಕೆರೆಗಳು ಯಾವ ತಾಲ್ಲೂಕಿನವು? ಹೆಸರುಗಳನ್ನು ಹೇಳಿ ಅಂದರೆ ಪಟ್ಟಿ ಕೊಡುತ್ತೇನೆ, ಅದರಲ್ಲಿ ನೋಡಿ ಎಂದು ಹೇಳುತ್ತಾರೆ. ಬೇರೆ ಮಾನ್ಯ ಸದಸ್ಯರೊಬ್ಬರು ಕೇಳಿದ್ದಕ್ಕೆ ಎರಡು ಕೆರೆಗಳಯ, ಅವುಗಳ ಹೆಸರುಗಳನ್ನು ಹೇಳಿ ಎಂದು ಹೇಳುತ್ತೀರಿ. ನನಗೆ ಹಾಗಾದರೆ 3 ಹೆಸರುಗಳನ್ನಾದರೂ ಹೇಳಲಿ. ಏಕೆಂದರೆ ನನಗೆ ಪಟ್ಟಿಯನ್ನು ಇನ್ನೂ ಕೊಟ್ಟಿಲ್ಲ. ಅದೇ ಪಾಯಿಂಟ್ ಆಫ್ ಆರ್ಡರ್.

**ಅಧ್ಯಕ್ಷರು.**– ಪಾಯಿಂಟ್ ಆಫ್ ಆರ್ಡರ್ ವಿಷಯ ಸ್ವಲ್ಪಮಟ್ಟಿಗಾದರೂ ಮಾನ್ಯ ಸದಸ್ಯರು ತಿಳಿದುಕೊಂಡು ಮಾತನಾಡಬೇಕು.

**ಶ್ರೀ ಕುಂದೂರು ರುದ್ರಪ್ಪ.**– ನಾನು ಕೇಳುವುದು ಆ 6 ಕೆರೆಗಳ ಹೆಸರುಗಳು

**ಶ್ರೀ ಜಿ. ರಾಮೇಗೌಡ.**– ಮಂಡ್ಯ ಜಿಲ್ಲೆ ಹಾಗು ನಾಲಾ ಏರಿಯಾ ಆದರೂ ಹೊಸ ಸಣ್ಣ ನೀರಾವರಿ ಕಾಮಗಾರಿಗಾಗಿ ಬೇರೆ ಜಿಲ್ಲೆಗಳಿಗಿಂತಲೂ ಹೆಚ್ಚಾಗಿ ಅಂದರೆ 4 ಲಕ್ಷ ಚಿಲ್ಲರೆ ರೂಪಾಯಿಗಳಷ್ಟು ಹಣವನ್ನು ಸರ್ಕಾರದವರು ಅಲ್ಲಿ ಖರ್ಚು ಮಾಡಿದ್ದಾರೆ. ಆ ರೀತಿ ಏನು ಕೆಲಸಗಳಿಗಾಗಿ ಮಾಡಿದ್ದಾರೆ ?

**ಶ್ರೀ ಆಲೂರು ಹನುಮಂತಪ್ಪ.**– ಅದು ರಿಪೇರಿ ವರ್ಕ್ಸ್‌ಗೋಸ್ಕರವಾಗಿ. ಅಲ್ಲಿ ಯಾವ್ಯಾವ ಕೆಲಸಗಳನ್ನು ಮಾಡಿದೆ ಎಂಬ ಬಗ್ಗೆ ಒಂದು ಪಟ್ಟಿ ಇದೆ. ಅದನ್ನು ಕೊಡುತ್ತೇನೆ.

**ಶ್ರೀ ಎಸ್. ನಿಜಲಿಂಗಪ್ಪ.**– ಅದು ಒಂದು ಬೇರೆ ಪಟ್ಟಿ ಇದೆ. ಅದನ್ನು ಮಾನ್ಯ ಸದಸ್ಯರಿಗೆ ಒದಗಿಸಲಾಗುತ್ತಿದೆ.

**ಶ್ರೀ ಕುಂದೂರು ರುದ್ರಪ್ಪ.**– ಅದನ್ನು ನಾನು ಮೊದಲೇ ಒಪ್ಪಿಕೊಂಡೆ. ಬೇರೆ ಸದಸ್ಯರಿಗೆ ಆ ಎರಡು ಕೆರೆಗಳ ಹೆಸರನ್ನು ಹೇಳುವಾಗ ನನಗೆ ಏಕೆ ಹೇಳಬಾರದು ?

**ಶ್ರೀಮತಿ ಬಸವರಾಜೇಶ್ವರಿ.**– ನನಗೂ ಉತ್ತರ ಹೇಳಿಲಿಲ್ಲ.

**ಶ್ರೀ ಕುಂದೂರು ರುದ್ರಪ್ಪ.**– ಅಧ್ಯಕ್ಷರು ಶ್ರೀಮತಿ ಬಸವರಾಜೇಶ್ವರಿ ಅವರ ಪ್ರಶ್ನೆಗೆ ಅನುಗುಣವಾಗಿ ಅವರ ಜಿಲ್ಲೆಯ ಎರಡು ಕೆರೆಗಳ ಹೆಸರನ್ನು ಹೇಳಿ ಎಂದು ಅವಕಾಶವನ್ನು ಕೊಡುವಾಗ ನನ್ನ ಪ್ರಶ್ನೆಗೆ ಅನುಗುಣವಾಗಿ ಕೇಳಿದ 6 ಕೆರೆಗಳ ಹೆಸರನ್ನು ಹೇಳುವುದಕ್ಕೆ ಅವಕಾಶ ಕೊಡದೇಇದ್ದರೆ ನನ್ನ ಮೇಲೆ ಅವರಿಗೆ ಅಭಿಮಾನವಿಲ್ಲವೆಂದು ತೋರುತ್ತದೆ.

**ಅಧ್ಯಕ್ಷರು.**– ನಿಮ್ಮ ಮೇಲೆ ಇರತಕ್ಕ ಮಮತೆಯನ್ನು ಈಗ ಕಡಿಮೆ ಮಾಡಬೇಕಾಗುತ್ತದೆ ಏಕೆಂದರೆ ಅಷ್ಟು ಮಮತೆಯಿಂದ ನಿಮಗೆ ಪ್ರಶ್ನೆ ಹಾಕಲು ಮತ್ತೊಂದುಸಾರಿ ಅವಕಾಶ ಮಾಡಿ ಕೊಟ್ಟಿದ್ದೇನೆ.

**ಶ್ರೀ ಕುಂದೂರು ರುದ್ರಪ್ಪ.**– ಆ ಕೆರೆಗಳ ಹೆಸರುಗಳನ್ನು ಹೇಳಲು ಎನ್ನುವುದೇ ನನ್ನ ಪ್ರಶ್ನೆ

**ಶ್ರೀಮತಿ ಬಸವರಾಜೇಶ್ವರಿ.**– ಉಪಮಂತ್ರಿಗಳು ನಾನು ಮೊದಲು ಕೇಳಿದ ಪ್ರಶ್ನೇಗೆ ಉತ್ತರ ಕೊಡಲಿಲ್ಲ. ಅದಕ್ಕೆ ಮೊದಲು ಉತ್ತರ ಹೇಳಲಿ.

**ಶ್ರೀ ವಿ.ಎಂ. ದೇವ್.**– ಈ ಪ್ರಶ್ನೆಗಳು ಬಹಳ ಸುಲಭವಾಗಿವೆ. ಅದರೂ ಅವರು ಪೂರ್ತಿಯಾಗಿ ಸಿದ್ಧವಾಗದೆ ಉತ್ತರ ಕೊಡಲು ಬರುತ್ತಿದ್ದಾರೆ.

**ಶ್ರೀಮತಿ ಅನ್ನಪೂರ್ಣಾಬಾಯಿ ರಾಗಟೆ.**– ಬಿದರೆ ಜಿಲ್ಲೆಯಲ್ಲಿ ಒಂದು ಕಾಮಗಾರಿಯನ್ನು ತೆಗೆದುಕೊಳ್ಳಲಾಗಿದೆ ಎಂಬುದನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ. ಅಲ್ಲಿ ಇನ್ನೂ ಹೆಚ್ಚಿನ ಕರೆಗಳ ಕಾಮಗಾರಿಯನ್ನು ತೆಗೆದುಕೊಳ್ಳಬೇಕೆಂದು ಸರ್ಕಾರದವರಿಗೆ ಆ ಜಿಲ್ಲೆಯಿಂದ ಮನವಿಗಳೇನಾದರೂ ಬಂದಿವೆಯೇ ?

**ಶ್ರೀ ಆಲೂರು ಹನುಮಂತಪ್ಪ.**– 1964-67 ನೇ ಸಾಲಿನಲ್ಲಿ ಮಳೆಗಾಲದ ಪರಿಸ್ಥಿತಿಯಿಂದ ಕೆಲವು ಕಾಮಗಾರಿಗಳನ್ನು ತಗೆದುಕೊಳ್ಳಲಾಗಿದೆ. ಆದರೆ ಬಿದರೆ ಜಿಲ್ಲೆಯಲ್ಲಿ ತೆಗೆದುಕೊಂಡಿರತಕ್ಕ ಕಾಮಗಾರಿಯ ಬಗ್ಗೆ ಮಾನ್ಯ ಸದಸ್ಯರು ಅಪೇಕ್ಷಿಸಿದರೆ ಅದರ ವಿವರವನ್ನು ಕೊಡುತ್ತೇನೆ.

# ಹಟ್ಟಿ ಚಿನ್ನದ ಗಣಿ

1968 ಏಪ್ರಿಲ್ 16 ರಂದು ನಡೆದ ಅಧಿವೇಶನದಲ್ಲಿ ಮಾನ್ಯ ರಾಮಕೃಷ್ಣ ಹೆಗಡೆ Minister Filnance Planning commerce and Industries ಅವರಿಗೆ ಕೇಳಲಾದ ಬಹುಮುಖ್ಯ ಪ್ರಶ್ನೆಗಳು.

**ಶ್ರೀ ಎಂ. ನಾಗಪ್ಪ.**– ಸರ್ಕಾರದವರು ಇಲ್ಲಿ ಕೊಟ್ಟಿರತಕ್ಕ ಉತ್ತರದಲ್ಲಿ ಹಿಂದಿನ ಹೈದರಾಬಾದ್ ಸರ್ಕಾರದವರು ಕೊಟ್ಟ ಸಾಲ 39.10 ಲಕ್ಷ ಎಂದು ಹೇಳಿದ್ದಾರೆ. ಇದು ನಮ್ಮ ರಾಜ್ಯಕ್ಕೆ ಸಂಬಂಧಪಟ್ಟ ಸಾಲವಲ್ಲವೇ ?

**ಶ್ರೀ ರಾಮಕೃಷ್ಣ ಹೆಗಡೆ.**– ಅದು ನಮಗೆ ಸಂಬಂಧಪಟ್ಟ ಸಾಲವೇ.

**ಶ್ರೀ ಎಂ. ನಾಗಪ್ಪ.**– ಆ ಸಾಲ ನಮಗೆ ಬರಬೇಕಾದ್ದಲ್ಲವೇ ?

**ಶ್ರೀ ರಾಮಕೃಷ್ಣ ಹೆಗಡೆ.**– ಅದು ನಮ್ಮ ಷೇರಿಗೆ ಬಂದದ್ದು. ಅದು ನಮಗೆ ಬಂದಿರತಕ್ಕ ಅಸೆಟ್. ಅದರ ವಿವರಗಳನ್ನ ತಿಳಿಸಕ್ಕ ಬಗ್ಗೆ ಹಾಗೆ ಉತ್ತರದಲ್ಲಿ ಹೇಳಿದೆ ಅಷ್ಟೆ. ನಾವು ಇಲ್ಲಿ ಉತ್ತರ ಕೊಡುವಾಗ ನಮಗೆ ಸರ್ಕಾರದವರಿಂದ ಸಾಲವಾಗಿ ಪಡೆದುಕೊಂಡದ್ದು ಎಷ್ಟು ನಾವು ಹಾಕಿದ ಷೇರ್ ಬಂಡವಾಳವೆಷ್ಟು ಮತ್ತು ಹಿಂದಿದ್ದ ಹೈದ್ರಾಬಾದ್ ಸ್ಟೇಟಿನಿಂದ ಕೊಡಲಾಗಿದ್ದ ಸಾಲವೆಷ್ಟು ಎಂಬ ವಿವರಗಳನ್ನು ತಿಳಿಸಿದೆ.

**ಶ್ರೀ ರತ್ನ ಕುಮಾರ್ ಕಟ್ಟೇಮಾರ್.**– ಬರುವ ಜೂನ್ ತಿಂಗಳಲ್ಲಿ ನಮ್ಮ ದಕ್ಷಿಣ ಕನ್ನಡಕ್ಕೆ ಎಷ್ಟು ಆಹಾರಧಾನ್ಯ ಕೊಡುತ್ತೀರಿ ಎಂಬುದನ್ನು ಈ ಸಭೆಯ ಸದಸ್ಯರಿಗೆ ತಿಳಿಸುತ್ತಿರಾ? ಮತ್ತು ಡಿಮ್ಯಾಂಡಿಗೆ ಅನುಗುಣವಾಗಿ ನೀವು ಎಷ್ಟು ಸೊಸೈಟಿಗೆ ಹಂಚುತ್ತೀರಿ ಎಂಬುದನ್ನು ಈ ಸಭೆಯ ಸದಸ್ಯರಿಗೆ ಸರ್ಕ್ಯುಲರ್ ಮೂಲಕ ತಿಳಿಸುವಿರಾ ?

**ಶ್ರೀ ಬಿ.ಡಿ. ಜತ್ತಿ.**– ನಾವು ಡಿಸ್ಟ್ರಿಕ್ಟ್‌ವೈಜ್ ಅಲಾಟ್ಮಾಡುತ್ತೇವೆ. ಪ್ರತಿಯೊಂದು ತಿಂಗಳದೂ ಬೇಕಾದರೆ ತಿಳಿಸುತ್ತೇವೆ.

**ಶ್ರೀ ಬಿ. ಭಾಸ್ಕರ ಶೆಟ್ಟಿ.**– ಪೇಟೆ ಪ್ರದೇಶದಲ್ಲಿ ಜಾಸ್ತಿ ಕೊಡುತ್ತೀರಿ. ದಕ್ಷಿಣ ಕನ್ನಡಾದ ಪರಿಸ್ಥಿತಿಯೋ ಬೇರೆ ಇದ. ಇಲ್ಲಿ ಜಾಸ್ತಿ ಟೆನೆಂಟ್ಸ್ ಇರುವುದರಿಂದ ಅವರಲ್ಲಿ ಮಳೆಗಾಲದಲ್ಲಿ ಏನೂ ಇರುವುದಿಲ್ಲ. ಬೆಳೆದವರಿಗೆ ಉಣ್ಣಲು ಏನೂ ಇರುವುದಿಲ್ಲವಾದ್ದರಿಂದ ಮಳೆಗಾಲದ 4 ತಿಂಗಳುಗಳಲ್ಲಿ ಹಳ್ಳಿಗಳಿಗೆ ವಸೂಲಾದದ್ದರಲ್ಲಿ ಅಕ್ಕಿ ಒದಗಿಸುವಿರಾ?

**ಶ್ರೀ ಬಿ.ಡಿ. ಜತ್ತಿ.**– ತಮ್ಮ ಜಿಲ್ಲೆಗೆ ಒಂದು ಅಡ್‌ಹಾಕ್ ಕೋಟಾ ಡೆಪ್ಯುಟಿ ಕಮಿಷನರಿಗೆ ಕೊಡುತ್ತೇವೆ. ಅದರಲ್ಲಿ ಹಂಚುವುದಕ್ಕೆ ಅವಕಾಶವಿದೆ.

**ಶ್ರೀಮತಿ ಬಸವರಾಜೇಶ್ವರಿ.**– ಈ ಬೋರ್ಡಿನಲ್ಲಿ ಕೆಲಸಮಾಡುವವರು ಯಾರು? ಅವರ ಪೈಕಿ ಸರಕಾರದಿಂದ ನೇಮಕಮಾಡಲ್ಪಟ್ಟಿರುವವರು ಯಾರು?

**ಶ್ರೀ ರಾಮಕೃಷ್ಣ ಹೆಗಡೆ.**– ಅಧ್ಯಕ್ಷರೂ ಸೇರಿ ಒಟ್ಟು 6 ಜನರಿದ್ದಾರೆ, ಅಧ್ಯಕ್ಷರು ರಾಮಕೃಷ್ಣ ಹೆಗಡೆ. 3 ಜನ ಸರಕಾರಿ ಡೈರೆಕ್ಟರುಗಳಿದ್ದಾರೆ, ಹಣಕಾಸಿನ ಇಲಾಖೆ ಸೆಕ್ರೆಟರಿ, ಮೈನ್ಸ್ ಮತ್ತು ಜಿಯಾಲಜಿ ಇಲಾಖೆ ಡೈರೆಕ್ಟರು, ಸಿಡ್ನಿ, ಟೈಲರ್ ಡೈರೆಕ್ಟರುಗಳಾಗಿದ್ದಾರೆ. ಇಬ್ಬರು ಡೈರೆಕ್ಟರುಗಳು ಷೇರು ಹೋಲ್ಡರುಗಳಿಂದ ಆಯಿಕೆಯಾಗುತ್ತಾರೆ.

**ಶ್ರೀಮತಿ ಬಸವರಾಜೇಶ್ವರಿ.**– ಇದರ ಪೈಕಿ ವೀರಪ್ಪ ಎಂಬುವರನ್ನು ನೇಮಕಮಾಡಿರುವುದು ಯಾವ ಆಧಾರದ ಮೇಲೆ?

**ಶ್ರೀ ರಾಮಕೃಷ್ಣ ಹೆಗಡೆ.**– ಅವರು ಟೆಕ್ನಿಕಲ್ ಅಡ್ವೈಜರು. ಅವರ ಬೋರ್ಡ್ ಅಫ್ ಡೈರೆಕ್ಟರ್ಸ್‌ನಲ್ಲಿದ್ದರೆ ಅವರ ಸಲಹೆ ಸಿಕ್ಕಿ ಪ್ರಯೋಜನವಾಗುತ್ತದೆ. ಆದುದರಿಂದ ಅವರನ್ನು ತೆಗೆದುಕೊಳ್ಳಲಾಗಿದೆ.

**ಶ್ರೀಮತಿ ಬಸವರಾಜೇಶ್ವರಿ.**– ಅಲ್ಲಿ ಮನಸ್ಸು ಬಂದ ಹಾಗೆ ಮ್ಯಾನೇಜೆಮೆಂಟ್ ಮಾಡುವುದು ಕೆಲಸಮಾಡುವುದು ಗಮನಕ್ಕೆ ಬಂದಿದೆಯೇ?

**ಶ್ರೀ ರಾಮಕೃಷ್ಣ ಹೆಗಡೆ.**– ಬಂದಿಲ್ಲ. ಕೆಲವು ವರ್ಷಗಳಿಂದ ಪ್ರತಿಫಲ ನೋಡಿದರೆ ಉತ್ತಮವಾಗಿರುವಂತೆ ಕಾಣುತ್ತದೆ.

**ಶ್ರೀಮತಿ ಬಸವರಾಜೇಶ್ವರಿ.**– ಈಗಿರುವ ಸೂಪರಿಂಡೆಂಟರನ್ನು ಹಟ್ಟಿ ಚಿನ್ನದ ಗಣಿಯಲ್ಲಿ ಜನರಲ್ ಮ್ಯಾನೇಜರ್ ಎಂದು ಬದಲಾಯಿಸುವುದಕ್ಕೆ ಕಾರಣವೇನು?

**ಶ್ರೀ ರಾಮಕೃಷ್ಣ ಹೆಗಡೆ.**– ಈಗ ಹೇಳುವುದಕ್ಕಾಗುವುದಿಲ್ಲ. ಅವರನ್ನು ಉಪಯೋಗ ಮಾಡಿದರೆ ಅವರಿಗೆ ಅನುಭವವಿರುವುದರಿಂದ ಪ್ರಯೋಜನವಾಗುತ್ತದೆ ಎಂದು ಅವರನ್ನು ನೇಮಕ ಮಾಡಿದೆ.

**ಶ್ರೀಮತಿ ಬಸವರಾಜೇಶ್ವರಿ.**– ಅವರ ಮೈನಿಂಗ್ ಟೆಸ್ಟ್ ಪಾಸುಮಾಡಿದ್ದರೇ? ಅಲ್ಲಿನ ಅನುಕೂಲ ಪಡೆಯುವುದಕ್ಕೆ ಡೆಸಿಗ್ನೇಷನ್ ಬದಲಾಯಿಸಿದ್ದಾರೆಂದು ಕಾಣುತ್ತದೆ ಅಲ್ಲವೇ?

**ಶ್ರೀ ರಾಮಕೃಷ್ಣ ಹೆಗಡೆ.**–ಇಲ್ಲ.

**ಶ್ರೀಮತಿ ಬಸವರಾಜೇಶ್ವರಿ.**– ಸರಕಾರಿ ಡೈರೆಕ್ಟರು ಚೆನ್ನಾಗಿ ಕೆಲಸ ಮಾಡುತ್ತಿಲ್ಲ. ಆದರೆ ಜಾನ್‌ಟೈಲರ್ ಕಂಪನಿಯು ಹೆಚ್ಚು ಕೈವಾಡವಿದೆ. ಆದುದರಿಂದ ಸರಿಯಾದ ವ್ಯವಸ್ಥೆಯಾಗಿಲ್ಲವೆಂವುದು ಗಮನಕ್ಕೆ ಬಂದಿದೆಯೇ?

**ಶ್ರೀ ರಾಮಕೃಷ್ಣ ಹೆಗಡೆ.**– ಇಲ್ಲ

# ಅಧಿವೇಶನದಲ್ಲಿ ಭಾಷಣಗಳು

1975: 3ನೇ ಲೋಕಸಭೆ ಅಧಿವೇಶನದಲ್ಲಿ ಭಾಷಣ

**ಶ್ರೀಮತಿ ಬಸವರಾಜೇಶ್ವರಿ** (ಬಳ್ಳಾರಿ): ಮಾನ್ಯ ಉಪಸಭಾಪತಿಗಳೇ, ದೇಶದ ಆರ್ಥಿಕ ರಂಗದಲ್ಲಿ ಜವಳಿ ಕ್ಷೇತ್ರ ಮಹತ್ವದ ಪಾತ್ರ ನಿರ್ವಹಿಸುತ್ತಿದೆ. ಆರ್ಥಿಕವಲಯದ ರಚನೆ ಮತ್ತು ಸಬಲೀಕರಣದ ನಿಟ್ಟಿನಲ್ಲಿ ಈ ಕ್ಷೇತ್ರ ಶ್ರೇಷ್ಠ ಜವಾಬ್ದಾರಿ ನಿರ್ವಹಿಸಿದೆ. ಇದೊಂದು ಹಳೆಯ ಕ್ಷೇತ್ರ ಲಕ್ಷೋಪ ಲಕ್ಷಜನರಿಗೆ ದಿನನಿತ್ಯದ ಉದ್ಯೋಗ ನೀಡಿ ಬದುಕನ್ನು ಕಟ್ಟಿಕೊಟ್ಟಿದೆ. ಸರ್ಕಾರ, ಈ ಇದಕ್ಕೆ ಸಂಬವಂಧಿಸಿದ ಕಾಯ್ದೆಯನ್ನು ಬದಲಾಯಿಸುತ್ತಿದೆ. ಜವಳಿ ಉದ್ಯಮ ಕೆಲಸಗಾರರ ಹಿತ ಕಾಯುತ್ತಾ ಬಂದಿದೆ. ಅದೇರೀತಿ ಉದ್ಯಮದ ಮಾಲೀಕರನ್ನು ಸಂತೃಪ್ತಿಗೊಳಿಸಿದೆ. ಕೆಲವು ಬೇರಿ ಕೈ ಮಗ್ಗ ನೇಕಾರರನ್ನು ಮಿಲ್‌ಗಳ ಮಾಲೀಕರನ್ನು ಮತ್ತು ಇತರೆ ಅನೇಕರನ್ನು ಅದು ಖುಷಿಪಡಿಸಿದೆ. ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನೂತನ ಜವಳಿ ಕಾಯ್ದೆಯನ್ನು ಜುಲೈ 6 1985 ರಂದು ಪ್ರಕಟಿಸಲಾಗಿದೆ.

ಈ ಕುರಿತು ಹಲವು ಸದಸ್ಯರು ತಮ್ಮ ವಿಚಾರ ಮಂಡಿಸಿದ್ದಾರೆ. ಈಗ ನಾನು ಆ ಪ್ರಯತ್ನ ಮುಂದುವರೆಸುತ್ತಿದ್ದೇನೆ.

ಈ ಭಾಷಣ ಮೂಲತ ಕನ್ನಡದಲ್ಲಿ ಮಂಡನೆಗೊಂಡಿದೆ. ಈ ಕುರಿತು ಹೆಚ್ಚಿನ ವಿವರ ನೀಡದೆ ನನ್ನ ರಾಜ್ಯವಾದ ಕರ್ನಾಟಕದಲ್ಲಿ ಹತ್ತಿ ಬೆಳೆಗಾರರು ಮತ್ತು ರೇಷ್ಮೆ ಬೆಳೆಗಾರರು ಎದಿರಿಸುತ್ತಿರುವ ಸಂಕಷ್ಟದ ಬಗ್ಗೆ ಹೇಳಲು ಇಚ್ಛಿಸುತ್ತೇನೆ.

ಹೊಸ ಜವಳಿ ಕಾಯ್ದೆ ಹತ್ತಿ ಬೆಳೆಗಾರರನ್ನು ಕಂಗೆಡಿಸಿದೆ. ಇದರಿಂದ ಕೈ ಮಗ್ಗ ಮತ್ತು ಪವರ್ ಲೂಮ್ ಬಿಕ್ಕಟ್ಟಿಗೆ ಸಿಲುಕಿದೆ. ಇತ್ತಿಚಿನ ದಿನಗಳವರೆಗೆ ಮಿಲ್ ಮತ್ತು ಪವರ್ ಲೂಮ್‌ಗಳಲ್ಲಿ ಒಂದಿಷ್ಟು ಪ್ರಮಾಣದ ಕಚ್ಚಹತ್ತಿ ಬಳಕೆಯನ್ನು ಕಡ್ಡಾಯಗೊಳಿಸಲಾಗಿತ್ತು. ಆದರೆ ಈಗ ಅದನ್ನು ತೆಗೆದುಹಾಕಲಾಗಿದೆ. ಇದು ಹತ್ತಿ ಬೆಳೆಯುವ ರೈತರಿಗೆ ದೊಡ್ಡ ಹೊಡೆತ ನೀಡಿದೆ. ಇದರ ಫಲವಾಗಿ ನಮ್ಮ ರಾಷ್ಟ್ರದಲ್ಲಿ ಸಿಂತೆಟಿಕ್ ಬಟ್ಟೆ ಮೇಲುಗೈ ಸಾಧಿಸಿರುವುದನ್ನು ಕಾಣಬಹುದು. ಸಿಂತೆಟಿಕ್ ಕಳ್ಳ ಹಾದಿಯ ಮೂಲಕ ರಾಷ್ಟದೊಳಕ್ಕೆ ಹರಿದು ಬರುತ್ತಿದೆ. ಮೊದಲು ಇದಕ್ಕೆ ತಡೆ ಹಾಕಿವ ಅಗತ್ಯವಿದೆ. ಈ ನಿಟ್ಟಿನಲ್ಲಿ ಸರ್ಕಾರ ಅನುಸರಿಸುತ್ತಿರುವ ನೀತಿಯನ್ನು ಪರಿಷ್ಕರಿಸುವ ಅನಿವಾರ್ಯತೆ ಇದೆ. ಕಬ್ಬು ಬೆಳೆಯ ನಂತರ ಹತ್ತಿ ನಮ್ಮ ರಾಷ್ಟದ ಸತಿ ಹೆಚ್ಚು ಆದಾಯ ತರುವ 2ನೇಯ ಬೆಳೆ ಎನಿಸಿದೆ. ಹತ್ತಿ ಬೆಳೆಗಾರರ ರಕ್ಷಣೆಗೆ ಆದ್ಯತೆ ನೀಡುವ ನಿಟ್ಟಿನಲ್ಲಿ ತಕ್ಷಣವೇ ಜವಳಿ ನೀತಿಗೆ ಬದಲಾವಣೆ ತರುವ ಜರೂರತಿದೆ.

ಮಿಲ್‌ಗಳೂ ಮತ್ತು ಹ್ಯಾಂಡ್‌ಲೂಮ್‌ಗಳು ಒಂದು ಸಂದರ್ಭದಲ್ಲಿ ಗರಿಷ್ಠ ಪ್ರಮಾಣದಲ್ಲಿ ಹತ್ತಿ ಬಳಕೆ ಮಾಡುತ್ತಿದ್ದವು. ಆದರೆ ಈ ವ್ಯವಸ್ಥೆಯಲ್ಲಿ ಹಠಾತ್ತಾಗಿ ಬದಲಾವಣೆ ಕಾನಿಸಿಕೊಂಡಿತು. ಕಚ್ಚಾ ಬೇಡಿಕೆ ನೆಲ ಕಚ್ಚಿತ್ತು ಇದರಿಂದ ಹತ್ತಿ ಬೆಳೆಗಾರರ ಬೆನ್ನುಮೂಳೆ ಚಿದ್ರಗೊಂಡಿತು. ಆದ್ದರಿಂದ ಮಾನ್ಯ ಸಚಿವರು ಈ ವಿಷಯದ ಬಗ್ಗೆ ಗಂಭೀರ ಚಿಂತನೆ ನಡೆಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಎರಡನೇಯದಾಗಿ ರೇಷ್ಮೆ ಬೆಳೆಗಾರರ ಸಂಕಷ್ಟ ಕುರಿತು ವಿವರಿಸಬಯಸುತ್ತೇನೆ. ನನ್ನ ರಾಜ್ಯ ರೇಷ್ಮೆ ಉದ್ಯಮದ ತವರು. ಅದು ಬೃಹತ್ ಪ್ರಮಾಣದಲ್ಲಿ ರೇಷ್ಮೆ ಉತ್ಪಾದನೆ ಮಾಡುತ್ತಿದೆ ಕರ್ನಾಟಕ ಒಂದರಲ್ಲಿಯೇ ಕೃಷಿ ಆದಾರಿತ ರೇಷ್ಮೆ ಉದ್ಯಮದಲ್ಲಿ 25 ಲಕ್ಷಕ್ಕೂ ಹೆಚ್ಚು ಮಂದಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸರ್ಕಾರ, ಕೇಂದ್ರ ರೇಷ್ಮೆ ಮಂಡಳಿ ಮತ್ತು ವಿಶ್ವ ಬ್ಯಾಂಕ್ ಆರ್ಥಿಕ ನೆರವಿನ ಮೂಲಕ ಈ ಉದ್ಯಮದ ವಿಸ್ತರಣೆ ಕೈಗೊಂಡಿದೆ. ಆದರೆ ಸರ್ಕಾರ ಅನುಸರಿಸುತ್ತಿರುವ ರೇಷ್ಮೆ ಆಮದು ಕ್ರಮದಿಂದ ಈ ಉದ್ಯಮ ಸಂಕಷ್ಟದ ಹಾದಿ ಹಿಡಿದಿದೆ. ಸಮರ್ಪಕ ಪ್ರಮಾಣದಲ್ಲಿ ರೇಷ್ಮೆ ಲಭ್ಯತೆ ಇಲ್ಲದ್ದಿದ್ದರಿಂದ ಕಚ್ಚಾ ರೇಷ್ಮೆಯನ್ನು ಬೇರೆಡೆಯಿಂದ ಆಮದು ಮಾಡಿಕೊಳ್ಳಲಾಗುತ್ತಿದೆ ಎಂದು ಸರ್ಕಾರ ಕಾರಣ ನೀಡಿದೆ. ಆದರ ಸರ್ಕಾರ ಈ ವಾದವನ್ನು ನಾನು ಒಪ್ಪುವುದಿಲ್ಲ. ಸರ್ಕಾರ ರೇಷ್ಮೆ ಬೆಳೆಯುವ ರಾಜ್ಯಗಳ ಜೊತೆ ಸಮಾಲೋಚನೆ ನಡೆಸಿ ಈ ನಿಟ್ಟಿನಲ್ಲಿ ಒಂದು ಸೂಕ್ತ ಆಮದು ನೀತಿ ರಚಿಸಬೇಕು.

ರಾಷ್ಟ್ರದ ವಿವಿಧ ಭಾಗಗಳಲ್ಲಿ ರೇಷ್ಮೆ ಕೇಂದ್ರಗಳನ್ನು ತೆರೆಯಬೇಕು. ಬನಾರಸ್‌ನಲ್ಲಿ ರೇಷ್ಮೆ ನೇಕಾರರ ಸ್ಥಿತಿ ಚಿಂತಾಜನಕವಾಗಿದೆ. ಕೇಂದ್ರ ರೇಷ್ಮೆ ಮಂಡಳಿಯ ತುರ್ತಾಗಿ ಬನಾರಸ್‌ನಲ್ಲಿ ರೇಷ್ಮೆ ಕೇಂದ್ರಗಳನ್ನು ಆರಂಭಿಸ ಬೇಕಿದೆ. ಇದು ಸಾಧ್ಯವಾದರೆ ನೇಕಾರರು ತಮ್ಮ ಸಂಕಷ್ಟ ನೀಗಿ ಅಭಿವೃದ್ಧಿ ಸಾಗಿಸಲು ಸಾಧ್ಯವಾಗುತ್ತದೆ.

ಮೂರನೆಯದಾಗಿ ಜೆನ್ನಿಂಗ್ ಮತ್ತು ಪರಿಷ್ಕರಣೆಯ ಬಗ್ಗೆ ಸಚಿವರು ತಮ್ಮ ಮಾತಿನ ಮಧ್ಯೆ ಪ್ರಸ್ತಾಪಿಸಿದರು. ನನ್ನ ಸ್ವಂತ ಕ್ಷೇತ್ರದಲ್ಲಿಯೇ ಈ ನಿಟ್ಟಿನಲ್ಲಿಯೇ ರೈತರು ತೀವ್ರ ಸಂಕಷ್ಟಕ್ಕೆ ಗುರಿಯಾಗಿದ್ದಾರೆ. ಕರ್ನಾಟಕದ ಬಳ್ಳಾರಿ ಮತ್ತು ರಾಯಚೂರಿನಲ್ಲಿ ಉದ್ದ ಮತ್ತು ಅತೀ ಉದ್ದನೆಯ ಎಳನೆಯ ಹತ್ತಿ ಬೆಳೆಯಲಾಗುತ್ತದೆ. ಜೆನ್ನಿಂಗ್ ಮತ್ತು ಪರಿಷ್ಕರಣೆ ದೃಷ್ಟಿಯಿಂದ ಈ ಹತ್ತಿಗೆ ಬಾರಿ ಬೇಡಿಕೆಯಿದೆ. ಈ ವಿಷಯದಲ್ಲಿ ರೈತರು ಮಹತ್ವದ ಬೇಡಿಕೆಯನ್ನು ಮುಂದಿಟ್ಟಿದ್ದಾರೆ. ಸರ್ಕಾರ ಅದನ್ನು ಗಂಭೀರವಾಗಿ ಪರಿಗಣಿಸ ಬೇಕಿದೆ. ಇಲ್ಲದೆ ಹೋದರೆ ಬಳಕೆಯಾಗದೆ ಹತ್ತಿ ಅನೇಕ ತಿಂಗಳು ಗೋಡಾನ್‌ಗಳಲ್ಲಿ ಕೊಳೆಯಬೇಕಾಗುತ್ತದೆ. ಬೇಸಿಗೆ ದಿನಗಳಲ್ಲಿ ಅಗ್ನಿ ಆಕಸ್ಮಿಕಗಳಿಗೂ ದಾರಿಯಾಗಿ ರೈತರು ದೊಡ್ಡ ಪ್ರಮಾಣದ ನಷ್ಟಕ್ಕೆ ಗುರಿಯಾಗ ಬೇಕಾಗುತ್ತದೆ.

ಕರ್ನಾಟಕ ಕಾಟನ್ ಕಾರ್ಪೋರೇಶನ್ ಹತ್ತಿಗೆ ನಿರ್ದಿಷ್ಟ ಬೆಲೆ ನಿಗದಿಪಡಿಸಿದೆ. ಅದರ ಬೆಂಬಲ ಬೆಲೆ ಕ್ವಿಂಟಾಲ್ ಒಂದಕ್ಕೆ 600 ರೂಪಾಯಿಯಾಗಿದೆ. ಸಂಕಷ್ಟದಲ್ಲಿರುವ ರೈತರ ಬಳಿಗೆ ಸಾಗಿ ಅವರು ಬೆಳೆಯುವ ಹತ್ತಿಯನ್ನು ಖರೀದಿಸುವ ಕೆಲಸ ಭಾರತೀಯ ಹತ್ತಿ ಸಂಸ್ಥೆಯಿಂದ ಆಗಬೇಕಿದೆ. ಲಕ್ಷ ಲಕ್ಷ ಕ್ವಿಂಟಾಲ್ ಹತ್ತಿ ಇಂದು ಗೋಡಾನ್‌ಗಳಲ್ಲಿ ಕೊಳಯುತ್ತಿದೆ. ಸಂಗ್ರಹಗೊಂಡಿರುವ ಹತ್ತಿಯನ್ನು ಏನು ಮಾಡುವುದು ಎಂದು ರೈತರಿಗೆ ತೋಚದಾಗಿದೆ. ಅದನ್ನು ಖರೀದಿಸುವ ಬಗ್ಗೆ ಯಾರೊಬ್ಬರೂ ಕೂಡ ಆಸಕ್ತಿ ತೋರುತ್ತಿಲ್ಲ. ಆದ್ದರಿಂದ ನಾನು ರೈತರ ಬಳಿ ಸಂಗ್ರಹಣೆ ಗೊಂಡಿರುವ ಈ ಹತ್ತಿಯನ್ನು ಖರೀದಿಸುವ ಮನಸ್ಸು ಮಾಡಬೇಕೆಂದು ಮಾನ್ಯ ಸಚಿವರನ್ನು ಕೇಳಿಕೊಳ್ಳುತ್ತೇನೆ. ಅವರು ಖರೀದಿಸುವ

ದೊಡ್ಡ ಪ್ರಯತ್ನ ಮಾಡಿದ್ದಾರೆ. ಆದರೆ ದುರಾದೃಷ್ಟಕರ ಸಂಗತಿಯೆಂದರೆ ಇದು ಮುಗಿಯದೇ ಇರುವ ಸಮಸ್ಯೆಯಾಗಿ ಬೆಳೆದು ನಿಂತಿದೆ. ರೈತರು ಪ್ರತಿ ವರ್ಷ ಈ ಸಮಸ್ಯೆ ಎದುರಿಸುತ್ತಲೇ ಇದ್ದಾರೆ. ಹತ್ತಿ ಗುಣಮಟ್ಟ 80 ಕೌಂಟ್ಸ್ ಗಿಂತ ಕಡಿಮೆಯಿದ್ದರೆ ಅದನ್ನು ಯಾರೊಬ್ಬರು ಖರೀದಿಸುವುದಿಲ್ಲ. ಭಾರತೀಯ ಹತ್ತಿ ಸಂಸ್ಥೆ ಕೂಡ ಅದನ್ನು ಖರೀದಿಸಲು ಇಚ್ಛಿಸುವುದಿಲ್ಲ. ಈ ಕಾರಣಕ್ಕಾಗಿಯೇ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹತ್ತಿ ಬಹುಪಾಲು ನೆಲ ಕಚ್ಚಿ ಹೋಗಿದೆ. ರೈತರಿಗೆ ಯಾವುದೇ ಮುಂಗಡ ಸಾಲ ನೀಡದಂತೆ ಬ್ಯಾಂಕ್‌ಗಳಿಗೆ ಜಿಲ್ಲಾ ಅಧಿಕಾರಿಗಳು ಸೂಚನೆ ನೀಡಿದ್ದಾರೆ. ಆದ್ದರಿಂದ ಈ ರೈತರು ಹೊಸ ಸಾಲ ಪಡೆಯಲು ಆಗದೆ ಹಳೆ ಸಾಲ ತೀರಿಸಲು ಆಗದೆ ತೊಳಲಾಡುತ್ತಿದ್ದಾರೆ. ಈಗ ಬಿತ್ತನೆ ಕಾಲ ಆರಭಗೊಂಡಿದೆ. ಹತ್ತಿ ಬೆಳೆಗಾರರಲ್ಲಿ ಆತ್ಮವಿಶ್ವಾಸ ತುಂಬುವ ಕೆಲಸವಾಗ ಬೇಕಿದೆ. ಆದ್ದರಿಂದ ಒಂದು ಸೂಕ್ತ ಬೆಲೆ ನಿಗದಿ ಮಾಡಿ ರೈತರ ಮನೆಗಳಲ್ಲಿ ಕೊಳೆಯುತ್ತಿರುವ ಹತ್ತಿಯನ್ನು ಖರೀದಿಸಬೇಕೆಂದು ಸರ್ಕಾರವನ್ನು ನಾನು ಕೇಳಿಕೊಳ್ಳುತ್ತೇನೆ.

ಸ್ಪಿನಿಂಗ್ ಮಿಲ್‌ಗಳ ಲೈಸೆನ್ಸ್‌ಗಾಗಿ ನಮ್ಮ ರಾಜ್ಯದ ಅನೇಕ ಜನ ರೈತರು ಸಹಕಾರಿ ಕ್ಷೇತ್ರದಲ್ಲಿ ಠೇವಣಿ ಇರಿಸಿ ಕಾಯುತ್ತಿದ್ದಾರೆ. ಅಂತಹವರಿಗೆ ಲೈಸೆನ್ಸ್ ನೀಡುವ ನಿಟ್ಟಿನಲ್ಲಿ ಆದಷ್ಟು ಶೀಘ್ರ ಕ್ರಮ ಕೈಗೊಳ್ಳಬೇಕು. ಜೊತೆಗೆ ಎಲ್ಲ ರೀತಿಯ ಅನುಕೂಲಗಳನ್ನು ಸಹ ರೈತರಿಗೆ ಕಲ್ಪಿಸಿಕೊಡಬೇಕು.

ಅಗ್ನಿ ಆಕಸ್ಮಿಕಗಳು ಹತ್ತಿ ಬೆಳೆಗಾರರ ಬದುಕನ್ನೇ ನುಂಗಿ ಹಾಕುತ್ತಿವೆ. ಆದ್ದರಿಂದ ಬೃಹತ್ ಪ್ರಮಾಣದಲ್ಲಿ ಹತ್ತಿ ಬೆಳೆಯುವ ವಲಯಗಳಲ್ಲಿ ಅಗ್ನಿ ಶಾಮಕ ಪಡೆಗಳನ್ನು ನಿಯೋಜಿಸುವ ವ್ಯವಸ್ಥೆ ಮಾಡಬೇಕಿದೆ. ಮಾನ್ಯ ಸಚಿವರು, ಇದುವರೆಗೆ, ನಾನು ಪ್ರಸ್ತಾಪಿಸಿದ ಅಂಶಗಳತ್ತ ಗಮನ ಹರಿಸುತ್ತಾರೆಂದು ಭಾವಿಸುತ್ತೇನೆ. ಇದು ಸಾಧ್ಯವಾದರೆ ನಮ್ಮ ದೇಶದ ಆರ್ಥಿಕೆಯ ಬೆನ್ನೆಲುಬುಯೆನಿಸಿರುವ ರೈತಾಪಿ ಸಮುದಾಯದ ಹಿತ ಕಾಯ್ದಂತಾಗುತ್ತದೆ. ಇದುವರೆಗೆ ಮಾತಾಡಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ತಮ್ಮೆಲ್ಲರನ್ನು ಮತ್ತೊಮ್ಮೆ ಅಭಿನಂದಿಸಿ ಮಾತು ಮುಗಿಸುತ್ತೇನೆ.

# 1980 ಲೋಕಸಭೆ – ಅಧಿವೇಶನದಲ್ಲಿ ಅಭಿಪ್ರಾಯಗಳು

**ಶ್ರೀಮತಿ ಬಸವರಾಜೇಶ್ವರಿ** (ಬಳ್ಳಾರಿ): ಮಾನ್ಯ ಸಭಾಧ್ಯಕ್ಷರೇ, 1988–89 ಸಾಲಿನ ಬಜೆಟ್‌ನ್ನು ನಾನು ಸ್ವಾಗತಿಸುತ್ತೇನೆ ಬಜೆಟ್‌ನ್ನು ಸ್ವಾಗತಿಸುವ ಜೊತೆಗೆ ಕೆಲವು ಸಲಹೆಗಳನ್ನು ನೀಡಲು ಇಚ್ಛಿಸುತ್ತೇನೆ.

ಮಾನ್ಯರೇ, 1988–89ರ ಸಾಲಿನ ಈ ಬಜೆಟ್ ಬಡವರ, ರೈತರ ಮಧ್ಯಮ ವರ್ಗದ ಮತ್ತು ಜನ ಸಾಮಾನ್ಯರ ಪರ ಬಲವುಳ್ಳ ಅತ್ಯುತ್ತಮ ಬಜೆಟ್. ಈ ಬಜೆಟ್ಟಿನ ಸದುಪಯೋಗ ಮತ್ತು ಸೂಕ್ತ ಜಾರಿಗೆ ಕ್ರಮ ಕೈಗೊಳ್ಳಬಾಕಿದೆ. ಸಮಾಜದಲ್ಲಿ ಎಲ್ಲಾ ವರ್ಗಗಳ ಹಿತಾಸಕ್ತಿ ಗಮನದಲ್ಲಿಟ್ಟುಕೊಂಡು ರೂಪಿಸುವ ಈ ಬಜೆಟ್ ವಾಸ್ತವ ನೆಲೆಗಟ್ಟಿನ ಶ್ರೇಷ್ಠ ಬಜೆಟ್ ಎನಿಸಿದೆ. ಇದನ್ನು ಸೂಕ್ತ ರೀತಿಯಲ್ಲಿ ಜಾರಿಗೊಳಿಸುವ ಕುರಿತು ವಿರೋಧ ಪಕ್ಷದ ಸದಸ್ಯರುಗಳು ರಚನಾತ್ಮಕ ಸಲಹೆ ಸೂಚನೆಗಳನ್ನು ನೀಡಬಹುದಾಗಿದೆ. ಯೋಜನೆಗಳು, ಬಡ ಜನರಿಗೆ ಉತ್ತಮ ರೀತಿಯಲ್ಲಿ ತಲುಪಿಸುವುದು ಹೇಗೆ ಮತ್ತು ಅಗತ್ಯವಿರುವ ಜನತೆಗೆ ಈ ಯೋಜನೆಗಳಿಂದ ಲಾಭ ದೊರೆಕಿಸಿಕೊಡುವುದು ಹೇಗೆ ಅನ್ನುವ ಕುರಿತು ಪ್ರತಿ ಪಕ್ಷಗಳು ಯೋಚಿಸಬಹುದಾಗಿದ. ಆದರೆ ಇದಕ್ಕೆ ಅವರು ವಿರೋಧವಾಗಿಯೇ ವರ್ತಿಸುತ್ತಾರೆ. ಈ ಬಜೆಟ್‌ನಲ್ಲಿ ಏನು ಇಲ್ಲ ಎಂದು ಟೀಕಿಸುತ್ತಿದ್ದಾರೆ. ಈಗಲೂ ಅವರು ತಮ್ಮ ನಿಲುವನ್ನು ಬದಲಿಸಿ ಬಜೆಟ್ ಮೇಲಿನ ಟೀಕೆಯನ್ನು ಕೈ ಬಿಡಬೇಕಿದೆ. ಆದರೂ ವಿರೋಧ ಪಕ್ಷದ ಸ್ಥಾನದಲ್ಲಿ ಕುಳಿತಿರುವ ಅವರ ಹಾಗೂ ಅವರ ಟೀಕೆಗಳನ್ನು ಗೌರವಿಸುತ್ತೇವೆ.

ಈ ಬಜೆಟ್‌ನಲ್ಲಿ ಪರಿಚಯಿಸಲ್ಪಟ್ಟಿರುವ ಜಲಧಾರ, ಕುಟೀರ ಜ್ಯೋತಿ, ಕಿಸಾನ್.ವಿಕಾಸ್ ಪತ್ರದಂತಹ ಹತ್ತು ಹಲವು ಉಪಯುಕ್ತ ಹೊಸ ಯೋಜನೆಗಳನ್ನು ನಾನು ಸ್ವಾಗತಿಸುತ್ತೆನೆ. ಈ ಬಜೆಟ್ ರೈತಾಪಿ ಸಮುದಾಯಕ್ಕೆ ಅತ್ಯತ್ತಮ ರೀತಿಯ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಪ್ರಕಟಿಸಿದೆ. ಮಾನ್ಯ ಹಣಕಾಸು ಸಚಿವರು ಭಾರತೀಯ ಕೃಷಿಕ ಸಮಾಜದ ಒಳಿತಿಗೆ ಪ್ರಕಟಿಸಿದ ಎಲ್ಲಾ ರಿಯಾಯಿತಿಗಳನ್ನು ಸ್ವಾಗತಾರ್ಹ. ಆದರೆ ರೈತರು ಅನುಭವಿಸುತ್ತಿರುವ ಸಂಕಷ್ಟಗಳ ನಿವಾರಣೆಗೆ ಇದಕ್ಕೂ ಹೆಚ್ಚಿದನ್ನು ಮಾಡುವ ಅಗತ್ಯವಿದೆ. ಈಡೀ ದೇಶದ್ಯಾಂತ ರೈತ ವರ್ಗ ಪ್ರತಿಭಟಿಸುತ್ತಿದೆ. ತಮ್ಮ ಉತ್ಪನ್ನಗಳಿಗೆ ಬೆಂಬಲ ಬೆಲೆ ಕೆಳುತ್ತಿದ್ದಾರೆ. ಬಡ್ಡಿ ಹೊರೆ ತೆಗೆದು ಹಾಕಲು ಒತ್ತಾಯಿಸುತ್ತಿದ್ದಾರೆ. ಕಡಿಮೆದರದ ಹಾಗೂ ಅಡಚಣೆಯಿಲ್ಲದ ರೀತಿಯಲ್ಲಿ ತಮ್ಮ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಪೂರೈಸಬೇಕೆಂದು ಕೇಳುತ್ತಿದ್ದಾರೆ. ಇವಿಷ್ಟು ಸಲಹೆಗಳನ್ನು ಪರಿಶೀಲಿಸಿದರೆ ಹೆಚ್ಚಿನ ಅನುಕೂಲವಾಗಲಿದೆ. ಈ ಇಂದಿನ ದಿನಗಳಲ್ಲಿ ಗಗನಕ್ಕೇರುತ್ತಿರುವ ಕೃಷಿ ಉತ್ಪಾದನ ವೆಚ್ಚಕ್ಕೆ ಕಡಿವಾಣ ಹಾಕುವ ಅಗತ್ಯವಿದೆ. ಜೊತೆಗೆ ರೈತರಿಗೆ ಸೂಕ್ತ ಬೆಲೆಯ ಬೆಂಬಲ ಕೂಡ ನೀಡಬೇಕಿದೆ. ಉತ್ಪಾದನ ವೆಚ್ಚಕ್ಕೆ ಕಡಿವಾಣ ಹಾಕದ್ದಿದ್ದರೆ ಗ್ರಾಹಕರ ಮೇಲೆ ಕೂಡ ದೊಡ್ಡ ಹೊರೆ ಬೀಳಲಿದೆ. ಗ್ರಾಹಕರ ಸಂಕಷ್ಟ ನಿವಾರಣೆಯಾಗಬೇಕೆಂದರೆ ಕೃಷಿ ಉತ್ಪನ್ನದ ವೆಚ್ಚ ಸಾಧ್ಯವಾದ ಮಟ್ಟಕ್ಕೆ ತಗ್ಗಬೇಕಿದೆ. ಕೃಷಿ ಉತ್ಪನ್ನದ ವೆಚ್ಚ ತಗ್ಗಿಸುವ ನಿಟ್ಟಿನಲ್ಲಿ ಅನೇಕ ಕ್ರಮಗಳನ್ನು ನಾವು ಕೈಗೊಳ್ಳಬಹುದಾಗಿದೆ. ಕೃಷಿ ಬಳಕೆ ಸಾಮಾಗ್ರಿಗಳ

ಮೇಲಿನ ತೆರಿಗೆ ತೆಗೆದು ಹಾಕುವುದು, ಟ್ರಾಕ್ಟರ್ ಮತ್ತು ಟೈಯರ್‌ಗಳ ಮೇಲಿನ ಬೆಲೆ ಕಡಿತ ಗೊಳಿಸುವುದು ಇಂತಹ ಕ್ರಮಗಳಲ್ಲಿ ಸೇರಿವೆ. ದೊಡ್ಡ ರೈತರು ಮಾತ್ರ ಟ್ರ್ಯಾಕ್ಟರ್ ಬಳಸುತ್ತಾರೆ ಅನ್ನುವುದನ್ನು ಕೆಲವರ ವಾದ. ಆದರೆ ಅದು ಸರಿಯಾದಂತ ಪರಿಕಲ್ಪನೆ ಅಲ್ಲ. ವರ್ಷದಲ್ಲಿ ಎರಡು ಮತ್ತು ಮೂರು ಬೆಳೆಗಳನ್ನು ಪಡೆಯುವ ಸಣ್ಣ ರೈತರು ಕೂಡ ತಮ್ಮ ಜಮೀನಿಗೆ ಟ್ರ್ಯಾಕ್ಟರ್ ನೆರವು ಪಡೆಯ ಬೇಕಾಗುತ್ತದೆ. ಆದ್ದರಿಂದ ಕೃಷಿ ಉತ್ಪನ್ನದ ವೆಚ್ಚ ತಗ್ಗ ಬೇಕೆಂದರೆ ಟ್ರಾಕ್ಟರ್, ಟಯರ್, ಇತ್ಯಾದಿಗಳ ಮೇಲಿನ ತೆರಿಗೆ ಹೊರ ಇಳಿಸಲೇ ಬೇಕು.

ಕೃಷಿ ವಲಯದ ಸಂಶೋಧನೆ ಮೇಲೆ ಆಸಕ್ತಿ ಇಲ್ಲದಾಗಿದೆ. ಅದಕ್ಕೆ ನಾವು ಮಹತ್ವ ನೀಡಿಲ್ಲ. ಕೃಷಿ ಉತ್ಪನ್ನಗಳ ಹಾದಿಯಲ್ಲಿ ನಾವು ದಾಪುಗಲು ಹಾಕದಿದ್ದರೆ ನಿರೀಕ್ಷಿತ ಗುರಿ ಸಾಧನೆ ಅಸಾಧ್ಯ. ಕಳೆದ ಮೂರು ವರ್ಷಗಳಲ್ಲಿ ಕೃಷಿ ಉತ್ಪನ್ನ ಹೆಚ್ಚಳದ ನಮ್ಮ ಗುರಿ 170ದಶಲಕ್ಷ ಟನ್ ಆದರೆ ನಮ್ಮಿಂದ 150 ದಶಲಕ್ಷ ಟನ್ ಮೀರಲು ಸಾಧ್ಯವಿಲ್ಲ. ಉತ್ಪಾದನ ದರ ಸಾಕಷ್ಟು ಏರಿದೆ. ರೈತರು ಸಾಕಷ್ಟು ಸಮಸ್ಯೆಗಳನ್ನು ಎದುರಿಸಿದ್ದಾರೆ. ಅವರ ಸಮಸ್ಯೆಗಳತ್ತ ನಾವು ತಿರುಗಿ ನೋಡಿಲ್ಲ. ರೈತರಿಗೆ ಪೂರೈಕೆಯಾಗುತ್ತಿರುವ ಬೀಜ ರಸಾಯನಿಕ ಔಷಧಿ ಮತ್ತು ರಸಗೊಬ್ಬರ ಕಲಬೆರೆಕೆಯಿಂದ ಕೂಡಿದ್ದು N S C ಯಿಂದ ಪೂರೈಕೆಯಾದ ಬೀಜ ಮೊಳಕೆಯೊಡೆಯದೆ ನೂರಾರು ಎಕರೆ ಜಮೀನು ಬರಡು ಬಿದ್ದ ಬಗ್ಗೆ ಪತ್ರಿಕೆಗಳಲ್ಲಿ ಓದಿ ನಾವು ಆಘಾತಕ್ಕೊಳಗಾಗಿದ್ದೇವೆ. ಹಾಗಾದರೆ ರೈತರು ಏನು ಮಾಡಲು ಸಾಧ್ಯ? ಉತ್ಪನ್ನ ಹೆಚ್ಚಿಸುವುದು ಅದೇಗೆ ಸಾಧ್ಯ? ವಿದೇಶಗಳಿಗೆ ಹೋಲಿಸಿದರೆ ನಮ್ಮಲಿನ ಆಹಾರ ಧಾನ್ಯಗಳ ಉತ್ಪನ್ನ ವೆಚ್ಚ ಸಾಕಷ್ಟು ದುಬಾರಿ ಗೋಧಿ ಮತ್ತು ಕಬ್ಬು ಉತ್ಪನ್ನದ ವೆಚ್ಚ ಕೂಡ ನಮ್ಮಲ್ಲಿ ಸಾಕಷ್ಟು ತುಟ್ಟಿ. ಆದ್ದರಿಂದ ನಮಗೆ ಕೃಷಿ ಉತ್ಪನ್ನ ಹೆಚ್ಚಳ ಕೈಗೆಟುಕದ ನಕ್ಷತ್ರವಾಗಿ ಹೋಗಿದೆ. ಇವಿಷ್ಟು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಾವು ಪ್ರಯತ್ನ ಮುಂದುವರೆಸುವ ಅಗತ್ಯವಿದೆ. ಉತ್ಪನ್ನ ಹೆಚ್ಚಳ, ವೆಚ್ಚ ಕಡಿತ ನಿಟ್ಟಿನಲ್ಲಿ ನಮ್ಮ ವಿಜ್ಞಾನಿಗಳು ತಮ್ಮ ಕಾರ್ಯಕ್ರಮ ಮುಂದುವರೆಸುವ ಅಗತ್ಯವಿದೆ. ಇದು ಸಾಧ್ಯವಾದರೆ ಜನಸಾಮಾನ್ಯರೆಲ್ಲರಿಗೂ ಸುಲಭದರದಲ್ಲಿ ಆಹಾರ ಧಾನ್ಯ ಲಭಿಸುವ ಜೊತೆಗೆ ಕೃಷಿ ಉತ್ಪನ್ನ ಕೂಡ ನಿರೀಕ್ಷಿತ ಹೆಚ್ಚಳ ಕಾಣಲು ಸಾಧ್ಯ.

ನಮ್ಮ ದೇಶದಲ್ಲಿನ ಸ್ಟೀಲ್ ಉತ್ಪನ್ನದ ನಿದರ್ಶನವನ್ನೇ ತೆಗೆದುಕೊಂಡು ನೋಡುವುದಾದರೆ ವಿದೇಶಗಳಿಗಿಂತಲೂ ನಮ್ಮಲ್ಲಿ ಉತ್ಪನ್ನ ವೆಚ್ಚ ತುಂಬ ಹೆಚ್ಚಾಗಿದೆ. ಸ್ಟೀಲ್ ಉತ್ಪನ್ನಗಳಿಗಾಗಿ ಬಳಕೆಯಾಗುತ್ತಿರುವ ಸಾಮರ್ಥ್ಯ ಮತ್ತು ಇತರೆ ಅಗತ್ಯ ಸೌಲತ್ತುಗಳ ಪೂರೈಕೆ ಮಟ್ಟ ಕೂಡ ಹೆಚ್ಚಾಗಿದೆ. ಇದರ ಸಮತೋಲನಕ್ಕೆ ನಾವೇನು ಮಾಡಬಹುದು. ಉತ್ಪಾದನ ವೆಚ್ಚ ಕಡಿತಗೊಳಿಸಲು ನಾವು ಪರ್ಯಾಯ ದಾರಿಗಳನ್ನು ಅನ್ವೇಸ ಬೇಕಿವೆ. ಉತ್ಪಾದನ ವೆಚ್ಚ ತಗ್ಗಿಸದಿದ್ದರೆ ವಿದೇಶಿ ಮಾರುಕಟ್ಟೆಯಲ್ಲಿ ನಮ್ಮ ಸರಕುಗಳು ಸ್ಪರ್ಧಿಸಿ ಜಯಿಸುವುದು ಅಸಾಧ್ಯ. ಉತ್ಪಾದನ ವೆಚ್ಚ ತಗ್ಗದ ಹೊರತು ನಮ್ಮಲ್ಲಿನ ಆಹಾರ ಧಾನ್ಯಗಳ ಉತ್ಪಾದನ ಸಾಮರ್ಥ್ಯ ಹೆಚ್ಚದು. ಆದ್ದರಿಂದ ಮಾನ್ಯರೇ ಈ ನಿಟ್ಟಿನಲ್ಲಿ ಬೆಳಕು ಚೆಲ್ಲುವ ಕೃಷಿ ಸಂಶೋಧನೆಗಳು ನಡೆಯಬೇಕಿದೆ. ತಮ್ಮ ಉತ್ಪನ್ನಗಳ ಹೆಚ್ಚಳಕ್ಕೆ ರೈತರಿಗೆ ಸೂಕ್ತ ಮಾರ್ಗದರ್ಶನ ಮತ್ತು ಸಲಹೆ ನೀಡುವ ಅಗತ್ಯವಿದೆ.

ಮಾನ್ಯರೇ ಸಣ್ಣ ಉದ್ಯಮಕ್ಕೆ ಸಂಬಂಧಿಸಿದಂತೆ ಬಜೆಟ್ ಪ್ರಸ್ತಾಪದ ಮೇಲೆ ನಾನು ಕೆಲವು ಅನಿಸಿಕೆಗಳನ್ನು ಮುಂದಿಡಲು ಇಚ್ಛಿಸುತ್ತೇನೆ. ಬಜೆಟ್ ಪ್ರಸ್ತಾವನೆ ಪ್ರಕಾರ ಸಣ್ಣ ಉದದ್ಯಮಕ್ಕಾಗಿ ಪ್ರತ್ಯೇಕ ಬ್ಯಾಂಕ್ ಆರಭಿಸುವ ಯೋಜನೆಯಿದೆ ಎಂದು ನನಗೆ ಅನ್ನಿಸುತ್ತದೆ. ಅದು IDBI ಅಡಿಯಲ್ಲಿ ಬರುವ ಸಬ್ಸಿಡರೀ ಬ್ಯಾಂಕ್ ಗ್ರಾಮೀಣ ಪ್ರದೇಶಗಳಲ್ಲಿ ಸಾಕಷ್ಟು ಸಣ್ಣ ಕೈಕಾರಿಕೆಗಳು ಆರಂಭಗೊಂಡಿದೆ. ಆದರೆ ಅವು ಈಗ ಸಂಕಷ್ಟದಲ್ಲಿವೆ ಉತ್ಪನ್ನ ವಲಯವನ್ನು ನಿದರ್ಶನವಾಗಿ ನೋಡಿದಾಗ 20TPD 50, TPD 100, TPD ಸಾಮರ್ಥ್ಯದ ಸಣ್ಣ ಸಣ್ಣ ಘಟಕಗಳು ಇಂದು ಸ್ಥಾಪನೆಯಾಗಿದೆ. ಇವುಗಳಿಗೆ ಸಿಮೆಂಟ್ ಕಾರ್ಪೊರೇಶನ್ ಆಫ್ ಇಂಡಿಯಾ ತಾಂತ್ರಿಕತೆಯನ್ನು ನೆರವು ಒದಗಿಸಿದೆ. ಆದರೆ ವೆಚ್ಚ ಲಾಭಾಂಶ ದೃಷ್ಠಿಯಿಂದ ಸೂಕ್ತವಾಗಿಲ್ಲ. ಈ ಉದ್ಯಮದಲ್ಲಿ ತೊಡಗಿಸಲಾಗಿತ್ತಿರುವ ಕಚ್ಚಾ ಸಾಮಗ್ರಿಗಳ ವೆಚ್ಚ ಗರಿಷ್ಠ ಪ್ರಮಾಣದ್ದಾಗಿದೆ. ಆದರೆ ಅದರಿಂದ ಬರುವ ಲಾಭಾಂಶ ಮಾತ್ರ ಕನಿಷ್ಠ ಮಟ್ಟದ್ದು. ಈ ಸಣ್ಣ ಉದ್ಯಮಗಳು ದೊಡ್ಡ ಘಟಕಗಳೊಂದಿಗೆ ಸ್ಪರ್ಧಿಸಲಾಗದೆ ಕೈ ಚೆಲ್ಲಿ ಕುಳಿತಿದೆ. ಸಣ್ಣ ಘಟಕಗಳ ಮೇಲೆ ತೆರಿಗೆಯ ಹೊರೆ ಹೆಚ್ಚದೆ. ಇದೇ ವೇಳೆ ಅವುಗಳಿಗೆ ಪ್ರೋತ್ಸಾಹ ಮತ್ತು ರಿಯಾಯಿತಿ ಇಲ್ಲದಾಗಿದೆ. ಪ್ರೋತ್ಸಾ ಮತ್ತು ರಿಯಾಯಿತಿ ಇಲ್ಲದಿದ್ದರೆ ಎಲ್ಲೋ ದುರ್ಗಮ ತಾಣಗಳಲ್ಲಿ ನಡೆಯುತ್ತಿರುವ ಇಂತ ಸಣ್ಣ ಉದ್ಯಮಗಳು ಕೊನೆಯುಸಿರೆಳೆಯಲಿದೆ.

ಮಾನ್ಯರೇ, ಸಣ್ಣ ಉದ್ಯಮಗಳಿಗೆ ನೀಡಲಾಗುತ್ತಿರುವ ರಿಯಾಯಿತಿ ಮತ್ತು ಪ್ರೋತ್ಸಾಹ ಧನ ನಿಲ್ಲಿಸಲು ಸರ್ಕಾರ ನಿರ್ಧರಿಸಿದೆ. ಈ ನಿಟ್ಟಿನಲ್ಲಿ ಆದೇಶಕ್ಕೂ ಜಾರಿಯಾಗಿದೆ ಸಣ್ಣ ಉದ್ಯಮಗಳ ಜೀವಾಳ ಎನಿಸಿರುವ ರಿಯಾಯಿತಿಯನ್ನು ನಿಲ್ಲಿಸದೇ ಮುಂದುವರೆಸಿಕೊಂಡು ಹೋಗಬೇಕೆಂದು ಮನವಿ ಮಾಡುತ್ತೇನೆ. ಇಲ್ಲವಾದರೆ ರೋಗಗ್ರಸ್ಥಗೊಳ್ಳುವ ಸಣ್ಣ ಉದ್ಯಮಗಳ ಸಂಖ್ಯೆ ಹೆಚ್ಚಲಿದೆ. ಅದರಿಂದ ಗ್ರಾಮೀಣ ಪ್ರದೇಶಗಳಲ್ಲಿ ನಿರುದ್ಯೋಗ ಕೂಡ ಉಲ್ಬಣಿಸುವ ಅಪಾಯ ವಿರುವುದರಿಂದ ಸಚಿವರು ಈ ಬಗ್ಗೆ ಗಂಬೀರ ಚಿಂತನೆ ನಡೆಸಬೇಕಿದೆ.

ಅಣೆಕಟ್ಟುಗಳು ಸೃಷ್ಟಿಸಿದೆ ಸಮಸ್ಯೆ: ನಾವು ಅಣೆಕಟ್ಟುಗಳನ್ನು ನಿರ್ಮಿಸಿದ ಬಳಿಕ ಹತ್ತು ಹಲವು ಸಮಸ್ಯೆಗಳನ್ನು ಮುಖಾ ಮಖಿಯಾಗಿ ಬೇಕಿದೆ. ನೀರಾವರಿ ಇರುವ ಕಡೆಗಳೆಲ್ಲೆಲ್ಲಾ ಅಪಾರ ಪ್ರಮಾಣದ ಭೂಮಿ ನೀರಿನ ಅತಿ ಬಳಕೆಯಿಂದ ಜವುಳಾಗಿ ಹೋಗಿದೆ ಸಹಸ್ರಾರು ಏಕರೆ ಜಮೀನು ಇಂದು ಜವಳುಗೊಂಡಿದೆ. ಅಂತಹ ಭೂಮಿಯಲ್ಲಿ ಏನನ್ನು ಬೆಳೆಯಲು ಸಾಧ್ಯವಿಲ್ಲ ಎಲ್ಲಿಯವರೆಗೆ ನಾವು ನೀರಿನ ಸೂಕ್ತ ಬಳಕೆ ಹರಿಯುವುದಿಲ್ಲವೋ ಅಲ್ಲಿಯವರೆಗೆ ನಮ್ಮ ಭೂಮಿ ಫಲವತ್ತತ್ತೆ ಕಳೆದುಕೊಳ್ಳುತ್ತದೆ. ದೇವರು ನಮ್ಮ ರಾಷ್ಟ್ರಕ್ಕೆ ಸಮೃದ್ಧವಾದ ಫಲಭರಿತ ಭೂಮಿ ದಯಪಾಲಿಸಿದ್ದಾನೆ. ಯಾವುದೇ ಬೆಳೆಯನ್ನು ನಾವು ಕೃಷಿ ಮಾಡಬಹುದಾಗಿದೆ. ಆದರೆ ನಾವು ನೀರಿನ ಬಳಕೆಯ ಹದ ತಿಳಿಯದೆ ಭೂಮಿಯ ಫಲವತ್ತತೆಯನ್ನು ಹಾಳು ಮಾಡಿಕೊಂಡಿದ್ದೇವೆ. ಈ ಬಗ್ಗೆ ನಾವು ಗಂಭೀರ ಚಿಂತನೆ ನಡೆಸಬೇಕಿದೆ.

ಬರಗಾಲ ಮತ್ತು ಅತಿವೃಷ್ಟಿಯನ್ನು ನಾವು ನೈಸರ್ಗಿಕ ವಿಕೋಪ ಎಂದು ಪರಿಗಣಿಸಿದ್ದೇವೆ. ಈ ಎರಡು ನೈಸರ್ಗಿಕ ವಿಕೋಪಗಳ ಜೊತೆಗೆ ಇತ್ತೀಚಿಗೆ ಹೆಚ್ಚುವರಿಯಾಗಿ ಇನ್ನೊಂದು ವಿಕೋಪ

ಸೇರ್ಪಡೆಯಾಗಿದೆ. ಎರಡು ತಿಂಗಳ ಹಿಂದೆ ರಾಯಚೂರಿನ ಪ್ರಧಾನ ಕಾಲುವೆಯ ಒಂದು ಶಾಖೆ ಗಮನಿಸಿ. ಅದು ತುಂಬ ದೀರ್ಘ ಕಾಲುವೆ ಅಷ್ಟೇ ಹಳೆಯದು ಕೂಡ ಅನೇಕ ತಿಂಗಳುಗಳಿಂದ ರಿಪೇರಿ ಕಾಣದೇ ಅದು ಚಿಂದೀ ಆಗಿದೆ. ಅದು ಹಾಯ್ದುಹೋಗುವ ಪ್ರದೇಶಗಳಲ್ಲಿನ ರೈತರು ದೊಡ್ಡ ತಾಪತ್ರಯ ಎದುರಿಸುತ್ತಿದ್ದಾರೆ. ಕಾಯಂ ಚಿಂದಿಯಾಗಿರುವ ಕಾಲುವೆಯ ತುದಿಯವರೆಗೆ ನೀರು ಹರಿಯುವುದೇ ಇಲ್ಲ. ಇದರಿಂದ ರೈತರ ಭೂಮಿ ನೀರಿಲ್ಲದೇ ಅವು ಬತ್ತಿ ಹೋಗಿದೆ. ಇಂತಹ ಸಮಸ್ಯೆಗಳನ್ನು ನಾವು ಹೇಗೆ ಬಗೆಹರಿಸುತ್ತಿದ್ದೇವೆ? ಇದು ಬಿಚ್ಚಿಕೊಳ್ಳದ ಕಗ್ಗಂಟಿನ ಸಮಸ್ಯೆ. ರೈತರು ಬ್ಯಾಂಕ್‌ಗಳಿಂದ ಪಡೆದ ಸಾಲವನ್ನು ಮರು ಪಾವತಿ ಮಾಡುತ್ತಿಲ್ಲ. ಫಸಲಿನ ವೈಫಲ್ಯದಿಂದ ಅವರಿಗೆ ಸಾಲ ಮರು ಪಾವತಿಸುವ ಸಾಮರ್ಥ್ಯ ಇಲ್ಲದಾಗಿದೆ. ಸಾಲ ಮರು ಪಾವತಿ ಮಾಡದ ಹೊರತು ಎರಡನೇ ಬೆಳೆಗೆ ಸಾಲ ಪಡೆಯುವುದು ಅಸಾಧ್ಯ. ಆದ್ದರಿಂದ ಕಾಲುವೆ ಅವ್ಯವಸ್ಥೆಯಿಂದ ಸಂಕಷ್ಟಕ್ಕೀಡಾದ ರೈತರನ್ನು ಸಹಾನುಭೂತಿಯಿಂದ ಪರಿಗಣಿಸಬೇಕಿದೆ. ಅಧ್ವಾನಗೊಂಡಿರುವ ಕಾಲುವೆಯನ್ನು ಸಹ ನೈಸರ್ಗಿಕ ವಿಕೋಪದ ಪಟ್ಟಿಗೆ ಹೊಸ ಸೇರ್ಪಡೆಯೆಂದು ಪರಿಗಣಿಸಬೇಕಿದೆ. ಆದ್ದರಿಂದ ಇಂತಹ ಪ್ರದೇಶ ರೈತರಿಗೆ ಮುಂದಿನ ಹಂತದ ಸಾಲ ನೀಡುವ ವ್ಯವಸ್ಥೆಯಾಗಬೇಕಿದೆ. ಮುಖ್ಯ ಕಾಲುವೆ ಒಡೆದು ಹೋದರೆ 5 –10 ದಿನಗಳಲ್ಲಿ ರಿಪೇರಿ ಮಾಡಲಾಗುತ್ತದೆ. ಆದರೆ ಉಪಕಾಲುವೆಯೊಂದು ಕಳೆದ 2–3 ತಿಂಗಳಿನಿಂದ ದುರಸ್ಥಿ ಕಾಣದೆ ಕುಳಿತಿದೆ ಎಂದರೆ ನನಗೆ ಅರ್ಥವಾಗದ ಸಂಗತಿ ಎನಿಸಿದೆ. ಇದು ರೈತರ ಹಿನ್ನಡೆಗೆ ದಾರಿ ಮಾಡಿ ಕೊಟ್ಟಿದೆ ಈ ಬಗ್ಗೆ ಶೀಘ್ರ ನಿಗಾ ವಹಿಸಬೇಕಿದೆ.

ನಮ್ಮ ದೇಶದಲ್ಲಿ ಸಮೃದ್ಧ ಪ್ರಮಾಣದಲ್ಲಿ ನೈಸರ್ಗಿಕ ಸಂಪನ್ಮೂಲ ಇದೆ. ಅದರ ಸದ್ಬಳಕೆಗೆ ಅಲ್ಲೊಂದು ಇಲ್ಲೊಂದು ಯೋಜನೆ ರೂಪುಗೊಂಡಿವೆ. ಆದರೆ ಸೂಕ್ತವಾದ ಹಾಗೂ ಸಮಗ್ರವಾದ ಯೋಜನೆ ಕಾಣದಾಗಿದೆ. ನೈಸರ್ಗಿಕ ಸಂಪನ್ಮೂಲಗಳೆಂದರೆ ಯಾವುವು? ಅದು ನೀರು. ಭೂಮಿ, ಮತ್ತು ಖನಿಜ ಸಂಪತ್ತು ಮೊದಲು ನಾವು ಇವುಗಳನ್ನು ಸರಿಯಾದ ರೀತಿಯಲ್ಲಿ ಅನ್ವೇಷಿಸಿದ್ದೇವೆಯೆ? ಈ ಪ್ರಶ್ನೆಗೆ ಉತ್ತರ ಖಂಡಿತ ಇಲ್ಲ ಅನ್ನುವುದೇ ಹಾಗಿದೆ. ಏಕೆಂದರೆ ಇನ್ನು ಸಾಕಷ್ಟು ಭುಮಿ ಬಳಕೆ ರಹಿತ ಸ್ಥಿತಿಯಲ್ಲಿಯೇ ಉಳಿದಿದೆ. ಕೃಷಿಗೆ ಒಳಪಟ್ಟಿಲ್ಲ. ಅಂತಹ ಭೂಮಿಯಲ್ಲಿ ಸಾಕಷ್ಟು ಪ್ರಮಾಣದ ನೀರು ಕೂಡ ಇದೆ. ಅದೇ ರೀತಿ ನೀರಾವರಿ, ಏತ ನೀರಾವರಿ ಅಥವ ಅಂತರ್ಜಲ ಅಥವಾ ಖನಿಜ ಸಂಪತ್ತಿನ್ನಂತಹ ನೈಸರ್ಗಿಕ ಸಂಪನ್ಮೂಲ ಇನ್ನೂ ಸದ್ಬಳಕೆಯಾಗಿದೆ ಉಳಿದಿದೆ. ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳುವುದಾದರೆ ಮೊದಲು ಅಂತರ್ಜಲ ಬಳಸಿಕೊಳ್ಳಬೇಕು. ಬಳಿಕ ಇತರೇ ಸಂಪತ್ತಿನ ಕಡೆ ಗಮನ ಹರಿಸಬೇಕು. ನೈಸರ್ಗಿಕ ಸಂಪತ್ತಿನ ಸದ್ಬಳಕೆಯಾದರೆ ಗ್ರಾಮೀಣ ಪ್ರದೇಶದಲ್ಲಿ ಭಾರಿ ಪ್ರಮಾಣದ ಉದ್ಯೋಗವಕಾಶಗಳು ಚಾಚಿಕೊಳ್ಳಲಿವೆ. ಇದಿಷ್ಟೇ ಅಲ್ಲ ಇನ್ನು ಸಾಕಷ್ಟು ಸಂಪನ್ಮೂಲ ಶ್ರೀಮಂತಿಕೆ ಕಲ್ಪಿಸಿಕೊಟ್ಟ ಆ ದೇವರನ್ನು ನಾವು ವಂದಿಸಬೇಕಿದೆ. ಲಭ್ಯವಿರುವ ನೀರು ಮತ್ತು ಖನಿಜ ಸಂಪತ್ತು ಪೋಲಾಗದಂತೆ ಬಳಸಿಕೊಳ್ಳುವ ವಿಧಾನ ಅರಿಯಬೇಕಿದೆ ನಾವು ಏನನ್ನು ಮಾಡದ್ದಿದರೂ ಕೊನೆಯ

ಪಕ್ಷ ಖಾಲಿ ಜಮೀನಿನಲ್ಲಿ ಮರ ಗಿಡಗಳನ್ನಾದರು ಬೆಳೆದು ನಿಸರ್ಗವನ್ನು ಹಸಿರಾಗಿಡಲು ಪ್ರಯತ್ನಿಸಬೇಕು. ಮುಂದಿನ ಯೋಜನೆ ವೇಳೆಗಾದರೂ ಇಂತಹ ಅಂಶಗಳ ಬಗ್ಗೆ ಗಮನ ಹರಿಸಿ ಆದ್ಯತೆ ನೀಡಬೇಕಿದೆ. ಇದು ಸಾಧ್ಯವಾಗದಿದ್ದರೆ ನಮ್ಮ ದೇಶದ ಮೂರು ನೈಸರ್ಗಿಕ ವಲಯಗಳಿಗೆ ಅನ್ಯಾಯವಾಗುತ್ತದೆ.

**ಕಾರ್ಮಿಕ ನಿರ್ವಹಣೆ:** ಈ ಕುರಿತು ಮಾನ್ಯ ಸಚಿವರು ಮಂಡಿಸಿರುವ ಸಲಹೆಗಳನ್ನು ನಾನು ಸ್ವಾಗತಿಸುತ್ತೇನೆ ಯಾಕೆಂದರೆ ಮ್ಯಾನೇಜ್‌ಮೆಂಟ್ ವಿಷಯದಲ್ಲಿ ಕಾರ್ಮಿಕರ ಸಹಭಾಗಿತ್ವವನ್ನು ಸಚಿವರು ಕೇಳಿದ್ದಾರೆ. ಅವರಿಗೆ ಎಲ್ಲಾ ಸವಲತ್ತುಗಳನ್ನು ಕಲ್ಪಿಸಲಾಗಿದೆ. ರಾಷ್ಟ್ರದಲ್ಲಿ ತೀವ್ರ ಬರಗಾಲ ತಂಡವವಾಡುತ್ತಿದ್ದಾಗಲೂ ಕೈಗಾರಿಕೆ ಉತ್ಪನ್ನದಲ್ಲಿ ತೀವ್ರ ಹೆಚ್ಚಳ ಕಂಡುಬಂದದ್ದು ಗಮನಾರ್ಹ. ಇದು ಸಾಧ್ಯವಾದದಕ್ಕೆ ಮುಖ್ಯ ಕಾರಣ ನಮ್ಮ ರಾಷ್ಟ್ರದಲ್ಲಿ ಅತ್ಯುತ್ತಮವಾದ ಕಾರ್ಮಿಕ ಸಂಭಂಧ ಇರುವುದು ನಮ್ಮ ಕಾರ್ಮಿಕರು ಶ್ರಮ ಜೀವಿಗಳು. ತಮ್ಮ ದುಡಿಮೆಯ ಮೂಲಕ ಮೆಚ್ಚುಗೆ ಮೂಡಿಸುತ್ತಾರೆ. ಒಂದು ಘಟಕದ ಜೊತೆ ಅವರು ಕೂಡ ಬೆಳೆಯುತ್ತಾರೆ. ಆದ್ದರಿಂದಲೇ ನಮ್ಮ ದೇಶವಲ್ಲಿ ಕಾರ್ಮಿಕ ಸಮೃದ್ಧಿಯಿದೆ. ಮಾಲೀಕರ ಜೊತೆ ಉತ್ತಮ ಸಹಕಾರವಿದೆ. ಬೋನಸ್, ಪ್ರಾವಿಡೆಂಟ್ ಇತ್ಯಾದಿ ರೀತಿಯ ಪ್ರೋತ್ಸಾಹ ಧನವನ್ನು ಅವರು ಪಡೆಯುತ್ತಿದ್ದಾರೆ. ಇವೆಲ್ಲದರ ಜೊತೆಗೆ ಇದೀಗ ಸರ್ಕಾರ ಮ್ಯಾನೇಜ್‌ಮೆಂಟಿನಲ್ಲಿ ಕಾರ್ಮಿಕ ಸಹಭಾಗಿತ್ವ ಇಚ್ಛಿಸಿರುವುದು ಸ್ವಾಗತಾರ್ಹ. ಇದರಿಂದ ಉತ್ಪನ್ನ ಹೆಚ್ಚಳಕ್ಕೆ ಮತ್ತಷ್ಟು ಜಿಗಿತ ಲಭಿಸಲಿದೆ.

ಕೊನೆಯಾಗಿ, ಆದರೆ ಕನಿಷ್ಠವೆಂದು ಪರಿಗಣಿಸಬೇಡಿ. ಮಾನ್ಯರೆ ನಾನು ಪ್ರಸ್ತಾಪಿಸ ಹೊರಟಿರುವುದು ಬಡತನ ನಿರ್ಮೂಲನ ಕಾರ್ಯಕ್ರಮದ ಬಗ್ಗೆ. ಬಡತನ ನಿರ್ಮೂಲನ ಕಾರ್ಯಕ್ರಮಕ್ಕೆ ನಾವು ಹೆಚ್ಚಿನ ಆದ್ಯತೆ ನೀಡಿದ್ದೇವೆ. ಇದು ಸ್ವಾಗತಾರ್ಹ. ಆದರೆ ಈ ಕಾರ್ಯಕ್ರಮದ ಜಾರಿ ಸಂದರ್ಭದಲ್ಲಿ ಲೋಪವಿದೆ. ಅನೇಕ ಹಂತಗಳಲ್ಲಿ ಭ್ರಷ್ಟಾಚಾರ ತಾಂಡವವಾಡುತ್ತಿದೆ. ಇಂತಹ ಭ್ರಷ್ಟಾಚಾರದ ನಿವಾರಿಸಲು ನಾವು ಪ್ರಯತ್ನಿಸ ಬೇಕಿದೆ. ಕಾರ್ಯಕ್ರಮ ಜಾರಿ ಸಂದರ್ಭದಲ್ಲಿ ಸೂಕ್ತ ರೀತಿಯ ಉಸ್ತುವಾರಿ ವಹಿಸಿದರೆ ಭ್ರಷ್ಟಚಾರ ಕಡಿಮೆಯಾಗಬಲ್ಲದು. ಅಪಾರ ಪ್ರಮಾಣದ ಹಣ ಬಡತನ ನಿರ್ಮೂಲನ ಕಾರ್ಯಕ್ರಮದ ಮೇಲೆ ಸುರಿಯುತ್ತಿರುವಾಗ ಅದು ಫಲಾನುಭವಿಗಳಿಗೆ ತಲುಪುತ್ತಿದೆಯೋ? ಅನ್ನುವುದನ್ನು ತಿಳಿಯುವುದು ನಮ್ಮ ಕರ್ತವ್ಯ ಇಲ್ಲದೆ ಹೋದರೆ ನಮ್ಮ ಪ್ರಯತ್ನವೆಲ್ಲಾ ವ್ಯರ್ಥವಾಗುತ್ತದೆ. ಈ ಬಗ್ಗೆ ನಾವು ಗಂಭೀರವಾಗಿ ಯೋಚಿಸುವ ಜರೂರತ್ತು ಇದೆ.

ಗ್ರಾಮೀಣ ಪ್ರದೇಶಗಳ ನೈರ್ಮಲ್ಯ ಕುರಿತು ನಾವು ಸಾಕಷ್ಟು ಮಾತನಾಡಿದ್ದೇವೆ. ಗ್ರಾಮೀಣ ನೈರ್ಮಲ್ಯದ ಮಹತ್ವ ಕುರಿತು ಮಾನ್ಯ ಸಚಿವರಿಗೆ ವಾಸ್ತವಾಂಶದ ಅರಿವು ಮೂಡಿರುವ ಬಗ್ಗೆ ನನಗೆ ಸಂತಸ ಎನಿಸುತ್ತದೆ. ಗ್ರಾಮಗಳು ಒಂದು ಮಾಲಿನ್ಯದಿಂದ ಕಂಗೆಟ್ಟು ಕುಳಿತಿವೆ. ನಾನು ನೋಡಿದ ಹಳ್ಳಿಗಳೆಲ್ಲಾ ಅಶುದ್ಧ ಪರಿಸರದಿಂದ ಬಳಲುವುದನ್ನು ಕಂಡಿದ್ದೇನೆ. ಇದರ ಬಗ್ಗೆ ಹೆಚ್ಚಿನ ವಿವರ ಅನಗತ್ಯ. ಮಾಲಿನ್ಯಕ್ಕೆ ಕಾರಣ ಎಲ್ಲರಿಗೂ ತಿಳಿದ ಸಂಗತಿಯೇ ಆಗಿದೆ. ಸ್ವಾತಂತ್ರ್ಯ ಬಂದ

ಬಳಿಕದ 40 ವರ್ಷಗಳಲ್ಲಿಯು ನಾವು ಈ ನಿಟ್ಟಿನಲ್ಲಿ ಏನನ್ನೂ ಸಾಧಿಸಿಲ್ಲ. ಅಂದಿನ ಸ್ಥಿತಿಯೇ ಇಂದು ಹಳ್ಳಿಗಳಲ್ಲಿ ಇದೆ. ಯಾರಾದರ ವಿದೇಶಿ ಗಣ್ಯರು ಇಂದು ಭೇಟಿ ಕೊಟ್ಟರೆ ನಾವು ತಲೆತಗ್ಗಿಸಿವ ಸನ್ನಿವೇಶ ಎದುರಾಗುತ್ತದೆ. ಅಲ್ಲಿನ ಮಹಿಳೆಯರ ಸ್ಥಿತಿ ಗಮನಿಸಿದರೆ ನಾಚಿಕೆ ಪಡುವಂತಾಗುತ್ತದೆ.ಬಜೆಟ್‌ನಲ್ಲಿ ಪ್ರಸ್ತಾಪಿಸಿದ ಪ್ರಕಾರ ಗ್ರಾಮೀಣ ಪ್ರದೇಶಗಳ ಶೌಚಾಲಯ ಅತ್ಯಂತ ತುರ್ತಿನ ಕೆಲಸ ಎನಿಸಿದೆ. ಪ್ರತಿಯೊಂದು ಪಳ್ಳಿಯಲ್ಲಿಯೂ ಶೌಚಾಲಯ ನಿರ್ಮಾಣ ಕಾರ್ಯ ಕೈಗೆತ್ತಿಕೊಂಡಿದ್ದೇವೆ. ಇದು ಹಳ್ಳಿಗಳ ನೈರ್ಮಲ್ಯದ ಸಮಸ್ಯೆಯನ್ನು ನೀಗಿಸಬಲ್ಲದು. ಆದ್ದರಿಂದ ದೇಶದ ಮಹಿಳಾ ಸಮುದಾಯ ಈ ಬಜೆಟ್‌ನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ.

2000 ಇಸವಿಯ ವೇಳೆಗೆ ಈ ದೇಶದಲ್ಲಿ ಉಕ್ಕಿನ ಭಾರೀ ಬೇಡಿಕೆ ಸೃಷ್ಟವಾಗಲಿದೆ. ನಮಗೆ ಅಪಾರ ಪ್ರಮಾಣದ ಉಕ್ಕಿನ ಅಗತ್ಯ ಇದೆ. 8ನೇ ಪಂಚವಾರ್ಷಿಕ ಯೋಜನೆಯಲ್ಲಿ ವಿಜಯ ನಗರ ಉಕ್ಕು ಘಟಕ ಸ್ಥಾಪಿಸುವ ಪ್ರಸ್ತಾಪ ಮಾಡಲಾಯಿತು. 7ನೆ ಯೋಜನೆಯಲ್ಲಿ ಅದನ್ನು ನಾವು ಸೇರಿಸಿರಲಿಲ್ಲ. ವಿಜಯನಗರ ಘಟಕ ಸ್ಥಾಪನೆಯ ಅಗತ್ಯ ಈಗ ಹೆಚ್ಚಾಗಿದೆ. ಏಕೆಂದರೆ ಹೊಸಪೇಟೆ ಪ್ರದೇಶದಲ್ಲಿ ಉತ್ತಮ ಕಬ್ಬಿಣ ಅದಿರು ಮತ್ತು ಹೇರಳ ನೈಸರ್ಗಿಕ ಖನಿಜ ಸಂಪತ್ತು ಇದೆ. ಅದರ ಸಬ್ಬಳಕೆಯಾಗ ಬೇಕಾದರೆ ನಗರ ಘಟಕ ಸ್ಥಾಪನೆಉಯಾಗುವ ಅಗತ್ಯವಿದೆ. 8ನೇ ಯೋಜನೆ ಸಿದ್ಧಪಡಿಸುವ ಸಂದರ್ಭ ಹೊಸಪೇಟೆಯಲ್ಲಿ ಉಕ್ಕು ಘಟಕ, ಸ್ಥಾಪಿಸುವ ಬಗ್ಗೆ ಗಮನಹರಿಸಬೇಕೆಂದು ನಾವು ಕೇಳಿಕೊಳ್ಳುತ್ತೇನೆ.

ಕರ್ನಾಟಕದಲ್ಲಿ ಅಣು ವಿದ್ಯುತ್ ಸ್ಥಾವರ ಸ್ಥಾಪಿಸುವ ತುರ್ತು ಇದೆ. ಇತ್ತೀಚೆಗೆ ಕೈಗಾರಿಕಾ ಕ್ಷೇತ್ರ ಬೆಳೆಯುತ್ತಿದೆ. ಅದರೆ ಉತ್ಪಾದನೆ ಮಾತ್ರ ಕುಂಠಿತಗೊಂಡಿದೆ ಇದಕ್ಕೆ ಕಾರಣ ವಿದ್ಯುತ್ ಕೊರತೆ. ಆದ್ದರಿಂದ 8ನೇ ಯೋಜನೆಯಲ್ಲಿ ದೇಶದ ವಿವಿದೆಡೆ ಹೆಚ್ಚು ಹೆಚ್ಚಾಗಿ ಅಣು ವಿದ್ಯುತ್ ಸ್ಥಾವರಗಳನ್ನು ಸ್ಥಾಪಿಸುವತ್ತ ಗಮನ ಹರಿಸಬೇಕಿದೆ. ಇಲ್ಲದೆ ಹೋದರೆ ಕೈಗಾರಿಕಾ ಉತ್ಪನ್ನ ನೆಲ ಕಚ್ಚುವ ಅಪಾಯವಿದೆ. ಈ ಹಿನ್ನೆಲೆಯಲ್ಲಿ ಹೊಸಪೇಟೆಯಲ್ಲಿ ಸೂಪರ್ ಥರ್ಮಲ್ ಘಟಕ ಸ್ಥಾಪಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇದುವರೆಗೆ ಕರ್ನಾಟಕ ಹೆಚ್ಚಾಗಿ ಜಲವಿದ್ಯುತ್‌ನ್ನು ಆಧಿರಿಸಿದೆ ಆದ್ದರಿಂದ ವಿದ್ಯುತ್ ಸಮಸ್ಯೆ ಈ ರಾಜ್ಯದಲ್ಲಿ ಹೆಚ್ಚಾಗಿದೆ. ಇದನ್ನು ನೀಗಿಸುವತ್ತ ನಾವು ಗಮನ ಹರಿಸಬೇಕಿದೆ.

ಇಷ್ಟು ವಿಷಯ ಮಂಡಿಸಲು ಅವಕಾಶ ಮಾಡಿಕೊಟ್ಟು ತಮಗೆಲ್ಲರಿಗೂ ವಂದಿಸಿ ಮಾತು ಮುಗಿಸುತ್ತೇನೆ.

ಮಾರ್ಚ್ 16, 1988–89 10ನೇ ಲೋಕಸಭಾ ಅಧಿವೇಶನದಲ್ಲಿ ಶ್ರೀಮತಿ ಬಸವರಾಜೇಶ್ವರಿ ಅವರು ಅಂದು ಮಂಡಿದಿದ ಬಜೆಟ್‌ಗೆ ಸ್ವಾಗತಕೋರುತ್ತ ಕೆಲವು ಸಲಹೆಗಳನ್ನು ಕೊಟ್ಟರು. ಅವು ಈ ರೀತಿಯಿದೆ.

"ರೈತರ ಪರವಾಗಿರುವ ಬಡವರ, ಮಧ್ಯಮ ವರ್ಗದ ಪ್ರತಿಯೊಬ್ಬರ ಮತ್ತು ಸಮಾಜದ ಎಲ್ಲವರ್ಗಗಳ ಪರವಾಗಿರುವ ಈ ಬಜೆಟ್‌ನಿಂದ ಸರ್ಕಾರದಿಂದಾಗುವ ಪ್ರಯೋಜನ ಎಲ್ಲರಿಗೂ ದೊರೆಯಬೇಕೆಂಬುದೇ ತಮ್ಮ ಮಹತ್ವಾಕಾಂಕ್ಷೆಯಾಗಿದೆ.

ಹೊಸ ಯೋಜನೆಗಳಾದ – ಜಲಧಾರ, ಕುಟೀರ ಜ್ಯೋತಿ, ಕಿಸಾನ್ ವಿಕಾಸಪತ್ರಗಳು ಇತ್ಯಾದಿ ಯೋಜನೆಗಳು ಮುಖ್ಯವಾಗಿ ರೈತರನ್ನು ಪ್ರೋತ್ಸಾಹಿಸಲೆಂದೇ ಅಧಿಕ ರಿಯಾಯಿತಿ ದರದಲ್ಲಿ ಕಡಿತಗೊಳಿಸದೆ ವಿದ್ಯುತ್ ಒದಗಿಸಬೇಕು. ರೈತರು ಬೆಳೆದ ಬೆಳೆಗೆ ಸರಿಯಾದ ಬೆಲೆ ದೊರೆಯುವಂತಾಗಬೇಕು. ತಮ್ಮ ಹೊಲ ಹಸನಗೊಳಿಸಿಕೊಳ್ಳಲು ಮತ್ತು ವರ್ಷಕ್ಕೆ ಎರಡು ಬೆಳೆ ತೆಗೆಯಲು ಭೂಮಿ ಹೊಂದಿದ ರೈತರಿಗೆ ಅಲ್ಲ: ಕಡಿತ ಭೂಮಿ ಹೊಂದಿರುವ ರೈತರಿಗೆ ವ್ಯವಸಾಯೋಕರಣ, ಟ್ರಾಕ್ಟರ್ ದೊರೆಯುವಂತಾಗಬೇಕು ಒಳ್ಳೆಯ ಬೀಜ ಔಷಧಿಯನ್ನು ಒದಗಿಸಬೇಕು. ವ್ಯವಸಾಯ ಕ್ಷೇತ್ರದಲ್ಲಿ ಸಂಶೋಧನೆಗೆ ಹೆಚ್ಚಿನ ಪ್ರಮುಖ್ಯತೆಯನ್ನೂ ಕೊಟ್ಟಿಲ್ಲ; ವಿಜ್ಞಾನಿಗಳು ವ್ಯವಸಾಯ ಕ್ಷೇತ್ರದಲ್ಲಿ ಉತ್ಪಾದನೆ ಹೆಚ್ಚಿಸುವ ಸಂಶೋಧನೆಯಲ್ಲಿ ತೊಡಗುವಂತೆ ಪ್ರೇರೆಪಿಸಬೇಕು" ಎಂದು ಸಲಹೆಯಿತ್ತರು.

"ಉಕ್ಕಿನ ತ್ಪಾದನೆ ವೆಚ್ಚವನ್ನು ಕಡಿಮೆಗೊಳಿಸಬೇಕು. ಸಣ್ಣ ಕೈಗಾರಿಕೆಗಳ ಅಭಿವೃದ್ಧಿಯಾಗಬೇಕು. ಪ್ರಕೃತಿಕ ಸಂಪನ್ಮೂಲಗಳಾದ ನೀರು, ಭೂಮಿ, ಮತ್ತು ಖನಿಜಗಳನ್ನು ಸರಿಯಾದ ರೀತಿಯಲ್ಲಿ ನಾವು ಉಪಯೋಗಿಸಿಕೊಳ್ಳತ್ತಿಲ್ಲ. ನೀರನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ಲಕ್ಷಗಟ್ಟಲೆ ಎಕರೆ ಭೂಮಿ ಬಂಜರಾಗಿದೆ.

ಬಡತನ ನಿರ್ಮೂಲನೆಯ ಯೋಜನೆಯಲ್ಲಿ ಅಪಾರವಾದ ಹಣವನ್ನು ತೊಡಗಿಸಲಾಗಿದೆ. ಆದರೆ ಹಣ ಅವಶ್ಯಕತೆ ಇರುವ ಜನಗಳಿಗೆ ಲಭ್ಯವಾಗದೆ, ಎಲ್ಲಾ ಹಂತದಲ್ಲಿ ಹಣ ಸೋರಿಹೋಗುತ್ತಿದೆ. ಎಲ್ಲೆಲ್ಲಿ ಈ ಯೋಜನೆ ಜಾರಿಯಲ್ಲಿದೆಯೋ ಅಲ್ಲಲ್ಲಿ ಶಿಸ್ತಿನ ಎಚ್ಚರಿಕೆಕೊಡುವ ವ್ಯಕ್ತಿಯನ್ನು (ಹಿರೇಮಣಿ) ನೇಮಕ ಮಾಡುವುದರ ಮೂಲಕ ಲಂಚಕೋರತನವನ್ನು ತಡೆಗಟ್ಟಬಹುದಾಗಿದೆ, ಬಡತನ ತೊಲಗಿಸುವ ಈ ಯೋಜನೆಯನ್ನೂ ಯಶಸ್ವಿಗೊಳಿಸಬೇಕಾಗಿದೆ.

**ಶ್ರೀಮತಿ ಬಸವರಾಜೇಶ್ವರಿ** (ಬಳ್ಳಾರಿ): ಮಾನ್ಯ ಉಪಸಭಾಧ್ಯಾಕ್ಷರೇ, ಖಾದಿ ಕೈಮಗ್ಗ, ಉತ್ಪನ್ನಗಳ ಮೇಲಿನ ಚರ್ಚೆಯಲ್ಲಿ ಪಾಲ್ಗೊಂಡು ಮಾತನಾಡಲು ನನಗೆ ಅವಕಾಶ ನೀಡಿದ್ದಕ್ಕಾಗಿ ಅಭಿನಂದನೆ ಸಲ್ಲಿಸಲು ಇಚ್ಛಿಸುತ್ತೇನೆ. ನೇಕಾರ ಕ್ಷೇತ್ರ ಇಂದು ವೇಗವಾಗಿ ಬೆಳೆಯುತ್ತಿದೆ. ಆಧುನಿಕ ಉಪಕರಣಗಳನ್ನು ಖರೀದಿಸಲು ನೇಕಾರ ವರ್ಗಕ್ಕೆ ಬಂಡವಾಳ ಪ್ರೋತ್ಸಾಹ ಕೂಡ ನೀಡಲಾಗುತ್ತಿದೆ. ಈ ಉದ್ಯಮದಲ್ಲಿ ದೇಶದ ಲಕ್ಷೋಪ ಲಕ್ಷ ಜನ ಕೆಲಸಮಾಡುತ್ತಿದ್ದಾರೆ ಅದರಿಂದಲೇ ಬದುಕನ್ನು ಕಂಡುಕೊಂಡಿದ್ದಾರೆ. ಆದರೆ ಈ ಕ್ಷೇತ್ರ ಇದುವರೆಗೂ ಅಸಂಘಟಿತವಾಗಿಯೇ ಉಳಿದು ಕೊಂಡಿದೆ.

**ಮಾನ್ಯ ಉಪಸಭಾಧ್ಯಕ್ಷರು:** ಮೇಡಂ, ದಯವಿಟ್ಟು ಮೈಕ್ ಹತ್ತಿರ ಬಂದು ಮಾತಾಡಿ,

**ಶ್ರೀಮತಿ ಬಸವರಾಜೇಶ್ವರಿ:** ದೇಶದ ರಪ್ತು ಮತ್ತು ಆಮದು ದೃಷ್ಟಿಯಿಂದ ಜವಳಿ ಉದ್ಯಮ ಮಹತ್ವದ ಪಾತ್ರ.ನಿರ್ವಹಿಸುತ್ತಿದೆ. ಸರ್ಕಾರ 1983 ರಲ್ಲಿ ಹೊಸ ಜವಳಿ ನೀತಿಯನ್ನು ಪ್ರಕಟಿಸಿತು. ಕೈ ಮಗ್ಗ. ಮಿಲ್ ಮತ್ತು ಪವರ್ ಲೂಮ್ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಗೆ ಅನೇಕ ಸಲಹೆ ಸೂಚನೆಗಳನ್ನು ನೀಡಲಾಗಿದೆ. ಈ ನಿಟ್ಟಿನಲ್ಲಿ ಹಲವು ಕ್ರಮಗಳನ್ನು ಸಹ ಕೈಗೊಳ್ಳಲಾಗಿದೆ. ಅವುಗಳಲ್ಲಿ ಗ್ರಾಹಕರಿಗೆ ನೂಲು ಪೂರೈಕೆ ಮಾಡುವುದು, ಬೇಡಿಕೆ ಪೂರೈಕೆಯ ನಿಟ್ಟಿನಲ್ಲಿ ಹೆಚ್ಚು ಹೆಚ್ಚು ಹೊಸ ಕೇಂದ್ರಗಳ ಸ್ಥಾಪನೆ ಅಗತ್ಯವಿರುವ ಜನರಿಗೆ ಎಸಾಯನಿಕ ಜೊತೆಗೆ ಆರ್ಥಿಕ ನೆರವು ನೀಡುವುದು ಈ ಹೊಸ ಜವಳಿ ನೀತಿಯಲ್ಲಿ ಸೇರಿದೆ.

ಇವುಗಳ ಜೊತೆಗೆ ಬದಲಾಗುತ್ತಿರುವ ವಿನ್ಯಾಸ ಕಲೆಗೆ ತಕ್ಕಂತೆ ಈ ಉದ್ಯಮ ಬೆಳೆಯಲು ನೆರವಾಗುವ ನಿಟ್ಟಿನಲ್ಲಿ ಅನೇಕ ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳುವುದು ಮತ್ತು ಆಧುನಿಕರಣಕ್ಕೆ ನೆರವು ನೀಡುವುದು ಹೊಸ ನೀತಿಯನ್ನು ಸೇರಿದೆ. ಈ ನಿಟ್ಟಿನಲ್ಲಿ ಹೆಚ್ಚಿನ ನೆರವಿನ ಹಸ್ತ ಚಾಚಿರುವ ಸಚಿವಾಲಯ ರೋಗಗ್ರಸ್ಥ ಘಟಕಗಳ ಪುನಃಚ್ಚೇತನರಿಕೆಗೆ ದೊಡ್ಡ ಪ್ರಮಾಣದ ಹಣಕಾಸು ನೆರವು ನೀಡುವುದು ಅದರಲ್ಲಿ ಸೇರಿದೆ. ಆಧುನೀಕರಣಕ್ಕೂ ಕೂಡ ಸೂಕ್ತ ರೋತಿಯ ಹಣಕಾಸು ನೆರವು ನೀಡುವ ಪ್ರಸ್ತಾಪ ಒಳಗೊಂಡಿದೆ.

ಈ ಎಲ್ಲ ನೆರವಿನ ಸದ್ದುದ್ದೇಶಿತ ಕ್ರಮದ ವರತಾಗಿಯೂ ಅನೇಕ ಜವಳಿ ಘಟಕಗಳು ರೋಗ ಗ್ರಸ್ಥ ಸ್ಥಿತಿಯತ್ತ ಸಾಗಿವೆ. ಅದಕ್ಕೆ ನಿರ್ದಿಷ್ಟ ಕಾರಣ ಗುರುತಿಸಲು ಸಾಧ್ಯವಿಲ್ಲ. ಆದರೆ ಅಧ್ಯಯನ ವರದಿ ಪ್ರಕಾರ ಈ ಕ್ಷೇತ್ರದ ಆಧುನೀಕರಣ ಗೊಳ್ಳದ ಯಂತ್ರೋಪಕರಣಗಳು ಹಾಗು ಕಾರ್ಮಿಕ ಸಂಬಂಧಿ ಸಮಸ್ಯೆಗಳು ಎಂದು ಗುರುತಿಸಲಾಗಿದೆ. ರೋಗಗ್ರಸ್ಥ ಘಟಕಗಳನ್ನು ಸರ್ಕಾರ ವಶಕ್ಕೆ ತೆಗೆದುಕೊಂಡು NTC ಮೂಲಕ ನಡೆಸುವ ಪ್ರಯತ್ನ ಮಾಡುತ್ತಿದೆ. ಈ ಘಟಕಗಳ ಉತ್ಪನ್ನವನ್ನು ಬಡ ಜನತೆಗೆ ವಿರತರಿಸುವ ಕೆಲಸ ಮಾಡಲಾಗುತ್ತಿದೆ. ಅನೇಕ ಮಿಲ್‌ಗಳು ರೋಗ ಗ್ರಸ್ಥಗೊಳಗಾಗುತ್ತಿರುವುದು ಸ್ಪಷ್ಟ. ಇದರಿಂದ ನಿರುದ್ಯೋಗ ಸಮಸ್ಯೆ ಭೀಕರವಾಗಿ ತಲೆಯೆತ್ತುತ್ತಿದ್ದು ಸಮಸ್ಯೆ ಉಲ್ಬಣಿಸಿದೆ. ಆದ್ದರಿಂದ ಈಗ ಹೊಸ ಜವಳಿ ನೀತಿಯಲ್ಲಿ ಪ್ರಸ್ತಾಪಿಸಿರುವ ಅಂಶಗಳಿಗೂ ಹೊರತಾದ ಹೆಚ್ಚಿನ ವಿಷಯ ದತ್ತ ಗಮನ ಹರಿಸುವ ಅಗತ್ಯ ಇದೆ. ಉದ್ಯಮದ ಮೇಲಿನ ಅಧ್ಯಯನ ವರದಿಯನ್ನು ನಾನು ಕೂಲಂಕಷವಾಗಿ ಗಮನಿಸಿದ್ದೇನೆ. ಅದರಲ್ಲಿ ಉದ್ಯಮ ಸಂಕಷ್ಟದಿಂದ ಹೊರ ಬರಲು ನೀಡಬೇಕಾದ ಎಲ್ಲ ಸಲಹೆ ಸೂಚನೆಗಳನ್ನು ನೀಡಲಾಗಿದೆ ಆದರೂ ಉದ್ಯಮ ರೋಗ ಗ್ರಸ್ಥಗೊಳ್ಳುತ್ತಲೇ ಇದೆ. ಸಚಿವಾಲಯ ಅದರ ನಿಜವಾದ ಕಾರಣಗಳನ್ನು ಅರಿತು ಕ್ರಮ ಕೈಗೊಳ್ಳುವ ತುರ್ತು ಇದೆ.

ಈ ಉದ್ಯಮದ ಸಬಲೀಕರಣಕ್ಕೆ ಸಚಿವಾಲಯ ಪ್ರಾಮಾಣಿಕ ಕ್ರಮಗಳನ್ನು ಕೈಗೊಂಡಿದೆ. ಮಿಲ್‌ಗಳ ಸ್ಥಾಪನೆಗೆ I D B I ಮೂಲಕ ಆರ್ಥಿಕ ನೆರವು ನೀಡುವುದು ಅವುಗಳಲ್ಲಿ ಒಂದಾಗಿದೆ ಈ ಆರ್ಥಿಕ ನೆರವಿನೊಂದಿಗೆ 6ನೇ ಪಂಚವಾರ್ಷಿಕ ಯೋಜನೆ ವೇಳೆ ಮಹಾರಾಷ್ಟ ಮತ್ತು

ಕರ್ನಾಟಕದಲ್ಲಿ ಅನೇಕ ಮಿಲ್‌ಗಳು ಆರಂಭಗೊಂಡವು ಅವು ಉತ್ತಮ ರೀತಿಯಲ್ಲಿ ಕೆಲಸ ಕೂಡ ಆರಂಭಿಸಿವೆ. ಇದರಿಂದ ಸ್ಫೂರ್ತಿ ಪಡೆದ ಅನೇಕರು ಕರ್ನಾಟಕ ಮತ್ತು ಮಹಾರಾಷ್ಟ್ರದಲ್ಲಿ ಅಂತಹ ಸಹಕಾರಿ ಮಿಲ್‌ಗಳನ್ನು ಹೆಚ್ಚಾಗಿ ಸ್ಥಾಪಿಸುವ ಉತ್ಸುಕತೆ ತೋರಿದ್ದಾರೆ.

ಗ್ರಾಮೀಣ ಪ್ರದೇಶಗಳಿಗೆ ಕೈಗಾರಿಕೆಗಳು ಹೆಚ್ಚು ಹೆಚ್ಚಾಗಿ ಹಂಚಿ ಹೋಗಲು ನೆರವಾಗುವ ನಿಟ್ಟಿನಲ್ಲಿ ವಿಕೇಂದ್ರೀಕರಣ ಪರಿಕಲ್ಪನೆ ಬಗ್ಗೆ ನಾವು ಯೋಚಿಸುತ್ತಿದ್ದೇವೆ. ಸಹಕಾರಿ ಕ್ಷೇತ್ರದಲ್ಲಿ ಆಸಕ್ತಿ ಹೆಚ್ಚಿನ ಜನ ಅದರ ವ್ಯಾಪ್ತಿಯ ಬಳಿಕೆ ಬರುತ್ತಿದ್ದಾರೆ. ಅವರು ಪಾಲು ಬಂಡವಾಳವನ್ನು ತೊಡಗಿದ್ದಾರೆ. ಆ ಮೂಲಕ ಮಿಲ್‌ಗಳನ್ನು ಆರಂಭಿಸಲು ಅವರು ಆಸಕ್ತಿ ತೋರಿದ್ದಾರೆ. ಅವರಿಗೆ ಈಗ ಸರ್ಕಾರ ಅನುಮತಿ ಬೇಕಾಗಿದೆ. ಆದರೆ ನಾವು 7ನೇ ಯೋಜನೆಯಲ್ಲಿ ನೀಡಬೇಕಾದ ಅನುಮತಿಯನ್ನೆಲ್ಲಾ ನೀಡಿದ್ದಾಗಿದೆ ಎಂದು ಹೇಳುತ್ತಿದ್ದೇವೆ. ಆದ್ದರಿಂದ ಹೊಸ ಮಿಲ್‌ಗಳಿಗೆ ಅನುಮತಿ ನೀಡುವುದನ್ನು ನಸದಯ ನಿಷೇಧಿಸಲಾಗಿದೆ.

ಸಹಕಾರಿ ಸಂಘಗಳಲ್ಲಿ ಒಗ್ಗೂಡಿರುವ ಜನ ಮಿಲ್‌ಗಳನ್ನು ಆರಂಭಿಸುವ ಉದ್ದೇಶದಿಂದ ಕೋಟ್ಯಾಂತರ ರೂಪಾಯಿ ಶೇರು ಬಂಡವಾಳ ಹೂಡಿ ನಿಂತ್ತಿದ್ದಾರೆ! ನಮಗೆ ಅನುಮತಿ ಕೊಡಿ ಎಂದು ಅವರು ಕೇಳುತ್ತಿದ್ದಾರೆ. ಅವರು ಹಣ ಕೇಳುತ್ತಿಲ್ಲ. ಅನುಮತಿ ಕೇಳುತ್ತಿದ್ದಾರೆ. ಅವರಿಗೆ ಅನುಮತಿ ದೊರೆತರೆ ಗ್ರಾಮೀಣ ಪ್ರದೇಶದ ನಿರುದ್ಯೋಗ ಸಮಸ್ಯೆ ತಗ್ಗಲಿದೆ. ಇದು ಒಂದೇ ಉದ್ದೇಶದಿಂದ ರೈತರಿಂದ ನಾವು ಹಣ ಸಂಗ್ರಹಿಸಿಲ್ಲ. ಸಮಗ್ರ ಗ್ರಾಮೀಣ ಬದುಕನ್ನು ಹಸನುಗೊಳಿಸುವ ಉದ್ದೇಶದಿಂದ ರೈತರಿಂದ ಹಂ ಕೊಡಿಸಿದ್ದೇವೆ. ಕೃಷಿ ಆಧಾರಿತ ಕೈಗಾರಿಕೆಗಳನ್ನು ಸ್ಥಾಪಿತ ಗ್ರಾಮೀಣ ಬಡ ಜನತೆಗೆ ಉದ್ಯೋಗ ಕಲ್ಪಿಸುವ ಕನಸು ನಮ್ಮದು. ಆದ್ದರಿಂದ ನೂತನ ಮಿಲ್ ಅನುಮತಿ ಮೇಲೆ ಹೇರಿರುವ ನಿಷೇದವನ್ನು ಸರ್ಕಾರ ತೆಗೆದು ಹಾಕಬೇಕು. ಮಾನ್ಯ ಜವಳಿ ಸಚಿವರು ಕೃಷಿ ಮತ್ತು ಕೈಗಾರಿಕೆ ಸಚಿವರುಗಳೊಂದಿಗೆ ಸಭೆ ನಡೆಸಿ ಈ ನಿಟ್ಟಿನಲ್ಲಿ ಉದ್ಭವಿಸಿರುವ ಸಮಸ್ಯೆಯನ್ನು ತಕ್ಷಣವೆ ಬಗೆ ಹರಿಸಲು ಪ್ರಯತ್ನಿಸಬೇಕು.

ಸ್ಪಿನ್ನಿಂಗ್ ಮಿಲ್‌ಗಳು ಅನುಮತಿಗಾಗಿ ಕಾಯ್ದು ನಿಂತಿವೆ ರಾಣಿ ಬೆನ್ನೂರಿನ ಹನುಮನ ಮಟ್ಟಿ ನೂಲಿನ ಸಹಕಾರಿ ಸಂಘ ಆರಂಭಿಸಲು ಉದ್ದೇಶಿಸಿರುವ ಮಿಲ್ ಅಂತಹವರುಗಳ ಸಾಲಿನಲ್ಲಿ ಒಂದಾಗಿದೆ. ಇದು ಬಹು ದಿನಗಳಿಂದ ಅನುಮತಿಗಾಗಿ ಎದುರು ನೋಡುತ್ತಿದೆ. ಈ ಸಂಘದಲ್ಲಿ ಮಿಲ್ ಆರಂಭಿಸುವುದಕ್ಕಾಗಿ 30–40 ಲಕ್ಷ ರೂಪಾಯಿ ಸಂಗ್ರಹಗೊಂಡಿದೆ. 5 ವರ್ಷಗಳಿಂದ ಮಿಲ್ ಅನುಮತಿಗಾಗಿ ಎದುರು ನೋಡಲಾಗುತ್ತಿದೆ. ಆದ್ದರಿಂದ ಮಾನ್ಯ ಸಚಿವರಲ್ಲಿ ನಾನು ಕೇಳಿ ಕೊಳ್ಳುತ್ತಿದ್ದೇನೆ. ತಕ್ಷಣವೇ ಇಂತಹ ಬೇಡಿಕೆಗಳಿಗೆ ಸ್ಪಂದಿಸಿ ಅನುಮತಿ ನೀಡಿ ಮಿಲ್ ಆರಂಭಿಸುವ ಬೇಡಿಕೆ ಮಹಾರಾಷ್ಟ್ರ, ಆಂಧ್ರ ಅಥವಾ ಕರ್ನಾಟಕ, ಯಾವ ರಾಜ್ಯದಿಂದ ಬಂದಿದ್ದರೂ ಸರಿ ದಯವಿಟ್ಟು ಅನುಮತಿ ನೀಡಿ.

ಇದೇ ಕ್ಷೇತ್ರದ ಇನ್ನೊಂದು ಭಾಗ ಸಿಲ್ಕ್ ಉದ್ಯಮ ಜವಳಿ ಕ್ಷೇತ್ರ ರೇಷ್ಮೆ ಉದ್ಯಮವನ್ನು ತನ್ನ ಒಡಲಲ್ಲಿ ಒಂದು ಗೂಡಿಸಿಕೊಂಡಿದೆ. ಕರ್ನಾಟಕ ಹೆಚ್ಚು ರೇಷ್ಮೆ ಬೆಳೆಯುವ ರಾಜ್ಯ ಎಂಬ ಕೀರ್ತಿ ಪಡೆದಿದೆ. ವಿಶ್ವ ಬ್ಯಾಂಕ್ ನೆರವು ಲಭಿಸಿದ ಬಳಿಕ ರೇಷ್ಮೆ ವಲಯದಲ್ಲಿ ಗಣನೀಯ ಪ್ರಗತಿ ಉಂಟಾಗಿದೆ. ಕೇಂದ್ರ ರೇಷ್ಮೆ ಮಂಡಳಿ ಕೂಡ ಆಂದ್ರ ಪ್ರದೇಶ ಪಶ್ಚಿಮ ಬಂಗಾಳ ಮತ್ತಿತ್ತರ ರಾಜ್ಯಗಳಲ್ಲಿ ರೇಷ್ಮೆ ಉದ್ಯಮವನ್ನು ಅಭಿವೃದ್ಧಿಪಡಿಸುವತ್ತ ಆದ್ಯತೆ ನೀಡಿದೆ. ಈ ಎಲ್ಲಾ ಕ್ರೋಢಿಕೃತ ನೆರವಿನ ಫಲವಾಗಿ ಇಂದು ದೇಶದ ವಿವಿಧ ಭಾಗಗಳಲ್ಲಿ ಗುಣ ಮಟ್ಟದ ಉತ್ಪಾದನೆಯಾಗುತ್ತಿದೆ.

ರೇಷ್ಮೆ ಉದ್ಯಮ ಅಭಿವೃದ್ಧಿ ನಿಟ್ಟಿನಲ್ಲಿ ಕೇಂದ್ರ ರೇಷ್ಮೆ ಮಂಡಳಿಯ ಅನೇಕ ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡಿದೆ ರೇಷ್ಮೆ ಗೂಡು ಪೂರೈಕೆ, ಶೆಡ್ ನಿರ್ಮಿಸಿ ಕೊಡುವುದು ಮತ್ತು ರೋಗ ನಿಯಂತ್ರಣ ಕ್ರಮ ಕೈಗೊಳ್ಳುವುದು ಅದರ ಕಾರ್ಯಕ್ರಮಗಳಲ್ಲಿ ಸೇರಿವೆ ಇವೆಲ್ಲವುಗಳ ಜೊತೆಗೆ ಸಚಿವರಲ್ಲಿ ನಾವು ಕೇಳಿಕೊಳ್ಳುವುದೇನೆಂದರೆ, ರೇಷ್ಮೆ ಆಮದು ವಿಷಯದಲ್ಲಿ ಮಧ್ಯವರ್ತಿಗಳಿಗೆ ಅವಕಾಶ ನೀಡದಂತೆ ಕ್ರಮ ಕೈಗೊಳ್ಳಬೇಕು. ಚೀನ ಮತ್ತಿತ್ತರ ರಾಷ್ಟ್ರಗಳಿಂದ ಮಧ್ಯವರ್ತಿಗಳು ರೇಷ್ಮೆ ಆಮದು ಮಾಡಿಕೊಳ್ಳುವ ದಂಧೆ ನಡೆಸಿದ್ದಾರೆ. ಮಧ್ಯವರ್ತಿಗಳ ಈ ದಂದೆಗೆ ತಡೆ ಹಾಕದಿದ್ದರೆ ರೇಷ್ಮೆ ಬೆಳೆಗಾರರು ತೀರ ಸಂಕಷ್ಟಕ್ಕೆ ಗುರಿಯಾಗಲಿದ್ದಾರೆ. ಆಮದು ರೇಷ್ಮೆ ದೇಶಿ ಮಾರುಕಟ್ಟೆಗೆ ಲಗ್ಗೆ ಇಟ್ಟರೆ ನಮ್ಮ ರೈತರ ರೇಷ್ಮೆ ಬೆಲೆ ನೆಲ ಕಚ್ಚಲಿದೆ. ಆದ್ದರಿಂದ ಮಧ್ಯವರ್ತಿಗಳ ಆಮದು ದಂದೆಗೆ ತಡೆ ಹಾಕಬೇಕು. ಒಂದು ವೇಳೆ ಆಮದು ಅನಿವಾರ್ಯ ಎನಿಸಿದರೆ, ಅದು ರೇಷ್ಮೆ ಮಂಡಳಿ ಮೂಲಕ ಮಾತ್ರ ನೆಡೆಯಬೇಕು. ವೈಯುಕ್ತಿಕ ಹಸ್ತಕ್ಷೇಪ ಈ ವಿಷಯದಲ್ಲಿ ಖಂಡಿತ ಸಲ್ಲದು ಮಧ್ಯವರ್ತಿಗಳ ಹಾವಳಿಯಿಂದ ಬೇಸತ್ತ ದೇಶದ ವಿವಿಧ ಭಾಗಗಳ ರೈತರಿಂದ ದೊಡ್ಡ ಕೂಗು ಎದ್ದಿದೆ. ಈ ವಿಷಯದಲ್ಲಿ ಮಾನ್ಯ ಸಚಿವರು ಸಾಕಷ್ಟು ಮನವಿಗಳನ್ನು ಕೂಡ ಸ್ವೀಕರಿಸಬಹುದು. ಕೇಂದ್ರ ರೇಷ್ಮೆ ಮಂಡಳಿಯ ಮೂಲಕ ಖರೀದಿ ವ್ಯವಹಾರ ನಡೆಯಬೇಕು ಎಂದು ಕರ್ನಾಟಕ ಸರ್ಕಾರ ತುಂಬ ಹಿಂದಿನಿಂದಲೂ ಒತ್ತಾಯಿಸುತ್ತಾ ಬಂದಿದೆ. ರೇಷ್ಮೆ ಉದ್ಯಮ ಗ್ರಾಮೀಣ ಕೃಷಿ ಆಧಾರಿತ ಉದ್ಯಮವಾಗಿದೆ. ಇದರಿಂದ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಹೆಚ್ಚಿನ ಲಾಭ. ತರುವ ಹಿಪ್ಪನೇರಳೆ ಕೃಷಿ ಅನುಕೂಲಕಾರಿ ಇದರಿಂದ ಅವರಿಗೆ ತೃಪ್ತಿಕರ ಹಣ ಕೂಡ ಸಿಗುತ್ತದೆ. ದೇಶದ ವಿವಿದೆಡೆಗಳಿಗೂ ಹಿಪ್ಪನೇರಳೆ ಕೃಷಿ ವಿಸ್ತರಣೆ ಗೊಳ್ಳುವಂತೆ ಕ್ರಮ ಕೈಗೊಳ್ಳಬೇಕು. ಈ ನಿಟ್ಟಿನಲ್ಲಿ ರೂಪುಗೊಳ್ಳುವ ಯೋಜನೆಗಳಿಗೆ ಕೇಂದ್ರ ರೇಷ್ಮೆ ಮಂಡಳಿಯ ಪ್ರೋತ್ಸಾಹ ನೀಡಬೇಕು. ರೇಷ್ಮೆ ಬೆಳೆಗಾರರ ಇನ್ನೊಂದು ಸಂಕಷ್ಟ ಎಂದರೆ ಊಜಿಫ್ಲೈ ರೋಗ ಧಾಳಿ ಕುರಿತ್ತದು. ಇನ್ನೊಂದು ಗಂಭೀರ ಸ್ವರೂಪದ ರೇಷ್ಮೆ ರೋಗ. ಈ ರೋಗ ಆವರಿಸಿದರೆ ಇಡೀ ಬೆಳೆ ಸರ್ವನಾಶಗೊಳ್ಳುತ್ತದೆ. ಕಳೆದ ಕೆಲವು ವರ್ಷಗಳಿಂದ ಈ ರೋಗ ಬಾಧೆ ಹೆಚ್ಚಾಗಿದ್ದು ಇಳುವರಿ ಕುಂಟಿತಗೊಳ್ಳುತ್ತಿದೆ ಕಳೆದ ಕೆಲವು ವರ್ಷಗಳಿಂದ ಈ ರೋಗ ಬಾಧೆ ಹೆಚ್ಚಾಗಿದ್ದು ಇಳುವರಿ ಕುಂಠಿತಗೊಳ್ಳಲು ಕಾರಣವೆನಿಸಿದೆ. ಇದರ ನಿಯಂತ್ರಣಕ್ಕೆ ಹಾಗೂ ದೇಶದ ಇತರ ಭಾಗಗಳಿಗೆ ಹರಡದಂತೆ ಮುನ್ನೆಚ್ಚರ ವಹಿಸಿವ ನಿಟ್ಟಿನಲ್ಲಿ ಕೇಂದ್ರ ರೇಷ್ಮೆ ಮಂಡಳಿಯ ತುರ್ತು ಕ್ರಮಗಳನ್ನು ಕೈಗೊಳ್ಳಬೇಕಿದೆ.

ಜನತಾ ವಸ್ತ್ರ ಕುರಿತು ಇಲ್ಲಿನ ಕೆಲವು ಸಲಹೆ ನೀಡಲು ಇಚ್ಛಿಸುತ್ತೇನೆ. ಜನತಾ ವಸ್ತ್ರವನ್ನು NTC ಉತ್ಪಾದಿಸುತ್ತದೆ. ನಿಯಂತ್ರಿತ ದರ ಮತ್ತು ತೆರಿಗೆ ಮುಕ್ತ ವಿಧಾನದಲ್ಲಿ ಈ ಬಟ್ಟೆ ಉತ್ಪಾದನೆಯಾಗುತ್ತಿದೆ. ಆದರೆ ಈ ಬಟ್ಟೆಯನ್ನು ಆದೆಷ್ಟು ಜನ ಬಡವರು ಖರೀದಿಸುತ್ತಾರೆ ಅನ್ನುವ ಬಗ್ಗೆ ಅನುಮಾನವಿದೆ. ಈ ವಸ್ತ್ರವನ್ನು ಕೆಳ ಹಂತದವರೆಗೆ ಕೊಂಡೊಯ್ದು ಬಡ ಜನರಿಗೆ ತಲುಪಿಸುವ ಕೆಲಸವನ್ನು ಆದೆಷ್ಟು ಸಹಕಾರಿ ಸಂಸ್ಥೆಗಳೇ ನಿರ್ವಹಿಸುತ್ತಿದೆ ಅನ್ನುವುದು ಸಂಶಯಾತ್ಮಕ ಸಂಗತಿ ಯಾಕೆಂದರೆ ಅನೇಕ ಸಹಕಾರಿ ಸಂಸ್ಥೆಗಳು ಇಂದು ಸ್ಥಗಿತಗೊಳ್ಳುವ ಹಂತದಲ್ಲಿದೆ ಜನತಾ ವಸ್ತ್ರ ಖರೀದಿಸುವ ಸಣ್ಣ ಸಾಮರ್ಥ್ಯ ಕೂಡ ಇಲ್ಲದ ಸ್ಥಿತಿಯನ್ನು ಅನೇಕ ಸಹಕಾರಿ ಸಂಘಗಳು ತಲುಪಿವೆ. ಆದ್ದರಿಂದ ಬಡ ಜನತೆ ಈ ವಸ್ತ್ರ ಭಾಗ್ಯದಿಂದ ವಂಚಿತ ಗೊಳ್ಳುತ್ತಿದೆ. ವಿವಿಧ ರಾಜ್ಯಗಳಿಗೆ ಪೂರೈಕೆಯಾಗುತ್ತಿರುವ ಜನತಾ ವಸ್ತ್ರ ಗುಣಮಟ್ಟದಲ್ಲಿ ತೀರ ಕೇಳ ದರ್ಜೆಯದ್ದಾಗಿದೆ. ಈ ಯೋಜನೆಯಡಿ ಪೂರೈಕೆಯಾಗುತ್ತಿರುವ ಸೀರೆ ಮಹಿಳೆಯರು ಧರಿಸಲು ಖಂಡಿತ ಅಯೋಗ್ಯ ಅವುಗಳನ್ನು ಧರಿಸಿ ಹೊರ ಹೋಗಲು ಸಾಧ್ಯವಿಲ್ಲ. ಆದ್ದರಿಂದ ಈ ವಸ್ತ್ರದ ಗುಣಮಟ್ಟ ಸುಧಾರಿಸ ಬೇಕಿದೆ ಜೊತೆಗೆ ಅದರ ಬಾಳಿಕೆ ಕೂಡ ಉತ್ತಮಗೊಳ್ಳಬೇಕಿದೆ. ಸದ್ಯದ ವಸ್ತ್ರಗಳು 1–2 ತಿಂಗಳು ಬಾಳಿಕೆ ಬರಬಹುದು 4ನೇ ತಿಂಗಳು ಚಿಂದಿಯಾಗಿರುತ್ತದೆ. ಬಾಳಿಕೆಯ ಅವಧಿಯ ಜೊತೆಗೆ ವಿನ್ಯಾಸ ಕೂಡ ಸುಧಾರಿಸಬೆಕಿದೆ. ಪ್ರತಿ ರಾಜ್ಯದಲ್ಲಿಯೂ ಉಡಿಗೆಯ ವಿನ್ಯಾಸದ ಕಲೆ ಬೇರೆ ಬೇರೆಯಾಗಿರುತ್ತದೆ. ಆದರೆ ಈ ಜನತಾ ವಸ್ತ್ರ ಮಾತ್ರ ವಿನ್ಯಾಸ ಬಣ್ಣದಲ್ಲಿ ಒಂದೇ ರೀತಿಯದ್ದಾಗಿದೆ. ಅದನ್ನು ನೋಡಿದಾಗಲೆಲ್ಲಾ ಸಮವಸ್ತ್ರ ನೆನಪಾಗುತ್ತದೆ. ಕಾವಲು ಸಿಬ್ಬಂದಿ. ನರ್ಸ್‌ಗಳು ಈ ರೀತಿಯ ಸಿಬಂಧ್ಧಿ ತೊಡುವ ಸಮವಸ್ತ್ರದಂತಿರುತ್ತದೆ. ಈ ರೀತಿ ಇರಬಾರದು. ಆಕರ್ಷಕ ವಿನ್ಯಾಸ ಮತ್ತು ಬಾಳಿಕೆಯ ಗುಣಮಟ್ಟ ಸುಧಾರಣೆ ಕಂಡುಕೊಳ್ಳಬೇಕಿದೆ.

ಈ ಬಜೆಟ್ ವಿತರಣೆ ವ್ಯವಸ್ಥೆಯಲ್ಲಿ ನಾವು ಕೆಲವೊಂದು ಸುಧಾರಣೆಗಳನ್ನು ಕಂಡುಕೊಳ್ಳಬೇಕಿದೆ. ಜಿಲ್ಲಾ ಮಟ್ಟಗಳಲ್ಲಿ ಜನತಾ ವಸ್ತ್ರ ವಿತರಿಸಲು ನಾವು ವ್ಯಾನ್‌ಗಳ ಬಳಕೆ ಮಾಡುತ್ತೇವೆ. ಹಾಗೂ ವಾರದ ಮಂಡಿಗಳಲ್ಲಿ ಈ ವಸ್ತ್ರದ ಮಾರಾಟ ವ್ಯವಸ್ಥೆ ಇದೆ. ಇದರಿಂದ ಬಡ ಜನತೆಗೆ ಸುಲಭವಾಗಿ ಈ ವಸ್ತ್ರ ಕೈಗೆ ಎಟುಕುತ್ತದೆ. ಇಂತಹ ಯೋಜನೆಗಳು ಭವಿಷ್ಯತ್ತಿನಲ್ಲಿಯೂ ಮುಂದುವರೆಯುವ ಅಗತ್ಯವಿದೆ. ಮಾರಾಟ ವ್ಯವಸ್ಥೆಯಲ್ಲಿ ರಿಯಾಯಿತಿ ನೀಡುವುದು ಉತ್ತಮ ಪರಿಕಲ್ಪನೆಯಾಗಿದೆ. ರಿಯಾಯಿತಿ ಇದ್ದಾಗ ಖರೀದಿ ಬರಾಟೆ ಹೆಚ್ಚುತ್ತದೆ. ಸರ್ಕಾರದ ಸದ್ದುದೇಶಿತ ರಿಯಾಯಿತಿ ಮಾರಾಟ ವ್ಯವಸ್ಥೆಯಲ್ಲಿ ಅಕ್ರಮ ನಡೆಯುತ್ತಿದೆ. ಇದು ಸರ್ಕಾರದ ಗಮನಕ್ಕೆ ಬಂದಿದೆಯೋ ಇಲ್ಲವೋ ತಿಳಿದಿಲ್ಲ. ಆದರೆ ಇದು ತುಂಬ ಕಡೆ ನಡೆಯುತ್ತಿರುವುದಂತು ನಿಜ ಇದರಿಂದ ರಿಯಾಯಿತಿ ಅರ್ಥ ಕಳೆದುಕೊಂಡಿದೆ.

ಹತ್ತಿ ಖರೀದಿ ವ್ಯವಸ್ಥೆ ಸುಧಾರಿಸುವ ನಿಟ್ಟಿನಲ್ಲಿ ವಿವಿಧ ರಾಜ್ಯಗಳ ಪ್ರತಿನಿಧಿಗಳನ್ನು ಒಳಗೊಂಡ ಸಲಹಾ ಮಂಡಳಿಯ ರಚಿಸಲಾಗಿದೆ. ರೈತರು ತಾವು ಬೆಳೆದ ಹತ್ತಿಯನ್ನು ಈ ಮಂಡಳಿಯ ಪರೀಕ್ಷೆಗೆ ಒಳಪಡಿಸುವುದು ಕಡ್ಡಾಯ. ನಾನು ಕೂಡ ಹತ್ತಿ ಬೆಳೆಯುವ ರಾಜ್ಯದಿಂದ ಬಂದಿದ್ದೇನೆ. ತುಂಗ ಭದ್ರ ಅಣೆಕಟ್ಟು ನೀರು ಕ್ಷೇತ್ರದಲ್ಲಿ ಬಳಕೆಯಾಗುತ್ತಿದ್ದು ಅದರಿಂದ ಉದ್ದ, ಅತಿಉದ್ದ ಮತ್ತು ಮದ್ಯಮ ಎಳೆಯ ಹತ್ತಿ ಬೆಳೆಯಲಾಗುತ್ತದೆ. ಪ್ರತೀ ವರ್ಷ ರಾಯಚೂರು CCI ಮತ್ತು ಬಳ್ಳಾರಿ ಮಾರುಕಟ್ಟೆಗೆ ಬಂದು ಭಾರಿ ಪ್ರಮಾಣದಲ್ಲಿ ಹತ್ತಿಯನ್ನು ಖರೀದಿಸುತ್ತದೆ. ಈ ಯೋಜನೆ ಭವಿಷ್ಯತ್ತಿನ ದೃಷ್ಟಿಯಿಂದ ಉತ್ತಮವಾದ್ದದ್ದು. ಆದರೆ ಖರೀದಿಯ ವ್ಯವಸ್ಥೆಯಲ್ಲಿ ಹಲವು ರೀತಿಯ ಅಕ್ರಮ ನಡೆಯುತ್ತಿರುವ ಬಗ್ಗೆ ರೈತರಲ್ಲಿ ಅಸಮಾಧಾನವಿದೆ. ಪರ್ಸೆಂಟೇಜ್ ಗಿಟ್ಟಿಸಿ ಕಳಪೆ ದರ್ಜೆಯ ಹತ್ತಿ ಖರೀದಿಸುವ ದಂಧೆ ನಡೆಯುತ್ತಿದೆ. ಅಗತ್ಯ ಪರೀಕ್ಷಾ ಮಾಪನಗಳು CCI ಬಳಿ ಇಲ್ಲ. ತೇವಾಂಶ ಪರೀಕ್ಷಾ ಯಂತ್ರ ತೂಕ ಮಾಪನ ಯಂತ್ರ ಸರಿಯಿಲ್ಲ. ಇದರಿಂದ ಕೆಲವು ಬಾರಿ ರೈತರು ಮತ್ತೆ ಬಾರಿ CCI ನಷ್ಟ ಅನುಭವಿಸುವಂತಾಗಿದೆ. ಈ ಅವ್ಯವಸ್ಥೆಗೆ ಅನೇಕ ಕಾರಣಗಳಿವೆ ಅವುಗಳನ್ನು ನಾನು ಸದನದಲ್ಲಿ ಪ್ರಸ್ತಾಪಿಸಲು ಇಚ್ಚಿಸುವುದಿಲ್ಲ. ನಾನು ಹೇಳಬಯಸದ ವಿಷಯ ಏನು ಅನ್ನುವುದು ಮಾನ್ಯ ಸಚಿವರಿಗೆ ಅರ್ಥವಾಗಿರಬಹುದು. ಅದೇನೆ ಇರಲಿ, CCI ಮಾರುಕಟ್ಟೆಯನ್ನು ಪ್ರವೇಶಿಸಿದೆ. ಅದರಿಂದ ಅನೇಕ ಜನ ಸುಗ್ಗಿ ಸಂಭ್ರಮ ಆಚರಿಸುತ್ತಿದ್ದಾರೆ. ಇಷ್ಟನ್ನು ಮಾತ್ರ ನಾನು ಹೇಳಬಲ್ಲೆ.

C.C.I.ಅನೇಕ ಬಾರಿ ರೈತರಿಂದ ಖರೀದಿಸಿದ ಹತ್ತಿ ದಾಸ್ತಾನ್ನನ್ನು ಸೂಕ್ತ ರೀತಿಯಲ್ಲಿ ಮಾಡದೆ ಹದಗೆಡಿಸುತ್ತಿದೆ ಅನೇಕ ಬಾರಿ ದಾಸ್ತಾನು ಅಗ್ನಿ ಅನಾಹುತಕ್ಕೆ ಭಸ್ಮಗೊಂಡ ನಿದರ್ಶನವುಂಟು. ಸೂರ್ಯನ ಪ್ರಖರ ಉಷ್ಣತೆಯ ಒಡೆತಕ್ಕೆ ಅಪಾರ ಪ್ರಮಾಣದ ದಾಸ್ತಾನು ಹತ್ತಿ ನಷ್ಟಕ್ಕೀಡಾದ ಪ್ರಕರಣಗಳಿವೆ. C.C.I ಖರೀದಿ ವ್ಯವಸ್ಥೆಯಲ್ಲಿ ಇನ್ನಷ್ಟು ಸುಧಾರಣೆಯಾಗಬೇಕು. ಜೊತೆಗೆ ದಾಸ್ತಾನು ವ್ಯವಸ್ಥೆ ಕೂಡ ಉತ್ತಮಗೊಳ್ಳಬೇಕು. ಸದ್ಯ ಜಿಲ್ಲಾಮಟ್ಟದಲ್ಲಿ ಹತ್ತಿ ಖರೀದಿಗೆ ನೇಮಕಗೊಂಡಿರುವ ವ್ಯಕ್ತಿಗಳು ಅರ್ಹತೆಯಿಲ್ಲದವರಾಗಿದ್ದಾರೆ. ಈ ಲೋಪವನ್ನು ಗುರುತಿಸಿ ಅರ್ಹ ವ್ಯಕ್ತಿಗಳಿಗೆ ಇಂತಹ ಜವಾಬ್ದಾರಿ ವಹಿಸಿಕೊಡುವ ಅಗತ್ಯವಿದೆ.N.T.C.ಮತ್ತು ಮಿಲ್ಲಗಳಿಗೆ ಪೂರೈಕೆ ಮಾಡುವ ಉದ್ದೇಶದಿಂದ ಮಾತ್ರ C.C.I ರೈತರಿಂದ ಹತ್ತಿ ಖರೀದಿ ಮಾಡುತ್ತಿಲ್ಲ. ಅದು ರಫ್ತು ಉದ್ದೇಶವನ್ನು ಸಹ ಗಮನದಲ್ಲಿರಿಸಿ ಕೊಂಡು ಖರೀದಿ ಕಾರ್ಯವನ್ನು ಮುನ್ನಡೆಸುತ್ತಿದೆ ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸ ಬೇಕೆಂದು ಈ ಸದನದ ಮೂಲಕ ತಮ್ಮನ್ನು ಕೋರುತ್ತೇನೆ ಹತ್ತಿ ಬೆಳೆಯುವ ಉದ್ದೇಶಕ್ಕಾಗಿ ತಮ್ಮ ಜಮೀನ್ನನ್ನು ಮುಡುಪಾಗಿಡಲು ನಮ್ಮ ರೈತರು ಸಿದ್ಧರಿದ್ದಾರೆ ರೈತರು ಅಂತಹ ಜಮೀನನ್ನು ಕಪ್ಪು ಹತ್ತಿಯ ಕಣಜ ಎಂದು ಕರೆಯಲಾಗುತ್ತಿದೆ ಅಂತಹ ಜಮೀನಿನಲ್ಲಿ ಹತ್ತಿಯ ಹೊರತು ಬೇರೇನ್ನನ್ನು ಬೆಳೆಯಲಾಗದು ಅಂತಹ ಭೂಮಿಯಲ್ಲಿ ಹತ್ತಿಯನ್ನೇ ಬೆಳೆದು ಬೆಲೆಯಲ್ಲಿ ಸ್ಥಿರತೆ ಕಾಯ್ದುಕೊಂಡು ಹೋಗಲು ನಾವು ಸಿದ್ಧರಿದ್ದೇವೆ. 40 ಕೌಂಟ್ ಮಧ್ಯಮ

ನೂಲಿನ ಬಳಕೆಗೆ ಸಲ್ಲುವ ಹತ್ತಿಗೆ ಇಂದು ನೀವು ನೀಡುತ್ತಿರುವ ದರವನ್ನೇ ಕಣ್ಣು ಮುಚ್ಚಿ ಸ್ವೀಕರಿಸಲಾಗುತ್ತಿದೆ. ಇಂದು ನೀವು ನೀಡುತ್ತಿರುವ ಈ ದರ ಕಳೆದ 10 ವರ್ಷಗಳಿಂದಲೂ ಬದಲಾಗದೆ ಮುಂದುವರೆದುಕೊಂಡು ಬಂದಿದೆ ಈಗಲಾದರೂ ದರ ಪರಿಷ್ಕರಿಸಿ ಆಕರ್ಷಕ ಬೆಲೆ ಒದಗಿಸಿಕೊಡಬೇಕಿದೆ. ಹತ್ತಿ ಬೆಳೆಯುವುದು ಕ್ಲಿಷ್ಟ ಕಾರ್ಯ ಇತ್ತೀಚಿನ ವರ್ಷಗಳಲ್ಲಿ ಹತ್ತಿ ಬೆಳೆ ನಷ್ಟದಿಂದ ಆಂಧ್ರಪ್ರದೇಶದ ಪೂರ್ವ ಗೋದಾವರಿ ಮತ್ತು ಕೃಷ್ಣ ಜಿಲ್ಲೆಗಳಲ್ಲಿ ರೈತರು ಆತ್ಮಹತ್ಯೆಗೆ ಶರಣಾಗುದ್ದನ್ನು ನಾನಿಲ್ಲಿ ನಿಮ್ಮ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಹತ್ತಿ ಫಸಲು ಅದೃಷ್ಟದ ಫಲ ಬಂದರೆ ಲಾಭ ಬರದಿದ್ದರೆ ಎಲ್ಲವೂ ನಷ್ಟ ಆದರೂ ರೈತರು ಹತ್ತಿ ಬೆಳೆಯಲು ಸಿದ್ಧರಿದ್ದಾರೆ ಯಾವುದೇ ಸಂದರ್ಭದಲ್ಲಿಯೂ ಹತ್ತಿ ಆಮದು ಮಾಡಿಕೊಳ್ಳುವ ಅಗತ್ಯ ನಮಗಿಲ್ಲ ಇದನ್ನು ಮೀರಿ ಆಮದು ಮಾಡಿಕೊಳ್ಳಲಾಗುತ್ತಿದೆ ಎಂತಾದರೆ ಅದರಲ್ಲಿ ಗೋಲ್ ಮಾಲ್ ನಡೆಯುತ್ತಿದೆ ಎಂದು ಅರ್ಥ.

ಈ ಎಲ್ಲಾ ಅಂಶ ಬದಿಗಿರಿಸಿ ಸದ್ಯ ನಾನು ರೈತರ ಹಿತ್ತಾಸಕ್ತಿ ಕಾಯುವತ್ತ ಹೆಚ್ಚಿನ ಗಮನ ಹರಿಸಬೇಕೆಂದು ಮಾನ್ಯ ಸಚಿವರಲ್ಲಿ ಕೇಳಿಕೊಳ್ಳುತ್ತೇನೆ ರೈತರ ಫಸಲಿಗೆ ಈಗ ನೀಡಲಾಗುತ್ತಿರುವ ಬೆಲೆಗಿಂತಲೂ ಹೆಚ್ಚಿನ ಪ್ರಮಾಣದ ಬೆಂಬಲ ಬೆಲೆ ನೀಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಇಷ್ಟು ಹೇಳಿ ನನ್ನ ಮಾತು ಮುಗಿಸುತ್ತೇನೆ.

# 30ಜುಲೈ 1985 – ಲೋಕಸಭೆ 3ನೇ ಅಧಿವೇಶನ

**ಜವಳಿ ಉತ್ಪಾದನೆಯು ರಾಷ್ಟ್ರದ ಆರ್ಥಿಕ ಅಭಿವೃದ್ಧಿ ದಿಶೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಅತ್ಯಂತ ಪುರಾತನವಾದ ಈ ವೃತ್ತಿಯನ್ನು ಅವಲಂಬಿಸಿದೆ ಕೊಟ್ಯಾಂತರ ಜನ ರಾಷ್ಟ್ರವ್ಯಾಪ್ತಿ ಇದ್ದಾರೆ. ಕೇಂದ್ರ ಸರ್ಕಾರ ಕೈಮಗ್ಗ ನೇಕಾರರನ್ನು ಗಮನದಲ್ಲಿಟ್ಟಿಕೊಂಡು ಜವಳಿ ನೀತಿಯನ್ನು ಬದಲಾಯಿಸಿ 6 June** 1985**ರ ಅಧಿವೇಶನದಲ್ಲಿ ಪ್ರಕಟಪಡಿಸಿದೆ.**
**ಕರ್ನಾಟಕ ಹತ್ತಿ ಮತ್ತು ರೇಶ್ಮೆ ಬೆಳೆಗಾರರು ಎದುರಿಸಿದ ಸಮಸ್ಯೆಗಳ ಬಗ್ಗೆ ಮಾತ್ರ ಗಮನ ಸೆಳೆಯಬಯಸುವೆ ಎಂದು ಸುದೀರ್ಘವಾದ ವಿಷಯ ಮಂಡನೆ ಮಾಡುತ್ತಾರೆ ಶ್ರೀಮತಿ ಬಸವರಾಜೇಶ್ವರಿಯವರು.**

ಮಾನ್ಯರೇ

ಬಹುಸಂಖ್ಯಾತ ಹತ್ತಿಬೆಳೆಗಾರರು ಮತ್ತು ಹತ್ತಿನೂಲು ನೇಕಾರರಹಿತ ಗಮನದಲ್ಲಿರಿಸಿಕೊಂಡು ಸ್ಪರ್ಧಾತ್ಮಕವಾಗಿ ಅವರು ಮಾರಾಟ ಮತ್ತು ಉತ್ಪನ್ನಗಳಲ್ಲಿ ಅಭಿವೃದ್ಧಿ ಸಾಧಿಸಲು ಈಗ ಇರುವ ಜವಳಿ ನೀತಿಯು ತತ್‌ಕ್ಷಣ ಬದಲಾಗಬೇಕು. ಮಿಲ್‌ಮಾಲೀಕರಿಗೆ ಈ ಹಿಂದೆ ಇದ್ದ ಹತ್ತಿನೂಲು ಬಳಕೆ ಮತ್ತು ಕಚ್ಚಾಹತ್ತಿ ನೂಲು ಬಳಕೆಯ ಕಡ್ಡಾಯ ಪದ್ಧತಿಯಿಂದ ವಿನಾಯಿತಿ ನೀಡಿ ಅವರು ಹೇರಳವಾಗಿ ಸೈಥಟಿಕ್ ನೂಲನ್ನ ಆಮದು ಮಾಡಿಕೊಳ್ಳಲು ಈಗ ಜಾರಿಗೆ ತಂದಿರುವ ಜವಳಿ ನೀತಿ ಆಸ್ಪದ ನೀಡುತ್ತಿದ್ದು ಇದು ಕೈಮಗ್ಗ ನೇಕಾರರಿಗೆ ಮಾರಕವಾಗಿದೆ.

ಇನ್ನು ರೇಶ್ಮೆ ಆಮದು ಕುರಿತಂತೆ ರೇಶ್ಮೆಬೆಳೆಯುವ ರಾಜ್ಯದ ಪ್ರಭುತ್ವದೊಂದಿಗೆ ಚರ್ಚಿಸಿ ರೇಶ್ಮೆ ಆಮದು ನೀತಿ ರೂಪಿಸಬೇಕು ನಮ್ಮ ಕರ್ನಾಟಕದಲ್ಲಿಯೇ ರೇಶ್ಮೆ ಉತ್ಪನ್ನಕ್ಕೆ ಹೆಚ್ಚು ಪ್ರಾರಸ್ತ್ಯ ನೀಡುವ ಬೆಳೆಯಾಗಿದ್ದು ಕೇಂದ್ರ ರೇಷ್ಮೆ ಮಂಡಳಿಯ ಕಾರ್ಯಕ್ರಮ ರೂಪಿಸಿ ರೇಶ್ಮೆಬೆಳೆ ಮಹತ್ವ ಆರ್ಥಿಕ ಸ್ವಾವಲಂಬನೆಯ ದಿಶೆಯಲ್ಲಿ ಆಗುವ ಅಭಿವೃದ್ಧಿ ಕುರಿತಂತೆ ರೇಶ್ಮೆ ಬೆಳೆಗಾರರಿಗೆ ತಿಳಿಹೇಳಿ ಪ್ರೇರೇಪಣೆ ನೀಡುವ ವ್ಯವಸ್ಥೆ ಆಗಬೇಕು. ರೇಶ್ಮೆ ಕೇಂದ್ರಗಳು ರಾಷ್ಟ್ರದ ವಿವಿಧಭಾಗಗಳಲ್ಲಿ ತಲೆಎತ್ತಿ ರೇಶ್ಮೆನೂಲು ಮಾರಾಟ, ಬಟ್ಟೆ, ಸೀರೆ ಮಾರಾಟಕ್ಕೆ ವ್ಯವಸ್ಥೆಯಾದಲ್ಲಿ ರೇಶ್ಮೆನೂಲು ತಯಾರಕರು, ನೇಕಾರರಿಗೆ ಹೆಚ್ಚಿನ ಪ್ರೋತ್ಸಾಹಸಿಗುತ್ತದೆ.

ಹತ್ತಿನೂಲು ತಯ್ಯಾರ ಘಟಕ ಮತ್ತು ನೂಲುಎಳೆ ಹುರಿಗೊಳಿಸುವ ದಿಶೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ ಬಳ್ಳಾರಿ–ರಾಯಚೂರ್ ಜಿಲ್ಲೆಗಳಲ್ಲಿ ಹತ್ತಿಬೆಳೆಯು ಸಾಕಷ್ಟು

ಹೇರಳ ಪ್ರಮಾಣದಲ್ಲಿ ಬೆಳೆಯುತ್ತಲಿದ್ದು ಅದಕ್ಕೆ ಪೂರಕವಾಗಿ ಸೌಲಭ್ಯವನ್ನು ' ರಾಜ್ಯ ಹತ್ತಿ ನಿಗಮ' ರೂಪಿಸುವ ದಿಶೆಯಲ್ಲಿ ವಿಳಂಬ ನೀತಿ ಅನುಸರಿಸುತ್ತಲಿದೆ. ಹತ್ತಿಯ ಖರೀದಿಯು ಸಹ ಸುಗ್ಗಿಕಾಲದಲ್ಲಿ ಸುರಳೀತ ನಡೆಯದೇ ಹತ್ತಿಯು ಗೂಡೌನ್‌ಗಳಲ್ಲಿ ಕೊಳೆಯುವಂತಾಗುವುದು ಯಾಕೆ? ಇದರಿಂದ ರೈತರು ಕಂಗಾಲಾಗಿದ್ದಾರೆ ಬೆಲೆಕುಸಿತ-ಮಧ್ಯವರ್ತಿಗಳ ಹಾವಳಿಯಿಂದ ರೈತರನ್ನು ರಕ್ಷಿಸುವ ಸರ್ಕಾರವೇ ಹತ್ತಿ ಖರೀದಿಸಿ ಮಿಲ್‌ಗಳಿಗೆ ಮಾರುವ ವ್ಯವಸ್ಥೆ ರೂಪುಗೊಳ್ಳಬೇಕು. ಹತ್ತಿ ನಿಗಮವುಕೂಡ ಹತ್ತಿ ಖರೀದಿ ವಿಷಯದಲ್ಲಿ ಹಿಂದೇಟು ಹಾಕುತ್ತಿರುವುದು ಸರಿಯಲ್ಲ ಇದರಿಂದ ಹತ್ತಿಬೆಳೆಗಾರರು ಚಿಂತಾಕ್ರಾಂತರಾಗಿದ್ದಾರೆ ಎಂದು ರೈತಪರ ಜನಪರವಾದ ವಿಷಯ ಮಂಡನೆಯನ್ನು ಶ್ರೀಮತಿ ಬಸವರಾಜೇಶ್ವರಿಯವರು ಮಾಡುತ್ತ ಹೋಗುತ್ತಾರೆ.

1990, 9ನೇ ಲೋಕಸಭಾ ಅಧಿವೇಶನದಲ್ಲಿ ಶ್ರೀಮತಿ ಬಸವರಾಜೇಶ್ವರಿ ಅವರು ಮಂಗಳೂರಿನಲ್ಲಿ ಪೆಟ್ರೋಕೆಮಿಕಲ್ ಯೋಜನೆ ಮತ್ತು ಶುದ್ಧಿಕರಣ ಘಟಕದ ಮಂಜೂರಿಗಾಗಿ ಒತ್ತಾಯಿಸುತ್ತಾ, ಶೀರ್ಘ ಮುಂದೂವರಿಯಲು ಅಗತ್ಯತೆ ಕುರಿತು ಮಾತನಾಡಿದರು.

ಮಂಗಳೂರಿನಲ್ಲಿ ಶುರುಮಾಡಬೇಕೆಂದು ಯೋಚಿಸಿದ್ದ ಪೆಟ್ರೋಕೆಮಿಕಲ್ಸ್ ಯೋಚನೆ ಮತ್ತು ಶುದ್ಧಿಕರಣ ಘಟಕ 1980 ರಿಂದ ಮಂಜೂರಾತಿಗಾಗಿ ಕಾಯುತ್ತಿದೆ. MRPL ಏಪ್ರಿಲ್ 1989 ರಿಂದ ಭಾರತ ಸರ್ಕಾರಕ್ಕೆ ಯೋಜನೆ ಸಲ್ಲಿಸಿತು. ಭಾರತ ಸರ್ಕಾರ ಮತ್ತು ಯೋಜನೆಯ ವ್ಯವಸ್ಥಾಪಕರ ನಡುವೆ ಇದ್ದ ಮೆಮೋರ್‍ಯಾಂಡಂ ಆಫ್ ಅಂಡರ್ ಸ್ಟೇಡಿಂಗ್ ಪ್ರಕಾರ ಜುಲೈ 1989ಕ್ಕೇ ಈ ಯೋಜನೆಗೆ ಕ್ಲಿಯರೇನ್ಸ್ ದೊರೆಯಬೇಕಾಗಿತ್ತು.

ಶುದ್ಧೀಕರಣ ಘಟಕದಲ್ಲಿ ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಲು ಕ್ರಮ ಕೈಗೊಂಡಿಸಿದರು ಮತ್ತು ಈ ಯೋಜನೆಯ ಮಂಜೂರು ಮಾಡಿದ 42 ತಿಂಗಳುಗಳಲ್ಲಿ MRPL ಅದನ್ನು ಶುರುಮಾಡಲಿರುವುದರಿಂದ, ಪೆಟ್ರೋಕೆಮಿಕಲ್ಸ್ ಯೋಜನೆ ಮತ್ತು ಶುದ್ಧೀಕರಣ ಘಟಕವನ್ನು ಬೇಗ ಮಂಜೂರು ಮಾಡಬೇಕೆಂದು ಶ್ರೀಮತಿ ಬಸವರಾಜೇಶ್ವರಿ ಯವರು ಒತ್ತಾಯಿಸಿದರು.

1990, 9ನೇ ಲೋಕಸಭಾ ಅಧಿವೇಶನದಲ್ಲಿ ಶ್ರೀಮತಿ ಬಸವರಾಜೇಶ್ವರಿ ಅವರು ಮಂಗಳೂರಿನಲ್ಲಿ ಪೆಟ್ರೋಕೆಮಿಕಲ್ ಯೋಜನೆ ಮತ್ತು ಶುದ್ಧಿಕರಣ ಘಟಕದ ಮಂಜೂರಿಗಾಗಿ ಒತ್ತಾಯಿಸುತ್ತಾ, ಶೀರ್ಘ ಮುಂದೂವರಿಯಲು ಅಗತ್ಯತೆ ಕುರಿತು ಮಾತನಾಡಿದರು.

ಮಂಗಳೂರಿನಲ್ಲಿ ಶುರುಮಾಡಬೇಕೆಂದು ಯೋಚಿಸಿದ್ದ ಪೆಟ್ರೋಕೆಮಿಕಲ್ಸ್ ಯೋಜನೆ ಮತ್ತು ಶುದ್ಧಿಕರಣ ಘಟಕ 1980 ರಿಂದ ಮಂಜೂರಾತಿಗಾಗಿ ಕಾಯುತ್ತಿದೆ. MRPL ಏಪ್ರಿಲ್ 1989 ರಿಂದ ಭಾರತ ಸರ್ಕಾರಕ್ಕೆ ಯೋಜನೆ ಸಲ್ಲಿಸಿತು. ಭಾರತ ಸರ್ಕಾರ ಮತ್ತು ಯೋಜನೆಯ ವ್ಯವಸ್ಥಾಪಕರ ನಡುವೆ ಇದ್ದ ಮೆಮೋರ್‍ಯಾಂಡಂ ಆಫ್ ಅಂಡರ್ ಸ್ಟೇಂಡಿಂಗ್ ಪ್ರಕಾರ ಜುಲೈ 1989ಕ್ಕೆ ಈ ಯೋಜನೆಗೆ ಕ್ಲಿಯರೇನ್ಸ್ ದೊರೆಯಬೇಕಾಗಿತ್ತು.

ಶುದ್ಧೀಕರಣ ಘಟಕದಲ್ಲಿ ಅತ್ಯಧುನಿಕ ತಂತ್ರಜ್ಞಾನವನ್ನು ಬಳಸಲು ಕ್ರಮ ಕೈಗೊಂಡಿಸಿರುವುದರಿಂದ ಮತ್ತು ಈ ಯೋಜನೆಯ ಮಂಜೂರು ಮಾಡಿದ 42 ತಿಂಗಳುಗಳಲ್ಲಿ MRPL ಅದನ್ನು ಶುರುಮಾಡಲಿರುವುದರಿಂದ, ಪೆಟ್ರೋಕೆಮಿಕಲ್ಸ್ ಯೋಜನೆ ಮತ್ತು ಶುದ್ಧೀಕರಣ ಘಟಕವನ್ನು ಬೇಗ ಮಂಜೂರು ಮಾಡಬೇಕೆಂದು ಶ್ರೀಮತಿ ಬಸವರಾಜೇಶ್ವರಿಯವರು ಒತ್ತಾಯಿಸಿದರು.

# 1986 5ನೇ ಅಧೀವೇಶನ 8ನೇ ಲೋಕಸಭಾ

ಬೀಡಿ ಕಾರ್ಮಿಕರಿಗೆ ಸಿಗಬೇಕಾದ ಸೌಲಭ್ಯ ಮತ್ತು ಅವರ ಜೀವನ ಕ್ರಮ ಸುಧಾರಣೆಗೆ ಸರ್ಕಾರ ಅನುಸರಿಸಬೇಕಾದ ಹೊಸ ನೀತಿ ಕುರಿತಂತೆ 1986 5ನೇ ಅಧಿವೇಶನದಲ್ಲಿ ಶ್ರೀಮತಿ ಬಸವರಾಜೇಶ್ವರಿಯವರು ತಮ್ಮ ಅನುಭವವನ್ನು ಈ ರೀತಿ ಮಂಡಿಸುತ್ತಾರೆ.

ಸೂರ್ಯೋದಯದಿಂದ ಸೂರ್ಯಸ್ತದವರೆಗೆ ಹೆಂಗಸರು ಮಕ್ಕಳು ಬೀಡಿ ಕಾರ್ಖಾನೆಯಲ್ಲಿ ಕೆಲಸ ಮಾಡುವವರಿದ್ದು ತಂಬಾಕು ಅವರ ಮೇಲೆ ದುಷ್ಪರಿಣಾಮ ಬೀರಿ ಅವರ ಆರೋಗ್ಯ ದಿನೇ ದಿನೇ ಕ್ಷೀಣಿಸುತ್ತಿದ್ದು ಸರಿಯಾದ ವೈದ್ಯಕೀಯ ಸೌಲಭ್ಯಕೋರತೆಯಿಂದ ರಾಷ್ಟ್ರದಾದ್ಯಂತ ಅಸಂಖ್ಯಾತ ' ಬೀಡಿಕಾರ್ಮಿಕರು' ಬೀದಿಪಾಲಾಗಿದ್ದಾರೆ. ಕೇಂದ್ರ ಸರ್ಕಾರ ಎಲ್ಲಾ ರಾಜ್ಯಗಳಿಗೂ ಅನ್ವಯವಾಗುವಂತೆ ಮತ್ತು ಮಕ್ಕಳು ಯಾವುದೇ ಕಾರಣಕ್ಕೆ ಬೀಡಿಕಟ್ಟುವ ಕೆಲಸಕ್ಕೆ ನೇಮಕ ಮಾಡಿಕೊಳ್ಳದಂತೆ ಕಟ್ಟಪ್ಪಣೆ ವಿಧಿಸಿ ಹೊಸನೀತಿ ರೂಪಿಸಿ ಬೀಡಿಕಾರ್ಮಿಕರ ....... ಪರಿಹಾರಕ್ಕೆ ಸ್ಪದಿಸಬೇಕು.

ತಂಬಾಕು ಬೆಳೆ ಇದ್ದಕಡೆ ವಿಷಪೂರ್ರಿತ ನಾಗರಹಾವು ಸಹ ಹರಿದಾಡಿದರೆ ಅದು ಸಾಯುತ್ತದೆ ಅಂಥಹ ತಂಬಾಕು ಜೊತೆಗೆ ಜೀವವನ್ನೇ ಪಣಕ್ಕಿಟ್ಟು ದುಡಿಯುವ ಬೀಡಿಕಾರ್ಮಿಕರ ಆರೋಗ್ಯ ಸುಧಾರಣೆಗೆ ಕ್ರಮ ಜರುಗಿಸಬೇಕು.

ಜಾಗತಿಕ ಮದ್ಯದಲ್ಲಿ "ಸಿಗರೇಟು ಬೀಡಿ ಸೇದುವುದು ಆರೋಗ್ಯಕ್ಕೆ ಹಾನಿಕರ" ಎಂತಿದ್ದರೂ ಜನಸಂಖ್ಯೆಯ ಬಹುಪಾಲು ಜನ ಧೂಮಪಾನಕ್ಕೆ ಮೊರೆ ಹೋಗಿರುವುದು- ಬೀಡಿ ಸಿಗರೇಟು ಉದ್ಯಮ ಬೃಹದಾಕಾರವಾಗಿ ಬೆಳೆಯಲು ಪರೋಕ್ಷವಾಗಿ ನೆರವಾಗಿದೆ. ಇದು ಅತ್ಯಂತ ದುರದೃಷ್ಟಕರ ಸಂಗತಿ ಉದ್ಯಮದಲಾಭದಲ್ಲಿ ಕಾರ್ಮಿಕರ ಪಾಲೂ ಸಾಕಷ್ಟಿದ್ದರು ಸರ್ಕಾರದ ನೀತಿವೈಫಲ್ಯದ ಕಾರಣ ಸೌಲಭ್ಯ, ಆರೋಗ್ಯ ತಪಾಸಣೆ ಕುರಿತಂತೆ ಬೀಡಿಕಾರ್ಮಿಕರು ಇನ್ನೂ ಮುಂದಾದರೂ ವಂಚನೆಗೆ ಬಲಿಯಾಗುವುದು ಬೇಡ ಸಮಗ್ರ ನೀತಿ ಜಾರಿಯಾಗಲಿ.

# 1986 5ನೇ ಅಧೀವೇಶನ 8ನೇ ಲೋಕಸಭೆಯಲ್ಲಿ ಸಂಸದೆಯು ಬಡವರಪರ ನೀಡಿದ ಅಮೂಲ್ಯ ಸಲಹೆಗಳು

ಬೀಡಿ ಕಾರ್ಮಿಕರಿಗೆ ಸಿಗಬೇಕಾದ ಸೌಲಭ್ಯ ಮತ್ತು ಅವರ ಜೀವನ ಕ್ರಮ ಸುಧಾರಣೆಗೆ ಸರ್ಕಾರ ಅನುಸರಿಸಬೇಕಾದ ಹೊಸ ನೀತಿ ಕುರಿತಂತೆ 1986 5ನೇ ಅಧಿವೇಶನದಲ್ಲಿ ಶ್ರೀಮತಿ ಬಸವರಾಜೇಶ್ವರಿಯವರು ತಮ್ಮ ಅನುಭವವನ್ನು ಈ ರೀತಿ ಮಂಡಿಸುತ್ತಾರೆ.

ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಹೆಂಗಸರು ಮಕ್ಕಳು ಬೀಡಿ ಕಾರ್ಖಾನೆಯಲ್ಲಿ ಕೆಲಸ ಮಾಡುವವರಿದ್ದು ತಂಬಾಕು ಅವರ ಮೇಲೆ ದುಷ್ಪಪರಿಣಾಮ ಬೀರಿ ಅವರ ಆರೋಗ್ಯ ದಿನೇ ದಿನೇ ಕ್ಷೀಣಿಸುತ್ತಿದ್ದು ಸರಿಯಾದ ವೈದ್ಯಕೀಯ ಸೌಲಭ್ಯಕೊರತೆಯಿಂದ ರಾಷ್ಟ್ರದಾದ್ಯಂತ ಅಸಂಖ್ಯಾತ 'ಬಿಡಿಕಾರ್ಮಿಕರು' ಬೀದಿಪಾಲಾಗಿದ್ದಾರೆ. ಕೇಂದ್ರ ಸರ್ಕಾರ ಎಲ್ಲಾ ರಾಜ್ಯಗಳಿಗೂ ಅನ್ವಯವಾಗುವಂತೆ ಮತ್ತು ಮಕ್ಕಳು ಯಾವುದೇ ಕಾರಣಕ್ಕೆ ಬೀಡಿಕಟ್ಟುವ ಕೆಲಸಕ್ಕೆ ನೇಮಕ ಮಾಡಿಕೊಳ್ಳದಂತೆ ಕಟ್ಟುಪ್ಪಾಡ ವಿಧಿಸಿ ಹೊಸನೀತಿ ರೂಪಿಸಿ ಬೀಡಿಕಾರ್ಮಿಕರ ಕಷ್ಟ ಪರಿಹಾರಕ್ಕೆ ಸ್ಪಂದಿಸಬೇಕು.

ತಂಬಾಕು ಬೆಳೆ ಇದ್ದಕಡೆ ವಿಷಪೂರಿತ ನಾಗರಹಾವು ಸಹ ಹರಿದಾಡಿದರೆ ಅದು ಸಾಯುತ್ತದೆ. ಅಂಥಹ ತಂಬಾಕು ಜೊತೆಗೆ ಜೀವವನ್ನೇ ಪಣಕಿಟ್ಟು ದುಡಿಯುವ ಬೀಡಿಕಾರ್ಮಿಕರ ಆರೋಗ್ಯ ಸುಧಾರಣೆಗೆ ಕ್ರಮ ಜರುಗಿಸಬೇಕು.

ಜಾಗತಿಕ ಮದ್ಯದಲ್ಲಿ "ಸಿಗರೇಟು ಬೀಡಿ ಸೇದುವುದು ಆರೋಗ್ಯಕ್ಕೆ ಹಾನಿಕರ" ಎಂತಿದ್ದರೂ ಜನಸಂಖ್ಯೆಯ ಬಹುಪಾಲು ಜನ ಧೂಮಪಾನ ಮಡುತ್ತಿರುವುದು ಬೀಡಿ ಸಿಗರೇಟು ಉದ್ಯಮ ಬೃಹಧಾಕಾರವಾಗಿ ಬೆಳೆಯಲು ಪರೋಕ್ಷವಾಗಿ ನೆರವಾಗಿದೆ. ಇದು ಅತ್ಯಂತ ದುರದೃಷ್ಟಕರ ಸಂಗತಿ ಉದ್ಯಮದಲಾಭದಲ್ಲಿ ಕಾರ್ಮಿಕರ ಪಾಲೂ ಸಾಕಷ್ಟಿದ್ದರು ಸರ್ಕಾರದ ನಿರಿವೈಪಲ್ಯದ ಕಾರಣ ಸೌಲಭ್ಯ, ಆರೋಗ್ಯ ತಪಾಸಣೆ ಕುರಿತಮತೆ ಬೀಡಿಕಾರ್ಮಿಕರು ಇನ್ನೂ ಮುಂದಾದರೂ ವಂಚನೆಗೆ ಬಲಿಯಾಗುವುದು ಬೇಡ ಸಮಗ್ರ ನೀತಿ ಜಾರಿಯಾಗಲಿ.

# 1986-5ನೇ ಅಧಿವೇಶನ-8ನೇ ಲೋಕಸಭೆಯಲ್ಲಿ ಸಂಸದೆಯ ಸವಾಲುಗಳು

**ಶ್ರೀಮತಿ ಬಸವರಾಜೇಶ್ವರಿ** (ಬಳ್ಳಾರಿ): ಮಾನ್ಯ ಉಪಸಭಾಧ್ಯಾಕ್ಷರೇ, ಗೌರವಾನ್ವಿತ ಮಾನ್ಯರೇ, ಬೀಡಿ ಕಾರ್ಮಿಕರಿಗೆ ಹೆಚ್ಚಿನ ಸವಲತ್ತು ಕಲ್ಪಿಸುವಲ್ಲಿ ತಿದ್ದುಪಡಿ ಮಸೂದೆ ಕುರಿತು ನಾವಿಂದು ಮಹತ್ವದ ಚರ್ಚೆ ನಡೆಸುತ್ತಿದ್ದೇವೆ. ಈ ನಿಟ್ಟಿನಲ್ಲಿ ನಾನು ಕೆಲವು ಸಲಹೆಗಳನ್ನು ನೀಡಲು ಇಚ್ಛಿಸುತ್ತೇನೆ. ಬೀಡಿ ಉದ್ಯಮವನ್ನು ಇತ್ತೀಚೆಗೆ ಮಹಿಳೆಯರು ಮತ್ತು ಮಕ್ಕಳು ಪ್ರವೇಶಿಸುತ್ತಿದ್ದಾರೆ. ಸಿಗರೇಟು, ಬೀಡಿ ಇತ್ಯಾದಿಗಳನ್ನು ಸೇದುವವರ ಸಂಖ್ಯೆ ದೇಶದಲ್ಲಿ ಶರವೇಗದಲ್ಲಿ ವೃದ್ಧಿಸುತ್ತಿದೆ. ಈ ಹಿಂದೆ ಧೂಮಪಾನಿಗಳ ಸಂಖ್ಯೆ ತೀರ ಕಡಿಮೆ ಇತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಂಖ್ಯೆ ಬೃಹತಾಗಿ ಬೆಳೆದ ನಿಂತಿದೆ. ಮಕ್ಕಳು ಹರೆಯದವರು ಕೂಡ ಧೂಮಪಾನದ ಚಟಕ್ಕೆ ಬಲಿಯಾಗುತ್ತಿದ್ದಾರೆ. ಧೂಮಪಾನ ಆರೋಗ್ಯಕ್ಕೆ ಹಾನೀಕರ, ಅನ್ನುವುದು ಶಾಸನ ವಿಧಿತ ಎಚ್ಚರಿಕೆ. ಈ ಎಚ್ಚರಿಕೆಯ ಮಾತಿಗೆ ಸಾಕಷ್ಟು ಪ್ರಚಾರ ಕೂಡ ನೀಡಲಾಗಿದೆ. ಧೂಮಪಾನದ ಅಪಾಯ ಕುರಿತು ಪತ್ರಿಕೆಗಳಲ್ಲಿ ಲೇಖನ ಪ್ರಕಟವಾಗುತ್ತಿದೆ. ಸಂಶೂಧನೆಗಳು ಇತ್ಯಾದಿ ನಡೆಯುತ್ತಿದೆ. ಈ ನಿಟ್ಟಿನಲ್ಲಿ ಅನೇಕ ಖ್ಯಾತ ವೈದ್ಯರುಗಳು ತಮ್ಮ ತಜ್ಞ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಈ ಎಲ್ಲಾ ಎಚ್ಚರಿಕೆ ಹಾಗೂ ಅಪಾಯದ ಕರೆಗಂಟೆ ಬಾರಿಸುತ್ತಿರುವ ವರತಾಗಿಯೂ ದೇಶದಲ್ಲಿ ಧೂಮಪಾನಿಗಳ ಸಂಖ್ಯೆ ಏರುತ್ತಲೇ ಇದೆ. ವಿದೇಶಗಳಲ್ಲಿಯು ಧೂಮಪಾನ ಹಾವಳಿ ಹೆಚ್ಚಾಗಿದೆ. ಕೆಲವು ರಾಷ್ಟಗಳಲ್ಲಿ ಧೂಮಪಾನ ನಿಗ್ರಹಕ್ಕೆ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಲಾಗಿದೆ. ಅಲ್ಲಿ ಧೂಮಪಾನ ಮೂರಣಾಂತಿಕ ಕ್ಯಾನ್ಸರ್‌ಗೆ ದಾರಿ ಮಾಡಿಕೊಡುತ್ತದೆ ಅನ್ನುವುದನ್ನು ಅನೇಕ ಅಧ್ಯಯನಗಳು ತೋರಿಸಿಕೊಟ್ಟಿವೆ. ದೇಶದಲ್ಲಿನ ಧೂಮಪಾನ ನಿಗ್ರಹಕ್ಕೆ ವಿಶ್ವ ಆರೋಗ್ಯ ಸಂಸ್ಥೆ ಉತ್ತಮ ಪ್ರಯತ್ನ ನಡೆಸಿದೆ. ಆದರೂ ಕಾಳ್ಗಿಚ್ಚಿನಂತೆ ಧೂಮಪಾನ ರಾಷ್ಟವನ್ನು ಅವರಿಸುತ್ತಲೇ ಇದೆ.

ತಂಬಾಕಿನ ಅಪಾಯ ಕುರಿತು ನಾನು ಇಲ್ಲೊಂದು ನಿದರ್ಶನ ನೀಡಲು ಇಚ್ಛಿಸುತ್ತೇನೆ. ತಂಬಾಕು ಬೆಳೆಯುವ ಹೊಲಗಳ ಹತ್ತಿರ ವಿಷಪೂರಿತ ನಾಗರಹಾವುಗಳು ಕೂಡ ಸುಳಿಯುವುದಿಲ್ಲ. ಒಂದು ವೇಳೆ ಅದು ಅಪ್ಪಿತಪ್ಪಿ ತಂಬಾಕು ಬೆಳೆಯ ಜಮೀನು ಪ್ರವೇಶಿಸಿದರೆ ಅದು ಬದುಕಿ ಉಳಿಯಲಾರದು. ಅಂದರೆ ತಂಬಾಕಿನ ಅಪಾಯ ಏಂತಹದ್ದು ಅನ್ನುವುದನ್ನು ನಾವಿಲ್ಲಿ ಅರ್ಥಮಾಡಿಕೊಳ್ಳಬಹುದಾಗಿದೆ. ಆದ್ದರಿಂದ ಜನರ ಆರೋಗ್ಯ ರಕ್ಷಿಸುವ ನಿಜವಾದ ಕಳಕಳಿ ಸರ್ಕಾರಕ್ಕೆ ಇದ್ದರೆ ಅದು ಮೊದಲು ಧೂಮಪಾನ ನಿಗ್ರಹಕ್ಕೆ ಸೂಕ್ತ ಕ್ರಮ ಕೈಗೊಳ್ಳಬೇಕಿದೆ.

ದೇಶದಲ್ಲಿ ತಂಬಾಕನ್ನು ಒಂದು ವಾಣಿಜ್ಯ ಬೆಳೆಯನ್ನಾಗಿ ಬೆಳೆಯಲಾಗುತ್ತಿದೆ. ಆಂಧ್ರದಲ್ಲಿ ಇದರ ಉತ್ಪನ್ನ ಬೃಹತ್ ಪ್ರಮಾಣದ್ದಾಗಿದೆ. ಗುಂಟೂರಿನಲ್ಲಿ ಬೆಳೆಯಲಾಗುತ್ತಿರುವ ತಂಬಾಕು ಗುಣಮಟ್ಟದಲ್ಲಿ ವರ್ಜೀನೀಯ ತಂಬಾಕಿಗಿಂತಲೂ ಶ್ರೇಷ್ಠ. ಬೆಳೆಗಾರರನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ

ತಂಬಾಕು ಮಂಡಳಿ ಬೆಲೆ ನೀಡಿ ತಂಬಾಕನ್ನು ಕರೀದಿಸುತ್ತಿದೆ. ತಂಬಾಕು ದೇಶಕ್ಕೆ ವಿದೇಶಿ ವಿನಿಮಯ ಕೂಡ ತಂದು ಕೊಡುತ್ತಿದೆ. ತಂಬಾಕನ್ನು ರಫ್ತು ಮಾಡುವ ಮೂಲಕ ರೈತರು ಅದರಿಂದ ಉತ್ತಮ ಪ್ರತಿಫಲ ಪಡೆಯುತ್ತಿದ್ದಾರೆ.

ತಂಬಾಕಿನಿಂದ ಕೆಲವರು ಒಳ್ಳೆಯ ಲಾಭ ಗಿಟ್ಟಿಸುತ್ತಿದ್ದಾರೆ. ಆದರೆ ತಂಬಾಕು ಉದ್ಯಮದಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿ ಮಾತ್ರ ಚಿಂತಾಜನಕ. ಕೆಲಸಗಾರರಿಗೆ ಅಗತ್ಯ ಸೌಲಭ್ಯನೀಡುವಲ್ಲಿ ಬೀಡಿ ಮತ್ತು ಸಿಗರೇಟು ಕಾರ್ಖಾನೆಗಳ ಮಾಲೀಕರು ವಂಚನೆ ವಿಧಿಸುತ್ತಿದ್ದಾರೆ. ತಂಬಾಕು ಅದರಲ್ಲೂ ವಿಶೇಷವಾಗಿ ಬೀಡಿ ಕಾರ್ಖನೆಗಳಲ್ಲಿ ಕೆಲಸ ಮಾಡುವವರ ಸ್ಥಿತಿ ಹೇಳತೀರದು. ಅವರು ಬೆಳಗಿನ ಸೂರ್ಯೋದಯದಿಂದ ರಾತ್ರಿಯವರೆಗೆ ಕಾರ್ಖಾನೆಗಳಲ್ಲಿ ಬೇಯುತ್ತಿದ್ದಾರೆ. ಇದರಲ್ಲಿ ಬಹು ಸಂಖ್ಯಾತ ಕೆಲಸಗಾರರೆಂದರೆ ಮಕ್ಕಳು ಮತ್ತು ಮಹಿಳೆಯರಾಗಿದ್ದಾರೆ. ಇವರು ಪಡೆಯುವ ಸಂಬಳ ಕೂಡ ತೀರ ಕನಿಷ್ಠ ಮಟ್ಟದ್ದಾಗಿದೆ. ಅದರಲ್ಲೂ ಬಾಲಕಾರ್ಮಿಕರು ಪಡೆಯುವ ಸಂಬಳ ಇನ್ನೂ ಕನಿಷ್ಠ ಮಟ್ಟದ್ದು. ಕೆಲವು ಕಾರ್ಖಾನೆಗಳಲ್ಲಿ ವೇತನಕ್ಕೆ ಸಂಬಂಧಿಸಿದಂತೆ ತೋರಿಕೆಯ ವಿವರಗಳು ಒಂದು ಇದ್ದರೆ  ನಿಜವಾದ ವಿವರಗಳು ಮತ್ತೊಂದು ರೀತಿಯಲ್ಲಿರುತ್ತವೆ. ಇಂತಹ ವ್ಯವಸ್ಥೆಯನ್ನು ಖಂಡಿಸುವ ಮತ್ತು ದಂಡಿಸುವ ಅಗತ್ಯ ಇದೆ. ಇಂತಹ ಕೈಗಾರಿಕೆಗಳಲ್ಲಿ ಕೆಲಸ ಮಾಡುವ ಬಾಲಕರು ನಿಧಾನವಾಗಿ ಧೂಮಪಾನದ ಚಟಕ್ಕೆ ದಾಸರಾಗುತ್ತಾರೆ. ಬೀಡಿ ಸಿಗರೇಟು ಕಾರ್ಖನೆಗಳಲ್ಲಿ ಬಾಲಕಾರ್ಮಿಕರು ಇಲ್ಲದಂತೆ ನೋಡಿಕೊಳ್ಳುವ ನಿಟ್ಟಿನಲ್ಲಿ ಸರ್ಕಾರ ಕಟ್ಟು ನಿಟ್ಟಿನ ಶಾಸನ ಜಾರಿಗೊಳಿಸ ಬೇಕಿದೆ. ಮಹಿಳಾ ಕಾರ್ಮಿಕರನ್ನು ಇಂತಹ ಉದ್ಯಮಗಳಿಂದ ಹೊರ ಕರೆತಂದು ಅವರಿಗೆ ಪರ್ಯಾಯ ಕೆಲಸದ ವ್ಯವಸ್ಥೆ ಕಲ್ಪಿಸ ಬೇಕಿದೆ.

ತಂಬಾಕು ಉತ್ಪನ್ನ ಕೈಗಾರಿಕೆಗಳಲ್ಲಿ ಕೆಲಸದ ವಾತಾವರಣ ಕೆಟ್ಟ ರೀತಿಯದ್ದಾಗಿರುತ್ತದೆ. ಕೆಲಸಗಾರರಿಗೆ ವೈದ್ಯಕೀಯ ಪರೀಕ್ಷೆ ಸವಲತ್ತು ಇರುವುದಿಲ್ಲ, ಕೆಲಸದ ಒತ್ತಡ ಮಿತಿಮೀರಿದ್ದಾಗಿರುತ್ತದೆ. ಮತ್ತು ಒಂದು ಬಾರಿ ರೋಗ ಪೀಡಿತನಾದ ಕಾರ್ಮಿಕನಿಗೆ ಸೂಕ್ತ ಪರಿಹಾರ ಲಭಿಸುವುದಿಲ್ಲ. ಇಂತಹ ಉದ್ಧಟ ಕಾರ್ಮಿಕ ವಿರೋಧಿ ಮಾಲೀಕರ ವಿರುದ್ಧ ಕಠಿಣ ಕ್ರಮಕೈಗೊಳ್ಳ ಬೇಕು.

ತಂಬಾಕು ಉದ್ಯಮದಲ್ಲಿ ದುಡಿಯುವ ಕೆಲಸಗಾರ ಒಂದು ಬಾರಿ ರೋಗಪೀಡಿತನಾದರೆ ಆತನ ದುಡಿಮೆಯ ಜೀವನ ಕೊನೆಗೊಂಡಂತೆ. ಮುಂದೆ ಆತನಿಗೆ ಬೇರಲ್ಲೂ ಕೆಲಸ ಮಾಡಲು ಸಾಧ್ಯವಾಗದು. ಅಂತಹ ವ್ಯಕ್ತಿಗಳಿಗೆ ಪುನರ್ ವಸತಿ ಕಲ್ಪಿಸುವ ಅಗತ್ಯ ಜರೂರಾಗಿರುತ್ತದೆ. ಈ ನಿಟ್ಟಿನಲ್ಲಿ ಅಂತಹ ವ್ಯಕಿಗಳಿಗೆ ಸಹಕಾರಿಯಾಗ ಬಲ್ಲ ತಿದ್ದುಪಡಿಯನ್ನು ಸರ್ಕಾರ ತರಲೇ ಬೇಕಿದೆ. ಕರ್ನಾಟಕ ಮತ್ತು ಇತರ ರಾಜ್ಯಗಳ ಬೀಡಿ ಉದ್ಯಮದಲ್ಲಿ ಸಹಸ್ರಾರು ಜನ ದುಡಿಯುತ್ತಿದ್ದಾರೆ. ಅಂತಹವರ ಹಿತ ಕಾಯುವುದು ಸಂಬಂಧ ಪಟ್ಟ ರಾಜ್ಯಗಳ ಜವಬ್ದಾರಿಯಾಗಿದೆ. ಕೆಲವು ರಾಜ್ಯಗಳು ತಕ್ಕ ಮಟ್ಟಿಗೆ ಅನುಕೂಲಗಳನ್ನು ಕಲ್ಪಿಸಿದೆ. ಆದರೆ ಇನ್ನೂ ಹಲವು ರಾಜ್ಯಗಳಲ್ಲಿ ಬೀಡಿ ಕಾರ್ಮಿಕರ

ಸ್ಥಿತಿ ಗಂಭೀರ. ಆದ್ದರಿಂದ ಕೇಂದ್ರ ಸರ್ಕಾರಕ್ಕೆ ನಾನು ಈ ಸಂದರ್ಭದಲ್ಲಿ ಕೇಳಿಕೊಳ್ಳುವುದೇನೆಂದರೆ ಏಕರೂಪದ ಕಾಯ್ದೆಯೊಂದನ್ನು ರೂಪಿಸಿ ಬಡ ಕೆಲಸಗಾರರ ಸಂಕಷ್ಟ ನೀಗಿಸಿ.

ಕೆಲವು ಕಾರ್ಖಾನೆಗಳಲ್ಲಿ ಬೆಳಕು, ಗಾಳಿ, ಜಾಗದ ವ್ಯವಸ್ಥೆ ತೀವ್ರವಾಗಿದೆ. ಅಂತಹ ಕಡೆಗಳಲ್ಲಿ ಬೆಳಗಿನಿಂದ ರಾತ್ರಿಯವರೆಗೆ ದುಡಿಯುದೆಂದರೆ ಕಾಮಿಕರ ಪಾಲಿಗೆ ನರಕ. ಆದ್ದರಿಂದ ಏಕರೂಪ ಕಾಯ್ದೆ ಮಂಡಿಸಬೇಕೆಂದು ನಾನು ಮಾನ್ಯ ಸಚಿವರಲ್ಲಿ ಮತ್ತೊಮ್ಮೆ ವಿನಂತಿಸಿಕೊಳ್ಳುತ್ತೇನೆ. ಈ ಸಂದರ್ಭದಲ್ಲಿ ಮಾತನಾಡಲು ಅವಕಾಶ ಕೊಟ್ಟ ತಮಗೆ ವಂದಿಸಿ ಮಾತು ಮುಗಿಸುತ್ತೇನೆ, ನಮಸ್ಕಾರ.

# 1987 8ನೇ ಅಧಿವೇಶನ 8ನೇ ಲೋಕಸಭೆಯಲ್ಲಿ

ಶ್ರೀಮತಿ ಬಸವರಾಜೇಶ್ವರಿಯವರು ಸಾಮಾನ್ಯ ಜನರು ಪ್ರವಾಸ ಮಾಡುವ ಭಾರತೀಯ ರೈಲುಕುರಿತಂತೆ ತಮ್ಮ ಅಮೂಲ್ಯ ಸಲಹೆಗಳ ಜೊತೆ ಜೊತೆಗೆ ಅನುಭವವನ್ನು ಲೋಕಸಭೆಯಲ್ಲಿ ಸಂಸದರು ಮೆಚ್ಚುವಂತೆ ಹಂಚಿಕೊಂಡಿದ್ದಾರೆ ಅದನ್ನೀಗ ನೋಡವಾ,

ವಿದ್ಯಾರ್ಥಿಗಳಿಗೆ ಘನಸರ್ಕಾರ ಟಕೇಟು ದರಗಳಲ್ಲಿ ನೀಡುತ್ತಿರುವ ಸೌಲಭ್ಯ ವಂಚಿಸುತ್ತಿರುವ ಅಧಿಕಾರಿಗಳ ವಿರುದ್ಧ ಕ್ರಮಜರುಗಿಸಬೇಕು ರೇಲ್ವೆ ಆಸ್ತಿ ರಕ್ಷಣೆಗೆ ಇರುವ ರೇಲ್ವೆ ಪ್ರೋಟೆಕ್ಷನ್ ಫ್ರೋರ್ಸ್‌ಗೆ ಅತ್ಯಾಧುನಿಕ ಎಲೆಕ್ಟ್ರಾನಿಕ್ ಸಾಧನಗಳ ನೀಡಿ, ಬಾಂಬುಸ್ಫೋಟ, ಮತ್ತು ರೇಲ್ವೆಹಳಿ, ಅದಕ್ಕೆ ಸಂಭಂದಿಸಿದಂತೆ ನೆಡೆಯುವ ದುಷ್ಕತ್ಯ ತಡೆಯಲು ಪ್ರೇರೇಪಿಸಬೇಕು.

ಎರಡನೇ ದರ್ಜೆ ರಿಜರ್ವೆಷನ್‌ಗಳಲ್ಲಿ ಕಂಟಕ್ಟರ್ಸ್‌ಗಳು ನಡೆಸುವ ಅಕ್ರಮ–ವ್ಯವಹಾರ ತಡೆಗಟ್ಟಿ ಮೂಲದಲ್ಲಿ ಆಸನಗಳನ್ನು ಗೊತ್ತುಪಡಿಸಿದವರಿಗೆ ಪ್ರವಾಸದಲ್ಲಿ ಅಡೆತಡೆ ಉಂಟಾಗದಂತೆ ಕ್ರಮ ಜರುಗಿಸುವುದು ತುರ್ತಿನ ಅಗತ್ಯಗಳಲ್ಲೊಂದು.

ರೇಲ್ವೆಹಳಿಗಳ ಎರಡೂ ಮಗ್ಗುಲುಗಳಲ್ಲಿ ಇರುವ ಭೂಮಿ ಕುರಿತಂತೆ ಅಲ್ಲಲ್ಲಿ ರೇಲ್ವೆಇಲಾಖೆ ಅದನ್ನು ಲೀಜ್‌ಗೆಪಡೆದಿದ್ದಲ್ಲದೇ ಇಡೀ ಭೂಮಿಯನ್ನು ವಶಪಡಿಸಿಕೊಂಡು ಸೂಕ್ತ ಪರಿಹಾರ ಕಲ್ಪಿಸುವ ಸ್ಪಷ್ಟವಾದ ನೀತಿ ರೂಪುಗೊಳ್ಳಬೇಕು ಮಾಡೆಲ್ ಸೇಷನ್‌ಗಳಂತಾ ಕೆಲವೊಂದನ್ನು ಗುರುತಿಸಿ ಅಲ್ಲಿ ಎಲ್ಲಾ ರೀತಿಯ ಪ್ರವಾಸಿ ಸೌಲಭ್ಯಗಳನ್ನು ಒದಗಿಸಿ ರೇಲ್ವೆ ಪ್ರವಾಸದ ಮುದವನ್ನು ಉಣಬಡಿಸಬೇಕು ಹೆಚ್ಚಾಗಿ ಹೆಂಗಸರು–ಮಕ್ಕಳು –ಇಡೀ ಕುಟುಂಬದವರು ಪ್ರಯಾಣಿಸುವಾಗ ಭಾರತೀಯ ರೈಲು ರಾಷ್ಟ್ರದ ಹೆಮ್ಮೆಯ ಪ್ರತೀತ ನಮ್ಮ ಕರ್ನಾಟಕದಲ್ಲಿ ಸಂಚರಿಸುತ್ತಿರುವ ರೈಲಿಗೆ "ಕೀತ್ತೂರು ರಾಣಿ ಚೆನ್ನಮ್ಮ" "ಟಿಪ್ಪು ಎಕ್ಸ್‌ಪ್ರೆಸ್" " ಹಂಪಿಎಕ್ಸ್‌ಪ್ರೆಸ್" ಎಂದು ನಾಮಕರಣಮಾಡಿ ರಾಜ್ಯದ ಜನತೆಯ ಅಭಿಮಾನಕ್ಕೆ ಪಾತ್ರರಾದ ರೇಲ್ವೆಸಚಿವರನ್ನು– ಪ್ರಧಾನಮಂತ್ರಿಗಳನ್ನು ಈ ಸಂದರ್ಭದಲ್ಲಿ ಅಭಿನಂದಿಸಬಯಸುತ್ತೇನೆ.

# 1987 9ನೇ ಅಧಿವೇಶನ 8ನೇ ಲೋಕಸಭಾ ಕುರಿತಂತೆ

ರಾಷ್ಟ್ರೀಯ ವಸತಿ ನಿಲಯ ಮಸೂದೆ ಅನುಮೋದಿಸಿ ಮಾತನಾಡಿದ ಶ್ರೀಮತಿ ಬಸವರಾಜೇಶ್ವರಿಯವರು ಇಂದಿರಾಗಾಂಧಿಯವರ ಕನಸು ನನಸಾಗುತ್ತಿದೆ ಎಂದು ಹೇಳುತ್ತ, ಮನೆಕಟ್ಟಲು ಅನುಕೂಲ ಕಲ್ಪಿಸುವ ದೃಷ್ಟಿಯಿಂದ ಹೊಸ ಬ್ಯಾಂಕ್‌ನ ಆವಿಸ್ಕಾರ ಬಡವರಿಗೆ, ವಸತಿಹೆಸರಿಗೆ, ಆಶಾದಾಯಕವಾದುದು ಎಲ್ಲಾ ಕ್ಷೇತ್ರಗಳಲ್ಲಿಯೂ ಅದರದೇ ಬ್ಯಾಂಕ್‌ಗಳು ಇರುವಾಗ– ಮನೆಕಟ್ಟುವ ಸೂರುಕಲ್ಪಿಸುವ ದಿಸೆಯಲ್ಲಿ ಸರ್ಕಾರ ನೀತಿ ರೂಪಿಸುತ್ತಿರುವುದು ಸ್ವಾಗತಾರ್ಹ ಇದುವರೆಗೆ ಮನೆಕಟ್ಟಿದವ ಮೂರ್ಖ ಅದರಲ್ಲಿ ವಾಸಿಸುವ ಜಾಣಎಂಬ ಗಾದೆ ಜಾಲ್ತಿಯಲ್ಲಿದ್ದು ಅದು ತಿರುವು ಮುರುವಾಗುವ ಕಾಲ ದೂರ ಇಲ್ಲ. ಮಾತೆಂದ್ರೆ ಅನುತ್ಪಾರಕ್ಷೇತ್ರ ಎಂದು ಪರಿಗಣಿಸಿದೆ ಮನೆಕನ್ನಡ ವರ್ತಮಾನದಲ್ಲಿ ಅರ್ಥವ್ಯಾಪ್ತಿಯನ್ನು ಬೇರೆಯದಾಗಿ ಪಡೆದು ಸರ್ಕಾರ ಸವಲತ್ತುಗಳ ಮೂಲಕ ಎಲ್ಲರೂ ಸ್ವಂತ ಸೂರಿನಡಿ ವಾಸಿಸುವ ದಿನಗಳು ದೂರ ಇಲ್ಲ ಎನ್ನುತ್ತಾರೆ ಆಹಾರ ಮತ್ತು ವಸತಿ ಮೂಲಭೂತ ಅಗತ್ಯಗಳಲ್ಲಿ ಪ್ರಮುಖವಾದವುಗಳು ಆಹಾರ ಉತ್ಪಾದಿಸುವ ರೈತರಿಗೆ ಅಭಿನಂದನೆ ತಿಳಿಸುವ ಎಲ್ಲರಿಗೂ ವಸತಿಕಲ್ಪಿಸಲಿರುವ ನೂತನ ಪ್ರ. ಮಂತ್ರಿ ರಾಜೀವ್‌ಗಾಂಧಿಯವರ ಕನಸು ನನಸಾಗಲೆಂದು ಹಾರೈಸುತ್ತಾರೆ.

ಮುಂದುವರೆದು ಕುಡಿಯುವ ನೀರನ್ನು ಒದಗಿಸುವದಿಕ್ಕಿನಲ್ಲಿ ಶೇಕಡಾ 90 ರಷ್ಟು ಪ್ರಗತಿ ಸಾಧಿಸಿದ್ದು ಹಳ್ಳಿಗಳಲ್ಲಿ ಸ್ವಚ್ಚ ಕುಡಿಯುವ ನೀರು ದೊರಕುತ್ತಿರುವುದು ಸಹ ಇದಕ್ಕೆ ನಿದರ್ಶನ ಎಂದು ಹೇಳುತ್ತಾರೆ.

ಬಡವರ ಗೃಹ ನಿರ್ಮಾಣ ದೃಷ್ಟಿಯಿಂದ ಗ್ರಾಮೀಣ ಪ್ರದೇಶದ ಬಡವರು ನಗರ ಪ್ರದೇಶದ ಬಡವರಿಗಿಂತ ಅತ್ಯಂತ ಹಿಂದುಳಿದಿದ್ದು ಗುಡಿಸಲಲ್ಲಿ ಈಗಲೂ ವಾಸಿಸುತ್ತಿದ್ದಾರೆ. ಸ್ಲಂಗಳನ್ನು ಎತ್ತಂಗಡಿ ಮಾಡುವಾಗ ಅವರಿಗೆ ಸೂಚನೆ ನೀಡದೆ ಪೋಲಿಸರು ಅಧಿಕಾರಿಗಳು ಅಮಾನವೀಯವಾಗಿ ವರ್ತಿಸದೇ ಸೂಕ್ತ ಸ್ಥಳಕ್ಕೆ ಅವರಿಗೆ ಪುನರ್ವಸತಿ ಕಲ್ಪಸಿ ಎತ್ತಂಗಡಿ ಮಾಡಬೇಕು.

ಗೃಹನಿರ್ಮಾಣ ಸಾಲವನ್ನು ನೇರವಾಗಿ ಹಣರೂಪದಲ್ಲಿ ನೀಡದೇ–ನಿವೇಶನವನ್ನು ಸಬ್ಸಡಿ ಹಣದಲ್ಲಿ ನೀಡಿ ಇಲಾಖೆಯೇ ಅವರಿಗೆ ಮನೆಕಟ್ಟಿ ಕೊಡುವ ವ್ಯವಸ್ಥೆ ರೂಪಗೊಳ್ಳಬೇಕು ಲೋಕಸಭೆಯಲ್ಲಿ ಪ್ರಸ್ತಾಪಗೊಂಡು ಪಾಸಾದಬಿಲ್, ಅಭಿವೃದ್ಧಿಕೆಲಸಗಳು ಹಳ್ಳಿಗಾಡಿನವರೆಗೆ ತಲುಪುವ ಹಂತದಲ್ಲಿ ಮಧ್ಯವರ್ತಿಗಳ ಕೈಗೆ ಯೋಜನೆಗಳ ಅದರಲಾಭಗಳು ದೊರೆಯದೆ ಕಟ್ಟಕಡೆಯ ಮನುಷ್ಯನಿಗೆ ಸಮರ್ಪಕ ಸೌಲಭ್ಯ ದೊರೆಯುವ ದಿಶೆಯಲ್ಲಿ ಬ್ಯಾಂಕ್‌ಗಳು ಸರ್ಕಾರಿ ಅಧಿಕಾರಿಗಳು ಮುತುವರ್ಜಿ ವಹಿಸಬೇಕು ಹಳ್ಳಿಗಾಡಿನ

ಜನರು ಬರಗಾಲ ಬಿದ್ದಾಗ ನಗರ ಪ್ರದೇಶಗಳಿಗೆ ವಲಸೆ ಹೋಗುವಂತೆ ತಡೆಯಲು ಅವರಿಗೆ ಉದ್ಯೋಗ ಕಲ್ಪಿಸಿ, ಆಹಾರ, ನೀರು, ಸಿಗುವ ವ್ಯವಸ್ಥೆ ಹಳ್ಳಿಗಾಡಿನಲ್ಲಿ ಆಗಬೇಕು. ಇದರಿಂದ ನಗರಗಳೂ ಸಹ ಸ್ಲಂ ಮುಕ್ತಿಗೊಂಡು ಸ್ವಚ್ಛ ಗಾಳಿ ಬೆಳಕಿಗೆ ತೆರೆದುಕೊಳ್ಳುತ್ತವೆ. ಭಾರತ ಹಳ್ಳಿಗಾಡು ದೇಶ– ಎಲ್ಲ ಹಳ್ಳಿಗಳಲ್ಲಿ ಜನರು ಸ್ವಂತ ಮನೆ ಕಟ್ಟಿಕೊಂಡು ಸ್ವಾವಲಂಬಿ ಜೀವನ ನಡೆಸುವ ರೀತಿಯಲ್ಲಿ ಈ ಯೋಜನೆಗೆ 100ಕೋಟಿ ಹಣಕ್ಕಿಂತಲೂ ಹೆಚ್ಚು 500ಕೋಟಿ ಹಣ ಬಿಡುಗಡೆ ಮಾಡಬೇಕೆಂದು ಆಗ್ರಹಪಡಿಸುತ್ತಾರೆ.

# 1987-8ನೇ ಲೋಕಸಭೆಯಲ್ಲಿ

**ಶ್ರೀಮತಿ ಬಸವರಾಜೇಶ್ವರಿಯವರು ಸಾಮಾನ್ಯ ಜನರು ಪ್ರವಾಸ ಮಾಡುವ ಭಾರತೀಯ ರೈಲುಕುರಿತಂತೆ ತಮ್ಮ ಅಮೂಲ್ಯ ಸಲಹೆಗಳ ಜೊತೆ ಜೊತೆಗೆ ಅನುಭವವನ್ನು ಲೋಕಸಭೆಯಲ್ಲಿ ಸಂಸದರು ಮೆಚ್ಚುವಂತೆ ಹಂಚಿಕೊಂಡಿದ್ದಾರೆ ಅದನ್ನೀಗ ನೋಡವಾ.**

ವಿದ್ಯಾರ್ಥಿಗಳಿಗೆ ಘನಸರ್ಕಾರ ಟಿಕೇಟು ದರಗಳಲ್ಲಿ ನೀಡುತ್ತಿರುವ ಸೌಲಭ್ಯ ವಂಚಿಸುತ್ತಿರುವ ಅಧಿಕಾರಿಗಳ ವಿರುದ್ಧ ಕ್ರಮಜರುಗಿಸಬೇಕು ರೇಲ್ವೆ ಆಸ್ತಿ ರಕ್ಷಣೆಗೆ ಇರುವ ರೇಲ್ವೆ ಪ್ರೋಟೆಕ್ಷನ್ ಫ್ರೋಸ್‌ಗೆ ಸತ್ಯಾಧುನಿಕ ಎಲೆಕ್ಟ್ರಾನಿಕ್ ಸಾಧನಗಳ ನೀಡಿ, ಬಾಂಬುಸ್ಫೋಟ, ಮತ್ತು ರೈಲ್ವೆಹಳಿ, ಅದಕ್ಕೆ ಸಂಭಂದಿಸಿದಂತೆ ನಡೆಯುವ ದುಷ್ಕರ್ಯ ತಡೆಯಲು ಪ್ರೇರೇಪಿಸಬೇಕು.

ಎಡನೇ ದರ್ಜೆ ರಿಜರ್ವೆಷನ್‌ಗಳಲ್ಲಿ ಕಂಟಕ್ಟರ್‌ಗಳು ನಡೆಸುವ ಅಕ್ರಮ–ವ್ಯವಹಾರ ತಡೆಗಟ್ಟಿ ಮೂಲದಲ್ಲಿ ಆಸನಗಳನ್ನು ಗೊತ್ತುಪಡಿಸಿದವರಿಗೆ ಪ್ರವಾಸದಲ್ಲಿ ಅಡೆತೆಡೆ ಉಂಟಾಗದಂತೆ ಕ್ರಮ ಜರುಗಿಸುವುದು ತುರ್ತಿನ ಅಗತ್ಯಗಳಲ್ಲೊಂದು.

ರೈಲ್ವೆಹಳಿಗಳ ಎರಡೂ ಮಗ್ಗುಲುಗಳಲ್ಲಿ ಇರುವ ಭೂಮಿ ಕುರಿತಂತೆ ಅಲ್ಲಲ್ಲಿ ರೇಲ್ವೆ ಇಲಾಖೆ ಅದನ್ನು ಲೀಜ್‌ಗೆ ಪಡೆದಿದ್ದಲ್ಲದೇ ಇಡೀ ಭೂಮಿಯನ್ನು ವಸಪಡಿಸಿಕೊಂಡು ಸೂಕ್ತ ಪರಿಹಾರ ಕಲ್ಪಿಸುವ ಸ್ಪಷ್ಟವಾದ ನೀತಿ ರೂಪುಗೊಳ್ಳಬೇಕು ಮಾಡಲ್ ಸಟೇಷನ್‌ಗಳಂತಾ ಕೆಲವೊಂದನ್ನು ಗುರುತಿಸಿ ಅಲ್ಲಿ ಎಲ್ಲಾ ರೀತಿಯ ಪ್ರವಾಸಿ ಸೌಲಭ್ಯಗಳನ್ನು ಒದಗಿಸಿ ರೇಲ್ವೆ ಪ್ರವಾಸದ ಮುದವನ್ನು ಉಣಬಡಿಸಬೇಕು ಹೆಚ್ಚಾಗಿ ಹೆಂಗಸರು–ಮಕ್ಕಳು– ಇಡೀ ಕುಟುಂಬದವರು ಪ್ರಯಾಣಿಸುವಾಗ ಭಾರತೀಯ ರೈಲ್ವೆ ರಾಷ್ಟ್ರದ ಹೆಮ್ಮೆಯ ಪ್ರತೀತ ನಮ್ಮ ಕರ್ನಾಟಕದಲ್ಲಿ ಸಂಚರಿಸುತ್ತಿರುವ ರೈಲಿಗೆ "ಕಿತ್ತೂರು ರಾಣಿ ಚೆನ್ನಮ್ಮ" "ಟಿಪ್ಪು ಎಕ್ಸ್‌ಪ್ರೆಸ್" ಎಂದು ನಾಮಕರಣಮಾಡಿ ರಾಜ್ಯದ ಜನತೆಯ ಅಭಿಮಾನಕ್ಕೆ ಪಾತ್ರರಾದ ರೇಲ್ವೇಸಚಿವರನ್ನು– ಪ್ರಧಾನಮಂತ್ರಿಗಳನ್ನು ಈ ಸಂದರ್ಭದಲ್ಲಿ ಅಭಿನಂದನೆಯನ್ನು ಬಯಸುತ್ತೇನೆ.

# 1987-9ನೇ ಅಧಿವೇಶನ-8ನೇ ಲೋಕಸಭೆ

**ಶ್ರೀಮತಿ ಬಸವರಾಜೇಶ್ವರಿ** (ಬಳ್ಳಾರಿ): ಮಾನ್ಯ ಉಪಸಭಾಧ್ಯಾಕ್ಷರೇ ರಾಷ್ಟ್ರೀಯ ವಸತಿ ಬ್ಯಾಂಕ್ ಮಸೂದೆ ಈ ಮಹತ್ವದ ಮಸೂದೆಯನ್ನು ನಾನು ಬೆಂಬಲಿಸಲು ಇಚ್ಛಿಸುತ್ತೇನೆ. ಇದು ಅಂತರಾಷ್ಟ್ರೀಯ ವಸತಿ ವರ್ಷ ಇದು ಶ್ರೀಮತಿ ಇಂದಿರಾಗಾಂಧಿಯವರ ಕನಸು. ಕಳೆದ ವರ್ಷ ಬಜೆಟ್ ಅಧಿವಾಶನ ವೇಳೆ, ವಸತಿ ನಿರ್ಮಾಣದ ಉದ್ದೇಶಕ್ಕೆ ನೂತನ ಬ್ಯಾಂಕ್ ತೆರೆಯುವುದಾಗಿದೆ ನಮ್ಮ ಮಾನ್ಯ ಪ್ರಧಾನಮಂತ್ರಿ ರಾಜೀವ್ ಗಾಂಧಿಯವರ ಹೇಳಿಕೆ ನೀಡಿದ್ದರು. ಈ ದಿನ ನಾವು ಆ ಮಹತ್ವದ ಮಸೂದೆಯ ಬಗ್ಗೆ ಚರ್ಚಿಸುತ್ತಿದ್ದಾರೆ. ನಮ್ಮ ರಾಷ್ಟ್ರದ ಕೈಗಾರಿಕಾ ಅಭಿವೃದ್ಧಿಗಾಗಿ ನಾವು ಬ್ಯಾಂಕನ್ನು ಆರಂಭಿಸಿದ್ದೇವೆ. ಅದನ್ನು ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ ಎಂದು ಕರೆಯಲಾಗುತ್ತದೆ. ಅಭಿವೃದ್ಧಿಗಾಗಿಯೂ ನಾವು ಬ್ಯಾಂಕನ್ನು ಹೊಂದಿದ್ದೇವೆ. ಅದನ್ನು ನಬಾರ್ಡ್ ಎಂದು ಕರೆಯಲಾಗುತ್ತದೆ. ಇದೇ ದಾರಿಯಲ್ಲಿ ಸಾಗಿ ಈಗ ಮನೆಗಳ ನಿರ್ಮಣಕ್ಕಾಗಿ ನಾವು ಬ್ಯಾಂಕನ್ನೂ ಆರಂಭಿಸುತ್ತಿದ್ದೇವೆ.

ಮಾನ್ಯರೇ ಹಿಂದೆ ಮನೆಗಳಿಗೆ ಸಂಬಂಧಿಸಿದಂತೆ ಒಂದು ಮಾತು ಪ್ರಚಲಿತದಲ್ಲಿತ್ತು ಅದೇನೆಂದರೆ ಮೂರ್ಖರು ಮನೆಗಳನ್ನು ಕಟ್ಟುತ್ತಾರೆ ಜಾಣರು ಅವುಗಳಲ್ಲಿ ವಾಸ ಮಾಡುತ್ತಾರೆ ಅನ್ನುವುದು ಹಳೆಯ ಮತು ಇದರ ಅರ್ಥ ಅನುತ್ಪಾದಕ ಸಾಹಸ ವೆನ್ನಿಸುವ ಮನೆಗಳ ನಿರ್ಮಣ ಅರ್ಥಹೀನ ಅನ್ನುವುದಾಗಿತ್ತು. ಈಗ ಇದು ತಿರುವು-ಮುರುವುವಾಗಿದೆ. ವಸತಿ ನಿರ್ಮಾಣ ನಿಧಾನವಾಗಿ ವಾಣಿಜ್ಯದ ರೂಪ ಪಡೆಯ ತೊಡಗಿದೆ. ಇದನ್ನು ಒಂದು ಉದ್ಯಮದವೆಂದು ಪರಿಗಣಿಸಲಾಗುತ್ತಿದೆ. ಮನೆ ಬಾಡಿಗೆ ನೀಡಿ ಜನ ಖುಷಿ ಪಡುತ್ತಿದ್ದಾರೆ. ಅವರ ಮುಖ ಚಹರೆ ದಿನದಿಂದ ದಿನಕ್ಕೆ ಕಳೆ ತುಂಬಿಕೊಳ್ಳುತ್ತಿದೆ. ಆದ್ದರಿಂದ ಈ ಸಮಸ್ಯೆಯ ತೀವ್ರತೆ ಅರ್ಥವಾಗುತ್ತಿದೆ. ಈ ನಿಟ್ಟಿನಲ್ಲಿ ಉದ್ದೇಶಿತ ಮಸೂದೆ ವಸತಿ ನಿರ್ಮಾಣದ ಉದ್ದೇಶಕ್ಕೆ ಆರ್ಥಿಕ ಬೆಂಬಲ ಒದಗಿಸಿ ಕೊಡಲಿದೆ

ಇತ್ತೀಚೆಗೆ ಶ್ರೀನಗರದಲ್ಲಿ ಒಂದು ಸಮಾವೇಶ ಜರುಗಿತು. ಅದರಲ್ಲಿ ಅನೇಕ ರಾಜ್ಯಗಳ ಸಚಿವರು ಪಾಲ್ಗೊಂಡಿದ್ದರು. ಅವರೆಲ್ಲರೂ ವಸತಿ ಸಮಸ್ಯೆಯ ತ್ರೀವ್ರತೆಯ ಕುರಿತು ಕುಲಂಕಷ ಚರ್ಚೆ ನಡೆಸಿದರು. 2000 ಇಸವಿ ವೇಳೆಗೆ ಪ್ರತಿಯೊಂದು ಕುಟುಂಬಕ್ಕೆ ಸೂರು ಕಲ್ಪಿಸಬೇಕು ಅನ್ನುವುದನ್ನು ಅವರ ಅಭಿಪ್ರಾಯವಾಗಿತ್ತು. ಈ ಗುರಿ ಸಾಧಿತವಾಗ ಬೇಕಾದರೆ ಇನ್ನೂ 330 ದಶಲಕ್ಷಕ್ಕೂ ಹೆಚ್ಚು ಮನೆಗಳು ನಿರ್ಮಾಣವಾಗುವ ಅಗತ್ಯ ಇದೆ ಅನ್ನುವುದು ಸರ್ವೇಯೊಂದರಿಂದ ತಿಳಿದು ಬಂದ ಸಂಗತಿಯಾಗಿದೆ. ಮತ್ತೊಂದು ಸರ್ವೆಯ ಪ್ರಕಾರ ಈ ಗುರಿ ಸಾಧಿತವಾಗಬೇಕಾದರೆ 105 ದಶಲಕ್ಷ ಮನೆಗಳು ನಿರ್ಮಣವಾಗಬೇಕಿದೆ. ಇದು ಇಂದಿನ ದಿನಗಳ ಸಮಸ್ಯೆಯಾಗಿದೆ. ತಿನ್ನಲು ಕೈಗೊಂದು ಕೆಲಸ ಇರಲೊಂದು ಮನೆ- ಇದು ಜನ ಸಾಮಾನ್ಯ ಇಚ್ಛಿಸುವ ವ್ಯವಸ್ಥೆ. ಅತ್ಯಂತ ಭೀಕರ ಬರ ಪರಿಸ್ಥಿತಿಯಲ್ಲಿಯೂ ನಾವು ದೇಶದ ವಿವಿಧ ಭಾಗಗಳಿಗೆ ನಾವು ಉತ್ತಮ ಆಹಾರ ಪೂರೈಸುತ್ತಾ ಬಂದಿದ್ದೇವೆ. ಜನರ ಬದುಕು ಸಾಗಲು ಆಹಾರ ಅತ್ಯಗತ್ಯ. ಈ ನಿಟ್ಟಿ ನಮ್ಮ ದೇಶದ ರೈತಾಪಿ ಜನ

ಸಮೃದ್ಧ ಆಹಾರ ಉತ್ಪಾದಿಸುವ ನಿಟ್ಟಿನಲ್ಲಿ ಶ್ರಮಿಸುತ್ತಿದ್ದಾರೆ. ಅದಕ್ಕಾಗಿ ಅವರನ್ನು ನಾವು ಇಲ್ಲಿ ಅಭಿನಂದಿಸಬೇಕಿದೆ.

ಕುಡಿಯುವ ನೀರಿನ ವ್ಯವಸ್ಥೆಗೆ ಸಂಬಂಧಿಸಿದಂತೆ ನಾವು ಶೇ 90ರಷ್ಟು ಸಾಧನೆ ಪೂರೈಸಿದ್ದೇವೆ. ಅನೇಕ ಹಳ್ಳಿಗಳಿಗೆ ಉತ್ತಮ ಉತ್ತಮ ಗುಣಮಟ್ಟದ ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗಿದೆ. ಆದರೂ ಇನ್ನು ಕೆಲವು ಹಳ್ಳಿಗಳು ಈ ಸವಲತ್ತು ಪಡೆಯಬೇಕಾಗಿದೆ. ತೀರ ದುರ್ಗಮ ಪ್ರದೇಶದ ಹಳ್ಳಿಗಳು ಮಾತ್ರ ಬಾಕಿ ಉಳಿದಿವೆ. ಅಂತಹ ಹಳ್ಳಿಗಳಿಗೆ ಬೇರೆಡೆಯಿಂದ ನೀರನ್ನು ಪೂರೈಕೆ ಮಾಡಲಾಗುತ್ತಿದೆ, ನಂತರದ ಗಂಭೀರ ಸವಾಲು ಎಂದರೆ ಉದ್ಯೋಗ ಕುರಿತದ್ದು. ಈ ನಿಟ್ಟಿನಲ್ಲಿ ನಾವು ಪ್ರಯತ್ನ ನಡೆಸಿದ್ದೇವೆ. ಉದ್ಯೋಗ ಸಮಸ್ಯೆ ನೀಗಿಸುವ ನಿಟ್ಟಿನಲ್ಲಿ ಸರ್ಕಾರ ಅನೇಕ ಕಾಯ್ದೆಗಳನ್ನು ಜಾರಿಗೊಳಿಸಿದೆ. ಆದರೂ ನಾವು ಸಾಧಿಸ ಬೇಕಾದದ್ದು ಇನ್ನೂ ಸಾಕಷ್ಟು ಬಾಕಿ ಉಳಿದಿದೆ. ಇನ್ನೂ ಕೊನೆಯ ಮಹತ್ವದ ವಿಷಯ ಅಂದರೆ ಸೂರಿಗೆ ಸಂಬಂಧಿಸಿದ್ದು. ಸೂರು ಪ್ರತಿಯೊಬ್ಬನ ಅಗತ್ಯ ಆದ್ದರಿಂದಲೇ ಇದು ಅತ್ಯಂತ ಮಹತ್ವದ ಸಂಗತಿ ಎನಿಸಿದೆ. ಅಗತ್ಯ ಇರುವವರಿಗೆ ಸೂರು ಕಲ್ಪಿಸುವ ಕುರಿತು ನಾವಿಲ್ಲಿ ಗಂಭೀರ ಚಿಂತನೆ ನಡೆಸಿದ್ದೇವೆ. ನಾನಿಲ್ಲಿ ವಸತಿ ಮಸೂದೆಯ ಬಗ್ಗೆ ಕೂಲಂಕುಶವಾಗಿ ಮಾತಾಡಲು ಇಚ್ಛಿಸಿದ್ದೇನೆ.

ವಸತಿ ನಿರ್ಮಾಣ ಮಂಡಳಿ ರಚನೆಗೆ ಸಂಬಂಧಿಸಿದಂತೆ ಗೌರವಾನ್ವಿತ ಅನೇಕ ಸದಸ್ಯರುಗಳು ತಮ್ಮದೇ ಆದ ಅಭಿಪ್ರಾಯ ಮಂಡಿಸಿದ್ದಾರೆ. ಮಂಡಳಿಯಲ್ಲಿ 13 ಸದಸ್ಯರು ಇರುವುದು ಹೆಚ್ಚಾಯಿತು ಎನ್ನುವುದು ಕೆಲವರ ಅಭಿಪ್ರಾಯ ಆದರೆ ನನ್ನ ಅಭಿಪ್ರಾಯದ ಪ್ರಕಾರ 13 ಸದಸ್ಯರ ಸಂಖ್ಯೆ ಕಡಿಮೆ. ಅದು 15 ಆಗಬೇಕು. ಇದರಲ್ಲಿ ಸಾರ್ವಜನಿಕ ಪ್ರತಿನಿಧಿಗಳು ಇರಬಾರದು. ಸಮಾಜದ ಕೆಳವರ್ಗದ, ತುಳಿತಕ್ಕೊಳಗಾದ ಜನ ಸಮುದಾಯದ ಸಮಸ್ಯೆಗಳ ನಿವಾರಣೆಗೆ ನಾವು ಪ್ರಯತ್ನ ನಡೆಸಿದ್ದೇವೆ. ಆದ್ದರಿಂದ ಉದ್ದೇಶಿತ ಮಂಡಳಿಯಲ್ಲಿ ಇಬ್ಬರು ಸಾರ್ವಜನಿಕ ಪ್ರತಿನಿಧಿಗಳಿರಬೇಕು. ಇದರ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರನ್ನಯ ರಿಸರ್ವ್ ಬ್ಯಾಂಕಿನಿಂದ ಆಯ್ಕೆ ಮಾಡಬೇಕು. ಇಲ್ಲಿ ಅಧ್ಯಕ್ಷರ ಹುದ್ದೆ ಗೌರವಾನ್ವಿತ ಮಟ್ಟದ್ದಾಗಿರಬೇಕು. ಈ ಹುದ್ದೆ ಅಲಂಕರಿಸುವ ವ್ಯಕ್ತಿ ಸಾರ್ವಜನಿಕರಿಂದ ಬಂದಾತ ಆಗಿರಬೇಕು. ಮಂಡಳಿಯ ವ್ಯವಸ್ಥಾಪಕ ನಿರ್ದೇಶಕ ಕಾರ್ಯಕಾರಿಣಿ ಜಾರಿ ಆ ಅಧಿಕಾರ ಹೊಂದಿದ್ದು ಅಂತಹ ವ್ಯಕ್ತಿ ಕಡ್ಡಾಯವಾಗಿ ರಿಸರ್ವ್ ಬ್ಯಾಂಕಿನಿಂದ ಬಂದವರಾಗಿರಬೇಕು.

ಮಂಡಳಿಯು ತನ್ನದೇ ಆದ ಕಾರ್ಯಕಾರಿಣಿಯನ್ನು ಹೊಂದಬಹುದಾಗಿದೆ. ನಾನಿಲ್ಲಿ ಒಂದು ಅಥವಾ ಎರಡು ಉಪಸಮಿತಿಗಳ ಬಗ್ಗೆ ಕೂಡ ಸಲಹೆ ಮಾಡಲು ಇಚ್ಛಿಸುತ್ತೇನೆ. ಯೋಜನಾ ಸಮಿತಿ ಮತ್ತು ಉಪಸಮಿತಿಗಳ ಬಗ್ಗೆ ಕೂಡ ಸಲಹೆ ಮಾಡಲು ಇಚ್ಛಿಸುತ್ತೇನೆ. ಯೋಜನಾ ಸಮಿತಿ ಮತ್ತು ನಿರ್ಮಣ ಸಮಿತಿ ಎಂದು ಅವುಗಳನ್ನು ಹೆಸರಿಸ ಬಹುದಾಗಿದೆ. ಈ ಮೂರು ಉಪಸಮಿತಿಗಳು ಮಂಡಳಿಯ ಆಂತರಿಕ ರಚನೆಯಾಗಿರಬೇಕು. ಉಪಸಮಿತಿಗಳು ಮಂಡಿಸುವ ಯಾವುದೇ ವರದಿ

ಮೊದಲು ಮಂಡಳಿಯ ಮುಂದೆ ಪ್ರಸದತಾಪವಾಗಬೇಕು. ಈ ನಿಟ್ಟಿನಲ್ಲಿ ಮಂಡಳಿ ಕೈಗೊಳ್ಳುವ ತೀರ್ಮಾನವೇ ಅಂತಿಮ.

ಮಾನ್ಯರೇ, ದುರ್ಗವು ತಾಣಗಳತ್ತ ಈ ಹಣವನ್ನು ಹೇಗೆ ಹೇಗೆ ಹರಿಸುವುದು ಅನ್ನುವ ಕುರಿತು ನಾನು ಇಲ್ಲಿ ಕೆಲವು ಮಾತುಗಳನ್ನು ಆಡಲು ಇಚ್ಛಿಸುತ್ತೇನೆ. ಇಂತಹ ಕಾರ್ಯಕ್ರಮಗಳಲ್ಲಿ ಎಲ್ಲಾ ರಾಜ್ಯ ಸರ್ಕಾರಗಳು ಮತ್ತು ರಾಷ್ಟ್ರ ಬ್ಯಾಂಕ್‌ಗಳು ತಮ್ಮನ್ನು ತೊಡಗಿಸಿಕೊಳ್ಳುವ ಅಗತ್ಯವಿದೆ. ಪ್ರತಿ ರಾಜ್ಯದಿಂದ ಒಂದು ರಾಷ್ಟ್ರೀಕೃತ ಬ್ಯಾಂಕ್ ಈ ಯೋಜನೆಯನ್ನು ಜಾರಿಗೊಳಿಸುವ ಜವಾಬ್ದಾರಿ ವಹಿಸಬೇಕು. ಆ ಮೂಲಕ ಮೊದಲು ಜಿಲ್ಲಾ ಮಟ್ಟಗಳಿಗೆ ಬಳಿಕ ದುಗಘಮ ಹಳ್ಳಿಗಳತ್ತ ಯೋಜನೆ ಸಾಗಿ ಹೋಗಬೇಕು. ಅಂದಾಗ ಮಾತ್ರ ನಿಜವಾದ ಫಲಾನುಭವಿಗೆ ಅಥವಾ ಅಗತ್ಯವಿರುವ ವ್ಯಕ್ತಿಗೆ ಸೂಕ್ತ ರೋತಿಯಲ್ಲಿ ಹಣ ಸಂದಾಯವಾಗಲು ಸಾಧ್ಯ. ಒಲ್ಲದೆ ಹೋದರೆ ಕಿಡಿ ಗೇಡಿಗಳು ಯೋಜನೆಯ ದುರುಪಯೋಗ ಮಾಡಿಕೊಳ್ಳುವ ಅಪಾಯವಿದೆ. ಈ ವ್ಯವಸ್ಥೆಯಲ್ಲಿ ಸಣ್ಣ ಲೋಪ ಕಾಣಿಸಿಕೊಂಡರೂ ನಗರ ಪ್ರದೇಶಗಳಲ್ಲಿ ವಾಸಿಸುವ ಕಿಡಿಗೇಡಿಗಳು ಬ್ಯಾಂಕ್ ಅಧಿಕಾರಿಗಳ ಮೇಲೆ ಪ್ರಭಾವ ಬೀರಿ ಸಾಲ ಪಡೆಯುತ್ತಾರೆ. ಇನ್ನೊಂದೆಡೆ ದುರ್ಬಲ ಸಮುದಾಯ  ಯಥಾ ರೀತಿಯ ಸಂಕಷ್ಟದ ನಡುವೆ ಜೀವನ ಸಾಗಿಸುತ್ತದೆ. ಈ ನಿಟ್ಟಿನಲ್ಲಿ ಮಂಡಳಿಯನ್ನು ತುಂಬ ಎಚ್ಚರಿಕೆಯಿಂದ ರಚಿಸುವ ಅಗತ್ಯವಿದೆ. ಜಾರಿ ಸಂದರ್ಭದಲ್ಲಿ ಆದ್ಯಾತ ಕ್ರಮವನ್ನು ಅನುಸರಿಸಬೇಕಾದ ವಿಧಾನ ಕುರಿತು ನಾನು ಇಲ್ಲಿ ಕೆಲವು ಸಲಹೆಗಳನ್ನು ನೀಡಲು ಇಚ್ಛಸುತ್ತೇನೆ. ಈಗಾಗಲೇ ಅನೇಕ ಸದಸ್ಯರು ಹೇಳಿದ ರೀತಿಯಲ್ಲಿ ಮೊದಲ ಆದ್ಯತೆ ದುರ್ಬಲ ವರ್ಗದ ಜನರು ಆಗಿರಬೇಕು ಅಂತಹ ಜನರತ್ತ ಹೆಚ್ಚು ಹೆಚ್ಚು ಹಣ ಹರಿದು ಹೋಗುವಂತೆ ನೋಡಿಕೊಳ್ಳಬೇಕು. ಈ ಮಸೂದೆಯಲ್ಲಿ ಅವರಿಗಾಗಿ 100 ಕೋಟಿ ರೂಪಾಯಿ ಒದಗಿಸಲಾಗಿದೆ. ಆದರೆ ಅದು ಏನಕ್ಕೂ ಸಾಲದು. ಅನೇಕ ಸದಸ್ಯರು ಅಭಿಪ್ರಾಯಪಟ್ಟಿರುವ ಪ್ರಕಾರ ಕನಿಷ್ಠ ಪಕ್ಷ 500 ಕೋಟಿ ರೂಪಾಯಿಗಳಾದರೂ ಒದಗಿಸಬೇಕಾಗುತ್ತದೆ.

ಇನ್ನೊಂದು ಕಳವಳ ಓಟ್ಟಿಸಿರುವ ಸಂಗತಿಯಾದರೆ ಗ್ರಾಮೀಣ ಬದುಕಿನ ಸಂಕಷ್ಟ ಕುರಿತದ್ದು. ಇತ್ತೀಚೆಗೆ ಗ್ರಾಮಗಳ ಜನ ನಗರಗಳತ್ತ ವಲಸೆ ಹೋಗುವುದು ಹೆಚ್ಚಾಗಿದೆ. ಇದರಿಂದಾಗಿ ನಗರಗಳಲ್ಲಿ ಕೊಳಚೆ ಪ್ರದೇಶಗಳ ಸಂಖ್ಯೆ ಹೆಚ್ಚಿದೆ. ವಲಸೆ ಬಂದ ಜನ ಕೊಳಚೆ ಪ್ರದೇಶಗಳಲ್ಲಿ ಪರಿಸರ ಮಾಲಿನ್ಯ ಮತ್ತು ವಾಯು ಮಾಲಿನ್ಯ ನಡುವೆ ಜೀವನ ಸಾಗಿಸುತ್ತಿದ್ದಾರೆ. ಅಂತಹ ಪ್ರದೇಶಗಳನ್ನು ನೋಡುವುದೇ ನಿಜಕ್ಕೂ ರೇಜಿಗೆ ಹುಟ್ಟಿಸುವ ಸಂಗತಿಯಾಗಿದೆ. ಗುರುತಿಸಲ್ಪಟ್ಟ ಅನೇಕ ಪ್ರದೇಶಗಳಲ್ಲಿ ಕೊಳಚೆ ನಿವಾಸಿಗಳು ತಮ್ಮದೇ ಆದ ನಿವೇಶನಗಳನ್ನು ಹೊಂದಿದ್ದಾರೆ. ಇಂತಹ ಜನ ಕೆಲವು ಬಾರಿ ಹಟತ್ತಾಗಿ ಸಂಕಷ್ಟಕ್ಕೆ ಗುರುಯಾಗಬೇಕಾಗುತ್ತದೆ. ಯಾಕೆಂದರೆ ಜಿಲ್ಲಾ ಮಟ್ಟಗಳಲ್ಲಿ ಅಧಿಕಾರಿಗಳು ಯಾವುದೇ ಸೂಚನೆ ನೀಡದೆ ಪರ್ಯಾಯ ವಸತಿ ಕೂಡ ಕಲ್ಪಿಸದೆ ಹಠಾತ್ತಾಗಿ ಕೊಳಚೆ ಪ್ರದೇಶಗಳನ್ನು ಎತ್ತಂಗಡಿ ಮಾಡುತ್ತಾರೆ. ಪೋಲಿಸರು ಮತ್ತು ಇತರ ಜನಗಳಿಂದ ಕೊಳಚೆ ನಿವಾಸಿಗಳು ನಿರ್ದಯವಾಗಿ ಬೀದಿಗೆ ಎಸೆಯಲ್ಪಡುತ್ತಾರೆ. ಇಂತಹ ಉಪಚಾರ ಸಮಾಜದ ಕೆಳ ವರ್ಗದ ಜನ ಅನುಭವಿಸುತ್ತಲೇ

ಬರುತ್ತಿದ್ದಾರೆ. ಫಲಾನುಭವಿಗಳನ್ನು ಗುರುತಿಸುವಾಗ ನಗರ ಪ್ರದೇಶಗಳ ಇಂತಹ ಕೊಳಚೆ ನಿವಾಸಿಗಳಿಗೆ ಮೊದಲ ಆದ್ಯತೆ ನೀಡಿ ಸಾಲ ಸವಲತ್ತು ಕಲ್ಪಿಸಬೇಕು. ಇಂತಹವರನ್ನು ನಗರ ಪ್ರದೇಶಗಳ ಬಡವರು ಎಂದು ಕರೆಯಲಾಗುತ್ತದೆ. ನಗರ ಗ್ರಾಮೀಣ ಪ್ರದೇಶಗಳ ಬಡವರಲ್ಲಿ ಅಪಾರ ಬಿನ್ನತೆ ಇದೆ. ಗ್ರಾಮೀಣ ಪ್ರದೇಶದ ಬಡವರಲ್ಲಿ ಬಹುತೇಕ ಕೃಷಿ ಕಾರ್ಮಿಕರೇ ಆಗಿರುತ್ತಾರೆ. ಇವರು ಸೂರು ಇಲ್ಲದೇ ಇಂದಿಗೂ ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಅನೇಕ ಬಾರಿ ಮಿತಿಮೀರಿದ ಉಷ್ಣಾಂಶದಿಂದ ಹಠಾತ್ ಬೆಂಕಿ ಹೊತ್ತಿಕೊಂಡು ಇಡೀ ಕಾಲೋನಿಗಳೇ ಸುಟ್ಟು ಬೂದಿಯಾದ ಪ್ರಕರಣಗಳಿವೆ. ಇಂತಹ ಅಗ್ನಿ ಆಕಸ್ಮಿಕಗಳಲ್ಲಿ ಕೃಷಿ ಕೂಲಿಕಾರರು ತಮ್ಮ ದವಸ ಧಾನ್ಯ, ಬಟ್ಟೆಬರೆಗಳನ್ನು ಕಳೆದು ಕೊಂಡು ಪರಿತಪಿಸಿದ್ದಾರೆ. ಈ ನಿಟ್ಟಿನಲ್ಲಿ ಶಾಶ್ವತ ಪರಿಹಾರ ದೊರಕಿಸಿಕೊಡುವ ಪ್ರಯತ್ನವನ್ನು ಮಾನ್ಯ ಸಚಿವರು ಆರಂಭಿಸಿದ್ದಾರೆ. ಇಂತಹ ಗುಡಿಸಲು ನಿವಾಸಿಗಳು ಸೂರು ನಿರ್ಮಿಸಿ ಕೊಳ್ಳುವ ರಿಯಾಯಿತಿ ದರದಲ್ಲಿ ಸಾಲ ಪಡೆಯಲಿದ್ದಾರೆ. ಇಲ್ಲಿ ನಾನು ಮತ್ತೆ ಕೆಲವು ಸಲಹೆಗಳನ್ನು ಮುಂದಿಡಲು ಇಚ್ಛಿಸುತ್ತೇನೆ. ನೀವು ಹಣ ಕೊಡುವುದು ಆದರೆ ನಿಕಟವಾದ ಫಲಾನುಭವಿಗಳಿಗೆ ಅದು ತಲುಪಿದೆ ಅಥವಾ ಇಲ್ಲವೇ ಅನ್ನುವ ಬಗ್ಗೆ ಯೋಚಿಸಲಾರಿರಿ. ಅದು ಅನೇಕ ಅಂತಗಳಲ್ಲಿ ದುರ್ಬಳಕೆಯಾಗಬಹುದು. ಇಂತಹ ಉದ್ದಶಕ್ಕೆ ನೇರವಾಗಿ ಹಣ ಕೊಡುವ ಬದಲು ಸ್ವಯಂ ವಸತಿ ನಿರ್ಮಾಣ ಯೋಜನೆ ಅಥವಾ ಇಲಾಖೆ ಮೂಲಕ ಮನೆ ನಿರ್ಮಿಸಿ ಬಳಿಕ ಅವುಗಳನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವುದು ಸೂಕ್ತ. ಹಣದ ರೂಪದಲ್ಲಿ ಅಥವಾ ನಿವೇಶನ ರೂಪದಲ್ಲಿ ನಾವು ಬಡ ಜನತೆಗೆ ಸಬ್ಸಿಡಿ ಮರು ವಸೂಲಿ ಅವಧಿ 5 ವರ್ಷಕ್ಕೆ ಕಡಿಮೆ ಇರಬಾರದು.

ಈ ನಿಟ್ಟಿನಲ್ಲಿ ಪ್ರಸ್ತಾಪಿಸ ಬಹುದಾದ ಇನ್ನೊಂದು ಸಂಗತಿಯೆಂದರೆ ಕಡಿಮೆ ಬಡ್ಡಿದರದಲ್ಲಿ ಸಾಲ ನೀಡುವುದು. ಆದಷ್ಟು ಬಡ್ಡಿದರ ಕಡಿಮೆ ಇರುವಂತೆ ನೋಡಿಕೊಳ್ಳಬೇಕು. ಜೋತೆಗೆ 20 ರಿಂದ 30 ವರ್ಷಗಳ ಅವಧಿಯಲ್ಲಿ ಕಂತಿನ ಆಧಾರದ ಸಾಲ ಮರುಪಾವತಿ ಮಾಡಲು ಅನುಕೂಲ ಮಾಡಿಕೊಡಬೇಕು. ಇಲ್ಲದೆ. ಹೋದರೆ ಮರುಪಾವತಿ ಕಷ್ಟಕರ ಎನಿಸಲಿದೆ.

ವಸತಿ ನಿರ್ಮಾಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ದೇಶದಲ್ಲಿ ಏಕರೂಪ ಕಾಯ್ದೆ ಜಾರಿಗೊಳ್ಳುವ ಅಗತ್ಯವಿದೆ. ಆಯಾ ರಾಜ್ಯಗಳು ತಮ್ಮದೇ ಆದ ಪ್ರತ್ಯೇಕ ವಸತಿ ಕಾಯ್ದೆಯನ್ನು ಹೊಂದಿರುವುದನ್ನು ನಾನು ಗಮನಿಸಿದ್ದೇನೆ. ಇದು ನಮ್ಮ ಉದ್ದೇಶ ಸಾಧನೆಗೆ ಸಹಕಾರಿ ಎನಿಸುವುದಿಲ್ಲ. ಈ ಕ್ಷೇತ್ರದ ಎಲ್ಲಾ ಆಗು–ಹೋಗುಗಳ ಬಗ್ಗೆ ಸಂಪೂರ್ಣ ಉಸ್ತುವಾರಿ ಸರ್ಕಾರಗೊಳ್ಳ ಬೇಕಾದರೆ ಏಕರೂಪ ಕಾಯ್ದೆ ಜಾರಿಗೊಳ್ಳುವುದು ಅನಿವಾರ್ಯ.

ಸಾಲ ಮಂಜೂರಾತಿ ವಿಷಯದಲ್ಲಿ ವಿಳಂಬ ಧೋರಣೆ ಅನುಸರಿಸಲಾಗುತ್ತಿದೆ. ಇದನ್ನು ತಡೆಯುವ ನಿಟ್ಟಿನಲ್ಲಿ ಸಾಧ್ಯವಾದ ಪ್ರಯತ್ನ ಮಾಡಬೇಕಿದೆ. ಒಂದು ಕಾಲ ಮಿತಿಯೊಳಗಡೆ ಸಾಲ ಬಿಡುಗಡೆಯಾಗಬೇಕು. ಇಲ್ಲದೆ ಹೋದರೆ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಬಡ ಜನತೆ ಸೂರು ಕಂಡುಕೊಳ್ಳುವ ಪ್ರಯತ್ನಕ್ಕೆ ಹಿನ್ನಡೆಯಾಗಲಿದೆ.

ಸ್ವಯಂ ವಸತಿ ನಿರ್ಮಾಣ ಯೋಜನೆ ಅಂಥಾ ಕಾಲೋನಿಗಳ ಜೊತೆಗೂಡಿ ಸೂರು ನಿರ್ಮಿಸಲು ಮುಂದೆ ಬರುವ ವಿದೇಶಿ ಕಂಪನಿಗಳನ್ನು ಪ್ರೋತ್ಸಾಹಿಸಬೇಕಿದೆ. ಕೊನೆಯದಾಗಿ, ರಾಷ್ಟ್ರೀಯ ವಸತಿ ಕಾಯ್ದೆ ರೂಪಿಸುವ ಅಗತ್ಯವಿದೆ. ಎನ್ನುವುದನ್ನು ನಾನಿಲ್ಲಿ ಪ್ರಸ್ತಾಪಿಸ ಬಯಸುತ್ತೇನೆ. ಈ ಮೂಲಕ ಅಗತ್ಯವಿರುವ ಜನರ ಸಂಕಷ್ಟಗಳನ್ನು ವಿಚಾರಿಸ ಬೇಕಿದೆ. ಇದುವರೆಗು ನಾವು ಬಡ ಜನತೆಯ ಸಂಕಷ್ಟಗಳ ಬಗ್ಗೆ ಚರ್ಚಿಸಿಲ್ಲ, ಈ ವಿಷಯದ ಬಗ್ಗೆ ನಾವು ಸುಧೀರ್ಘ ಚರ್ಚೆ ನಡೆಸಬೇಕಿದೆ.

ಈ ಮಸೂದೆಯನ್ನು ಸದನದ ಮುಂದೆ ಮಂಡಿಸಿದ ಮಾನ್ಯ ಸಚಿವರನ್ನು ಮತ್ತೊಮ್ಮೆ ಅಭಿನಂದಿಸಿ ನನ್ನ ಮಾತು ಮುಗಿಸುತ್ತೇನೆ.

## 1988 ರಲ್ಲಿ ರೇಲ್ವೆ ಬಜೆಟ್ ಅನುಮೋದಿಸುತ್ತಾ ಶ್ರೀಮತಿ ಬಸವರಾಜೇಶ್ವರಿಯವರು ಈ ರೀತಿ ವಿಷಯ ಮಂಡಿಸಿದ್ದಾರೆ.

ಶ್ರೀಮತಿ ಬಸವರಾಜೇಶ್ವರಿಯವರು ಚಿತ್ರದುರ್ಗ ಮತ್ತು ರಾಯಗಢದ ಮಧ್ಯೆ ನಡೆಯುತ್ತಿರುವ ರೈಲ್ವೆ ಕಾಮಗಾರಿಯನ್ನು ಮುಗಿಸುವಂತೆ ಒತ್ತಾಯಿಸುತ್ತಾ ಬೆಂಗಳೂರು ಮತ್ತು ಮೈಸೂರಿನ ನಡುವಿನ ಮೀಟರ್ ಗೇಜ್ ಕ್ರಮಗಳನ್ನು ಬ್ರಾಡ್ ಗೇಜ್‌ಗೆ ಬದಲಾಯಿಸುವಂತೆ ಒತ್ತಾಯಿಸಿದರೆ. ಕಾಮಗಾರಿ ಎಲ್ಲೆಡೆ ಸುಗಮವಾಗಿ ನಡೆಯಲು ಪ್ಲಾನಿಂಗ್ ಕಮಿಷನರ್ ರವರಿಗೆ ರೈಲ್ವೆ ಬಜೆಟ್ ಹೆಚ್ಚಿಗೆ ಹಣ ನೀಡಬೇಕು.

ಬಜೆಟ್ ಮಂಡನೆಯಲ್ಲಿ ಕರ್ನಾಟಕದಲ್ಲಿ ರೈಲ್ವೆ ಅಭಿವೃದ್ಧಿಗೆ ಯಾವುದೇ ಕ್ರಮಕೈಗೊಂಡಿಲ್ಲದರ ಬಗ್ಗೆ ಪ್ರಸ್ತಾಪಿಸುತ್ತಾ ಆಂಧ್ರ ಮತ್ತು ಕರ್ನಾಟಕದ ಮಧ್ಯ ಓಡಾಡುತ್ತಿರುವ ಮೀಟರ್ ಗೇಜ್ ರೈಲುಗಳಾದ ಮಹಾಲಕ್ಷ್ಮಿ ಎಕ್ಸ್‌ಪ್ರೆಸ್, ಕಿತ್ತೂರ್ ಎಕ್ಸ್‌ಪ್ರೆಸ್ ಇತ್ಯದಿಗಳನ್ನು ಬ್ರಾಡ್ ಗೇಜಿಗೆ ಪರಿವರ್ತಿಸಬೇಕೆಂದು ಕೇಳಿಕೊಳ್ಳುತ್ತಾ, ರಾಯಲ ಸೇವೂ- ಉತ್ತರ ಕರ್ನಾಟಕ ಭಾಗದಲ್ಲಿ ಬಿಸಿಲು ಅತ್ಯಧಿಕವಾಗಿದ್ದು ಅದನ್ನು ಪ್ರಯಾಣಿಕರು ಸಹಿಸಲು ಕೆಲವು ಎ.ಸಿ ಕೋಚ್‌ಗಳನ್ನು ಹಾಕಬೇಕು.

ಕ್ಲಂಪ್ಲೆಂಟ್ ಪುಸ್ತಕದಲ್ಲಿ ಭಿಕ್ಷುಕರ ಹಾವಳಿಯ ಬಗ್ಗೆ ಬರೆದಿರುವ ವಿಷಯಗಳ ಬಗ್ಗೆ ಹೇಳುತ್ತಾ ರೈಲ್ವೆ ಪ್ಲಾಟ್‌ಫಾರಂಗಳಿಂದ ಭಿಕ್ಷುಕರನ್ನು ಹೊರಗಿಡಲು ಅಗತ್ಯ ಕ್ರಮ ಕೈಗುಳ್ಳಲು ಆಗ್ರಹಿಸಿದರು. ರೈಲ್ವೆ ಬೋಗಿಗಳನ್ನು ಕೊಡುವ ಕೆಳಗುಣಮಟ್ಟದ ಆಹಾರದ ಬಗ್ಗೆ ಮಾತನಾಡಿ ಆಹಾರದ ಬೆಲೆ ಹೆಚ್ಚಾದರೂ ಪರವಾಗಿಲ್ಲ ಅದರ ಗುಣಮಟ್ಟ ತುಂಬಾ ಕೆಳಹೋಗಬಾರದೆಂದು ಹೇಳಿ, ಒಳ್ಳೆಯ ಗುಣಮಟ್ಟದ ಆಹಾರ ಒದಗಿಸಬೇಕು.

ರೈಲ್ವೆ ಬೋಗಿಗಳಲ್ಲಿ ಮರದ ಹಲಗೆಗಳ ಬದಲು ಮಲಗಲು ಅನುಕೂಲವಾಗುವಂಥಾ ಕುಶನ್‌ಗಳನ್ನು ಒದಗಿಸಬೇಕೆಂದು ಮಾದರಿ ಸ್ಟೇಷಲ್ ಎಂದು ಹೆಸರಿಸಲಾದ ಬಳ್ಳಾರಿ ರೈಲ್ವೆ ನಿಲ್ದಾಣವನ್ನು ಅಭಿವೃದ್ಧಿಪಡಿಸಬೇಕೆಂದು ಹೇಳಿದರು.

ನಂತರ ಮಾತನಾಡುತ್ತಾ ಕಬ್ಬಿಣದ ಅದಿರು ಹೊಸಪೇಟೆ ಮೂಲಕ ಮದರಾಸಿಗೆ ರವಾನೆ ಮಾಡುವ ವ್ಯವಸ್ಥೆ ಸರಿಯಾಗಿಲ್ಲದಿರುವುದರ ಬಗ್ಗೆ ಮಾತನಾಡುತ್ತಾ ಹರಿಹರ- ಕಿತ್ತೂರು ರೈಲು ಶುರುಮಾಡಿದರೆ ಅದನ್ನು ಮಂಗಳೂರಿಗೆ ರವಾನೆ ಮಾಡಿ ಅದರಲ್ಲಿ ಸೂಕ್ತವಾಗಿ ಸರಬರಾಜು ಮಾಡಬಹುದು ಎಂದು ಹೇಳುತ್ತಾ, ರೈಲ್ವೆ ಇಲಾಖೆಗೂ ಇನ್ನು ಹೆಚ್ಚಿನ ಆದಾಯವನ್ನು ತಂದುಕೊಡುತ್ತದೆ. ಎಂಬುದನ್ನು ತಿಳಿಸಿದರು.

ಕೊನೆಯದಾಗಿ ಮರದ ಸ್ಲೀಪರ್‌ಗಳನ್ನು ಸಿಮೆಂಟಿನ ಸ್ಲೀಪರ್‌ಗಳಿಗೆ ಬದಲಾಯಿಸುತ್ತಿರುವುದನ್ನು ಶ್ಲಾಘಿಸಿ ಸಣ್ಣ ಮತ್ತು ಅತಿಸಣ್ಣ ಉದ್ಯಮದಾರರಿಂದ ಈ ಕೆಲಸ ಆಗುವಂತೆ ಮಾಡಿ ಸಣ್ಣ ಕೈಗಾರಿಕೋದ್ಯಮಿಯವರನ್ನು ಬೆಳೆಸಬೇಕು.

ಮಾರ್ಚ್ 16, 1988–89 10ನೇ ಲೋಕಸಭಾ ಅಧಿವೇಶನದಲ್ಲಿ ಶ್ರೀಮತಿ ಬಸವರಾಜೇಶ್ವರಿ ಅವರು ಅಂದು ಮಂಡಿಸಿದ ಬಜೆಟ್‌ಗೆ ಸ್ವಾಗತಕೋರುತ್ತ ಕೆಲವು ಸಲಹೆಗಳನ್ನು ಕೊಟ್ಟರು. ಅವು ಈ ರೀತಿಯಿದೆ.

"ರೈತರ ಪರವಾಗಿರುವ ಬಡವರ, ಮಧ್ಯಮ ವರ್ಗದ ಪ್ರತಿಯೊಬ್ಬರ ಮತ್ತು ಸಮಾಜದ ಎಲ್ಲವರ್ಗಗಳ ಪರವಾಗಿರುವ ಈ ಬಜೆಟ್‌ನಿಂದ ಸರ್ಕಾರದಿಂದಾಗುವ ಪ್ರಯೋಜನ ಎಲ್ಲರಿಗೂ ದೊರೆಯಬೇಕೆಂಬುದೇ ತಮ್ಮ ಮಹತ್ವಾಕಾಂಕ್ಷೆಯಾಗಿದೆ.

ಹೊಸ ಯೋಜನೆಗಳಾದ – ಜಲಧಾರ, ಕುಟೀರ ಜ್ಯೋತಿ, ಕಿಸಾನ್ ವಿಕಾಸಪತ್ರಗಳು ಇತ್ಯಾದಿ ಯೋಜನೆಗಳು ಮುಖ್ಯವಾಗಿ ರೈತರನ್ನು ಪ್ರೋತ್ಸಾಹಿಸಲೆಂದೇ ಅಧಿಕ ರಿಯಾಯಿತಿ ದರದಲ್ಲಿ ಲಭ್ಯವಾಗಲಿವೆ. ರೈತರ ಸಾಲದ ಬಡ್ಡಿ ಮನ್ನಾ ಮಾಡಬೇಕು. ಪಂಪ್‌ಸೆಟ್‌ಗಳಿಗೆ ಪವರ್ ಕಡಿತಗೊಳಿಸದೆ ವಿದ್ಯುತ್ ಒದಗಿಸಬೇಕು. ರೈತರು ಬೆಳೆದ ಬೆಳೆಗೆ ಸರಿಯಾದ ಬೆಲೆ ದೊರೆಯುವಂತಾಗಬೇಕು. ತಮ್ಮ ಹೊಲ ಹಸನಗೊಳಿಸಿಕೊಳ್ಳಲು ಮತ್ತು ವರ್ಷಕ್ಕೆ ಎರಡು ಬೆಳೆ ತೆಗೆಯಲು ಹೆಚ್ಚು ಭೂಮಿ ಹೊಂದಿದ ರೈತರಿಗೆ ಅಲ್ಲ: ಕಡಿಮೆ ಭೂಮಿ ಹೊಂದಿರುವ ರೈತರಿಗೂ ವ್ಯವಸಾಯೋಕರಣ, ಟ್ರಾಕ್ಟರ್ ದೊರೆಯುವಂತಾಗಬೇಕು ಒಳ್ಳೆಯ ಬೀಜ ಔಷಧಿಯನ್ನು ಒದಗಿಸಬೇಕು. ವ್ಯವಸಾಯ ಕ್ಷೇತ್ರದಲ್ಲಿ ಸಂಶೋಧನೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನೂ ಕೊಟ್ಟಿಲ್ಲ; ವಿಜ್ಞಾನಿಗಳು ವ್ಯವಸಾಯಕ್ಷೇತ್ರದಲ್ಲಿ ಉತ್ಪಾದನೆ ಹೆಚ್ಚಿಸುವ ಸಂಶೋಧನೆಯಲ್ಲಿ ತೊಡಗುವಂತೆ ಪ್ರೇರೆಪಿಸಬೇಕು" ಎಂದು ಸಲಹೆಯಿತ್ತರು

"ಉಕ್ಕಿನ ಉತ್ಪಾದನೆ ವೆಚ್ಚವನ್ನು ಕಡಿಮೆಗೊಳಿಸಬೇಕು. ಸಣ್ಣ ಕೈಗಾರಿಕೆಗಳ ಅಭಿವೃದ್ಧಿಯಾಗಬೇಕು. ಪ್ರಾಕೃತಿಕ ಸಂಪನ್ಮೂಲಗಳಾದ ನೀರು, ಭೂಮಿ, ಮತ್ತು ಖನಿಜಗಳನ್ನು ಸರಿಯಾದ ರೀತಿಯಲ್ಲಿ ನಾವು ಉಪಯೋಗಿಸಿಕೊಳ್ಳುತ್ತಿಲ್ಲ. ನೀರನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ಲಕ್ಷಗಟ್ಟಲೆ ಎಕರೆ ಭೂಮಿ ಬಂಜರಾಗಿದೆ.

ಬಡತನ ನಿರ್ಮೂಲನೆಯ ಯೋಜನೆಯಲ್ಲಿ ಅಪಾರವಾದ ಹಣವನ್ನು ತೊಡಗಿಸಲಾಗಿದೆ. ಆದರೆ ಆ ಹಣ ಅವಶ್ಯಕತೆ ಇರುವ ಜನಗಳಿಗೆ ಲಭ್ಯವಾಗದೆ, ಎಲ್ಲಾ ಹಂತದಲ್ಲಿ ಹಣ ಸೋರಿಹೋಗುತ್ತಿದೆ. ಎಲ್ಲೆಲ್ಲಿ ಈ ಯೋಜನೆ ಜಾರಿಯಲ್ಲಿದೆಯೋ ಅಲ್ಲಲ್ಲಿ ಶಿಸ್ತಿನ ಎಚ್ಚರಿಕೆಕೊಡುವ ವ್ಯಕ್ತಿಯನ್ನು (ಓರೇಮಣಿ) ನೇಮಕ ಮಾಡುವುದರ ಮೂಲಕ ಲಂಚಕೋರತನವನ್ನು ತಡೆಗಟ್ಟಬಹುದಾಗಿದೆ. ಬಡತನ ತೊಲಗಿಸುವ ಈ ಯೋಜನೆಯನ್ನೂ ಯಶಸ್ವಿಗೊಳಿಸಬೇಕಾಗಿದೆ.

# 1988 ಲೋಕಸಭೆಯಲ್ಲಿ ರೈಲ್ವೆ ಬಜೆಟ್ ಕುರಿತು:

ನಾನು ಯಾವುದೇ ರೈಲು ನಿಲ್ದಾಣಕ್ಕೆ ಭೇಟಿ ಕೊಟ್ಟರೂ ಮೊದಲು ಮಾಡುವ ಕೆಲಸವೇನೆಂದರೆ ದೂರು ದಾಖಲಾತಿ ಪುಸ್ತಕ ನೋಡುವುದು, ಬಹುಪಾಲು ದೂರುಗಳು ರೈಲು ವಿಳಂಬ, ಅಸ್ವಚ್ಛತೆ, ಭದ್ರತಾ ಲೋಪ ಮತ್ತು ಕಳಪೆ ಆಹಾರ ಪೂರೈಕೆಯ ಬಗ್ಗೆ ದಾಖಲಾಗಿರುತ್ತವೆ. ಇವೆಲ್ಲಕ್ಕೂ ಹೆಚ್ಚಾಗಿ ಇನ್ನೊಂದು ಭಿಕ್ಷುಕರ ಕಾಟದ ಬಗ್ಗೆ ಪ್ರಯಾಣಿಕರಿಂದ ಪದೇ ಪದೇ ದೂರುಗಳು ಬಂದಿವೆ. ಇದೊಂದು ಗಂಭೀರ ಸಮಸ್ಯೆ. ನಾನು ಯಾವಾಗ ಭೇಟಿಕೊಟ್ಟರೂ ಭಿಕ್ಷುಕರ ಕಿರುಕುಳ ತಪ್ಪದೇ ಗಮನಿಸುತ್ತೇನೆ. ರೈಲು ನಿಲ್ದಾಣಗಳು ಅಸ್ವಚ್ಛತೆಯಿಂದ ಗಬೆದ್ದು ಕುಳಿತಿದೆ. ಭಿಕ್ಷುಕರು ಭಿಕ್ಷಾಟನೇಯಷ್ಟೆ ಮಾಡುವುದಿಲ್ಲ ಸಮಯ ಸಿಕ್ಕರೆ ಅವರು ಕಳ್ಳತನ ಕೂಡ ಮಾಡುತ್ತಾರೆ. ಆದ್ದರಿಂದ ಮಾನ್ಯ ಸಚಿವರು ಈ ಬಗ್ಗೆ ತಕ್ಷಣ ಗಮನ ಹರಿಸಿ ಭಿಕ್ಷುಕರ ಕಾಟದಿಂದ ರೈಲು ನಿಲ್ದಾಣಗಳನ್ನು ಮುಕ್ತಗೊಳಿಸಬೇಕು.

ಸ್ವಚ್ಛತೆ ವಿಷಯದಲ್ಲೂ ಕೂಡ ರೈಲು ನಿಲ್ದಾಣಗಳಲ್ಲಿ ತೀವ್ರ ನಿರ್ಲಕ್ಷಣ ಎದ್ದು ಕಾಣುತ್ತದೆ. ಪ್ರಸ್ತುತ ಸ್ವಚ್ಛತೆ ವಿಷಯಲ್ಲಿ ನಾವು ಕೈಗೊಂಡಿರುವ ಕ್ರಮ ಏನಕ್ಕು ಸಾಲದು, ಸ್ವಚ್ಛತೆಗಾಗಿ ನಾವು ನೇಮಿಸಿರುವ ಕೆಲಸಗಾರರು ಮೈಗಳ್ಳತನ ತೋರುತ್ತಿದ್ದು ಅದಕ್ಕಾಗಿ ಖರ್ಚು ಮಾಡುತ್ತಿರುವ ಹಣ ಹೊಳೆಯಲ್ಲಿ ಹೋಮ ಮಾಡಿದಂತಾಗುತ್ತಿದೆ. ರೈಲು ನಿಲ್ದಾಣಗಳ ಅಸ್ವಚ್ಛತೆಯಿಂದಾಗಿ ಸುತ್ತ ಮುತ್ತಲಿನ ಪ್ರದೇಶ ಸೇರಿ ಪರಿಸರ ಮಾಲಿನ್ಯಕ್ಕೆ ತುತ್ತಾಗಿವೆ.

ಆಹಾರ ಗುಣಮಟ್ಟ ನಿರೀಕ್ಷಿತ ಪ್ರಮಾಣದಲ್ಲಿ ಇಲ್ಲ ಅನ್ನುವುದರ ಬಗ್ಗೆ ಈಗಾಗಲೇ ಮಾನ್ಯ ಸದಸ್ಯರುಗಳು ಪ್ರಸ್ತಾಪ ಮಾಡಿದ್ದಾರೆ. ರೈಲಿನಲ್ಲಿ ನೀವು ಪೂರೈಸುವ ಆಹಾರ ಶುದ್ಧವಾಗಿರಬೇಕು. ಅದಕ್ಕಾಗಿ ಒಂದಿಷ್ಟು ಹೆಚ್ಚಿಗೆ ಹಣ ಪಡೆದರೂ ಅಡ್ಡಿಯಿಲ್ಲ. ಒಟ್ಟಾರೆ ಆಹಾರ ಉತ್ತಮ ಗುಣಮಟ್ಟದ್ದಾಗಿರಬೇಕು. ಸದ್ಯ ಪೂರೈಕೆಯಾಗುತ್ತಿರುವ ಆಹಾರ ಗುಣಮಟ್ಟ ಎಂತದ್ದು? ನಾನು ಗಮನಿಸಿದ ಪ್ರಕಾರ ತಿನ್ನಲು ಅಯೋಗ್ಯವಾದ ಆಹಾರ VIP ಗಳು ಹೊದರೆ ಪೂರೈಕೆಯಾಗುವ ಆಹಾರವೇ ಬೇರೆಯಾಗಿರುತ್ತದೆ. ಆದರ ಪ್ರತಿಬಾರಿಯೂ VIP ಗಳು ಬೋಗಿಗಳ ಭೇಟಿ ಕೊಡಲು ಸಾಧ್ಯವಿಲ್ಲ. ಇಂತಹ ಲೆಕ್ಕಾಚ್ಚಾರಗಳೆಲ್ಲ ಬದಿಗಿರಿಸಿ ಬೋಗಿಗಳಲ್ಲಿ ಪೂರೈಕೆಯಾಗುವ ಆಹಾರ ಗುಣಮಟ್ಟ ಶಾಶ್ವತವಾಗಿ ಸುಧಾರಿಸಲು ಕ್ರಮ ಕೈಗೊಳ್ಳಬೇಕಿದೆ. ಅಷ್ಟಕ್ಕೂ ಪೂರೈಕೆಯಾಗುತ್ತಿರುವ ಆಹಾರ ಹತ್ತಾರು ಬಗೆಯದ್ದೇನು ಅಲ್ಲ. ಕೇವಲ ಎರಡು ಬಗೆಯದ್ದು ಮಾತ್ರ. ಒಂದು ಉತ್ತರ ಭಾರತ ಶೈಲಿ, ಇನ್ನೊಂದು ದಕ್ಷಿಣ ಭಾರತ ಶೈಲಿಯದ್ದು. ಆದರೆ ಇದನ್ನು ಮೀರಿ ಪ್ರಯಾಣಿಕರು ಬಯಸುವ ಯಾವುದೇ ಶೈಲಿಯ ಆಹಾರ ವಿಧಾನ ಸುಲಭವಾಗಿ ದೊರಕುವಂತಿರಬೇಕು. ಈ ಬಗ್ಗೆ ಕೂಡ ಗಮನ ಹರಿಸುವ ಅಗತ್ಯವಿದೆ.

ದ್ವಿತೀಯ ದರ್ಜೆ ಮೀಸಲು ಆಸನಗಳ ಬಗ್ಗೆ ಮಾನ್ಯ ಸಚಿವರು ನನ್ನ ಅನಿಸಿಕೆಗಳನ್ನು ಸಮ್ಮತಿಸುವರು ಎಂಬ ನಂಬಿಕೆ ನನಗಿದೆ. ಈ ಆಸನಗಳಲ್ಲಿ ವ್ಯವಸ್ಥೆ ಬದಲಾಗಬೇಕಿದೆ. ಬರಿ ಕಟ್ಟಿಗೆಯಿಂದ ಕೂಡಿರುವ ಆಸನಗಳಿಗೆ ಕುಶನ್ ಹೊದಿಕೆ ಅಳವಡಿಸಬೇಕು. ಮೈ ಚುಚ್ಚು ಕಟ್ಟಿಗೆ ಆಸನಗಳ ಮೇಲೆ ಪ್ರಯಾಣಿಕರು ಮಲಗಿಕೊಳ್ಳುವುದಾದರೂ ಹೇಗೆ? ದ್ವಿತಿಯ ದರ್ಜೆ ಬೋಗಿಗಳಲ್ಲಿ ಪ್ರಯಾಣಿಕರು ಅದು ಹೇಗೆ ಪ್ರಯಾಣಿಸುತ್ತಾರೆ ಅನ್ನುವುದನ್ನು ತಿಳಿದುಕೊಳ್ಳುವ ಸಲುವಾಗಿ ಒಂದು ಬಾರಿ ಬಾರಿ ಅಂತಹ ಬೋಗಿಯಲ್ಲಿ ಪ್ರಯಾಣ ಮಾಡಿದೆ. ಆಪಾರ ಕಟ್ಟಿಗೆ ಹೊದಿಕೆಯ ಆಸನಗಳ ಮೇಲೆ, ಎಷ್ಟು ಪ್ರಯತ್ನಿಸಿದರೂ ನನಗೆ ನಿದ್ರೆ ಬರಲಿಲ್ಲ. ಅದೊಂದು ಪ್ರಯಾಸಕರ ಪ್ರಯಾಣ ಆದ್ದರಿಂದ ಗಟ್ಟಿಗೆಯ ಆಸನಗಳನ್ನು ಶೀಘ್ರವೇ ಕುಶಾನ್ ಹೊದಿಕೆಗಳಾಗಿ ಪರಿವರ್ತಿಸಬೇಕು.

ನನ್ನ ಕ್ಷೇತ್ರದ ಬಳ್ಳಾರಿ ರೈಲು ನಿಲ್ದಾಣವನ್ನು ಮಾದರಿ ನಿಲ್ದಾಣಗಳ ಪೈಕಿ ಒಂದು ಎಂದು ಗುತಿಸಲಾಗಿದೆ ಆದರೆ ಈ ನಿಟ್ಟಿನಲ್ಲಿ ಇದುವರೆಗೆ ಯಾವುದೇ ಕೆಲಸ ಆಗಿಲ್ಲ. ಅದಕ್ಕಾಗಿ ಬಿಡುಗಡೆಯಾಗಿರುವ ಹಣ ಕೂಡ ವ್ಯಯ ಮಾಡಿಲ್ಲ. ಅದಕ್ಕೆ ಅನುಮತಿ ಕೂಡ ದೊರಕಿಲ್ಲ. ವೇಳಾಪಟ್ಟಿಯಾ ಪ್ರಕಾರ 1980 ರ ವೇಳೆಗೆ ಮೊದಲ ಹಂತದ ಯೋಜನೆ ಪೂರ್ಣಗೊಳ್ಳಬೇಕಿತ್ತು. ಆದರೆ ಇನ್ನೂ ಕೆಲಸವೇ ಮುಂದುವರೆದಿಲ್ಲ.

ರಾತ್ರಿ ವೇಳೆಯ ಹಂಪಿ ಎಕ್ಸ್‌ಪ್ರೆಸ್ ಆರಂಭಿಸದ್ದಾಕ್ಕಾಗಿ ಮಾನ್ಯ ಸಚಿವರನ್ನು ನಾನು ಅಭಿನಂದಿಸುತ್ತೇನೆ ಆದರೆ ಬೋಗಿಗಳು ಸರಿಯಿಲ್ಲ. ಅವುಗಳಲ್ಲಿ ಪ್ರಯಾಣ ಮಾಡುವುದು ದುಸ್ತರ. ಆದ್ದರಿಂದ ತಕ್ಷಣವೇ ಬೋಗಿ ಬದಲಾವಣೆ ಆಗಬೇಕಿದೆ. ಬ್ರಾಡ್ ಗೇಜ್ ಪ್ಲಾಟ್ ಫಾರಂ ಪರಿವರ್ತನೆಯಾಗಬೇಕು. ಆದ್ದರಿಂದ ಮಾನ್ಯ ಸಚಿವರು ಬ್ರಾಡ್‌ಗೇಜ್ ಫ್ಲಾಟ್‌ಫಾರಂ ಶಿಲ್ಟರ್ಸ್ ಪೂರೈಸಲು ತಕ್ಷಣವೇ ಕ್ರಮ ಕೈಗೊಳ್ಳಬೇಕೆಂದು ಕೇಳಿಕೊಳ್ಳತ್ತೇನೆ.

ಉದ್ದೇಶಿತ ಮಾದರಿ ನಿಲ್ದಾಣ ಯೋಜನೆ ಕಾಲ ಮಿತಿಯೊಳಗಡೆ ಪೂರ್ಣಗೊಳ್ಳುವಂತೆ ಸಚಿವರು ಗಮನ ಹರಿಸಬೇಕು.

ನಾನು ಪ್ರತಿಬಾರಿ ಮಾತಾಡಿದಾಗಲು ಹರಿಹರ ಕೊಟ್ಟೂರು ಮಾರ್ಗದ ಬಗ್ಗೆ ಒತ್ತಾಯಿಸುತ್ತಾ ಬಂದಿದ್ದೇನೆ. ಈ ಬಗ್ಗೆ ಬೇಡಿಕೆ ಮುಂದಿಟ್ಟಗಾಲೆಲ್ಲಾ ಮಾನ್ಯ ಸಚಿವರು ಅದು ಸೂಕ್ತ ಅಲ್ಲ ಎನ್ನುವ ಉತ್ತರ ಲಭಿಸಿದೆ. ಆದರೆ ನಾನೀಗ ಅದು ಸೂಕ್ತ ಅನ್ನುವುದನ್ನು ಸದನದ ಗಮನಕ್ಕೆ ತರಲು ಇಚ್ಛಿಸುತ್ತೇನೆ. ರೈಲ್ವೆ ಇಲಾಖೆಗೆ ಬಳ್ಳಾರಿ ಆಪಾರ ಆದಾಯವನ್ನು ತಂದುಕೊಡುತ್ತಿದೆ. ಈ ಮಾರ್ಗವಾಗಿಯೇ ಮಂಗಳೂರಿಗೆ ಕಬ್ಬಿಣದ ಅದಿರಿ ದೊರೆಯುತ್ತಿವೆ ಅಲ್ಲಿಂದ ಅದನ್ನು ಮದ್ರಾಸಿಗೆ ಸಾಗಿಸಲಾಗುತ್ತಿದ್ದು ಇದರಿಂದ ರೈಲ್ವೆ ಸಾಕಷ್ಟು ಆದಾಯ ಗಳಿಸುತ್ತಿದೆ. ಆದರೆ ಸದ್ಯ ಈಗ ಇರುವ ರೈಲು ವ್ಯವಸ್ಥೆ ಅದಿರು ಸಾಗಾಣಿಗೆ ಸಾಕಾಗುತ್ತಿಲ್ಲ. ಇದರ ಫಲ ಶೃತಿಯಾಗಿ ಅಪಾರ ಪ್ರಮಾಣದ ಅದಿರು ರೈಲ್ವೆ ಜಂಕ್ಷನ್‌ಗಳಲ್ಲಿ ಸಂಗ್ರಹ ಗೊಂಡಿದೆ. ಹರಿಹರ ಕೊಟ್ಟೂರು ರೈಲು ಮಾರ್ಗ ಪೂರ್ಣಗೊಂಡರೆ

ಅಲ್ಲಿ ಸಂಗ್ರಹಗೊಂಡಿರುವ ಕಬ್ಬಿಣದ ಅದಿರು ಮಂಗಳೂರು ಬಂದರಿಗೆ ಸಾಗಾಣೆ ಮಾಡಲು ಅನುಕೂಲವಾಗುತ್ತದೆ. ಆದ್ದರಿಂದ ಮಾನ್ಯ ಸಚಿವರು ಈ ಮಾರ್ಗ ಕುರಿತು ಪಡೆದಿರುವ ವರದಿಯನ್ನು ಮರು ಪರಿಶೀಲಿಸಿ ಸಕಾರಾತ್ಮಕ ನಿಲುವು ತಳೆಯ ಬೇಕೆಂದು ಮನವಿ ಮಾಡುತ್ತೇನೆ. ಜೊತೆಗೆ ಹುಬ್ಬಳ್ಳಿ ಮಾರ್ಗವಾಗಿ ಸಾಗುವ ಬೆಂಗಳೂರು–ಮಿರಜ್ ರೈಲು ಮಾರ್ಗ ಪರಿವರ್ತನೆಗೆ ಒಳಪಡಿಸುವ ಅಗತ್ಯವಿದೆ. ಬೆಂಗಳೂರಿನಲ್ಲಿ ಪ್ರತ್ಯೇಕ ಸೌತ್– ವೆಸ್ಟರ್ನ್ ರೈಲ್ವೆ ವಲಯ ಸ್ಥಾಪಿಸುವ ಅಗತ್ಯವಿದೆ. ಬೆಂಗಳೂರಿನಲ್ಲಿ ಪ್ರತ್ಯೇಕ ವಲಯ ಸ್ಥಾಪಿಸಬೇಕೆನ್ನುವುದು ಕನ್ನಡಿಗರೆಲ್ಲರ ಒತ್ತಾಸೆಯಾಗಿದೆ.

ಮಾನ್ಯ ಉಪ ಸಭಾಧ್ಯಕ್ಷರು ಮಾತು ಮುಗಿಸಲು ಸೂಚಿಸಿದ್ದಾರೆ. ಈ ನಿಟ್ಟಿನಲ್ಲಿ ಕೊನೆಯ ಒಂದು ಅಂಶ ಪ್ರಸ್ತಾಪಿಸಿ ಮಾತು ಮುಗಿಸುತ್ತೇನೆ. ಕಟ್ಟಿಗೆ ಸನಗಳ ಬದಲಿಗೆ ಸಿಮೆಂಟು ಆಸನಗಳನ್ನು ಅಳವಡಿಸಲು ಮಾನ್ಯ ಅವರು ಉದ್ದೇಶಿಸಿದ್ದಾರೆಂದು ಭಾವಿಸಿದ್ದೇನೆ. ಮರಮುಟ್ಟುಗಳು ಇತ್ತೀಚಿನ ದಿನಗಳಲ್ಲಿ ದುಬಾರಿ ಎನಿಸಿರುವುದರಿಂದ ಸಿಮೆಂಟು ಆಸನದ ಬಗ್ಗೆ ಯೋಚಿಸಿರುವುದು ಸೂಕ್ತ. ಜೊತೆಗೆ ಸಿಮೆಂಟ್ ಘಟಕಗಳು ಅಭಿವೃದ್ಧಿಗೊಳ್ಳಲು ಇದು ನೆರವಾಗುತ್ತದೆ. ಈ ವಿಷಯದಲ್ಲಿ ಸಣ್ಣ ಮತ್ತು ಅತಿ ಸಣ್ಣ ಸಿಮೆಂಟು ಉದ್ಯಮಗಳಿಗೆ ಆದ್ಯತೆ ನೀಡಬೇಕಿದೆ. ಇಷ್ಟು ಸಲಹೆಗಳೊಂದಿಗೆ ರೈಲ್ವೆ ಬಜೆಟ್‌ಗೆ ಬೆಂಬಲ ಸೂಚಿಸಿ ಮಾತು ಮುಗಿಸುತ್ತೇನೆ.

ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ):

## ಮಂಗಳೂರಿನಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಪರಿಷ್ಕರಣಾ ಮತ್ತು ಪೆಟ್ರೊ ಕೆಮಿಕಲ್ಸ್ ಯೋಜಬೆಗೆ ಅನುಮತಿ ನೀಡುವ ಕುರಿತು.

ಮಾನ್ಯರೇ ಕರ್ನಾಟಕ ರಾಜ್ಯದ ಪೂರ್ವ ಕರಾವಳಿ ತೀರದ ಮಂಗಳೂರಿನಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಪರಿಷ್ಕರಣಾ ಮತ್ತು ಪೆಟ್ರೊ ಕೆಮಿಕಲ್ಸ್ ಯೋಜನೆ ಬಹುದಿನಗಳಿಂದ ನೆನೆಗುದಿಗೆ ಬಿದ್ದಿದೆ. ಭಾರತ ಸರ್ಕಾರ ಇದರ ಆರಂಭವನ್ನು 1980ರಲ್ಲಿಯೇ ಮಾಡಿತ್ತು.

ಯೋಜನೆಯ ಕುರಿತು 1989ರ ಏಪ್ರಿಲ್ ತಿಂಗಳಿನಲ್ಲಿಯೇ MRPZ ಭಾರತ ಸರ್ಕಾರಕ್ಕೆ ವರದಿ ನೀಡಿದೆ. ಭಾರತ ಸರ್ಕಾರ ಮತ್ತು ಯೋಜನೆಗೆ ಸಂಬಂದಿಸಿದ ಮುಖ್ಯಸ್ಥರ ನಡುವಿನ ಒಪ್ಪಂದಕ್ಕೆ 1989 ರ ಜುಲೈ ತಿಂಗಳಿನಲ್ಲಿಯೇ ಅಂತಿಮ ಅನುಮತಿ ಯೋಜನ ಜಾರಿ ಸಂಸ್ಥೆ ಪರಿಷ್ಕರಣಾ ಘಟಕಕ್ಕೆ ಸಂಬಂಧಿಸಿದಂತೆ ಉನ್ನತ ತಂತ್ರಜ್ಞಾನ ವ್ಯವಸ್ಥೆ ಬಳಸಿಕೊಂಡು ಕಾರ್ಯ ಜಾರಿಗೆ ಸಿದ್ಧಗೊಂಡಿದೆ. ಈ ಯೋಜನೆಗೆ ಅನುಮತಿ ದೊರೆತ ದಿನಾಂಕದಿಂದ 42 ತಿಂಗಳ ಒಳಗೆ ಪೂರ್ಣಗೊಳಿಸುವ ಬದ್ಧತೆಯನ್ನು MRPZ ಸಾದರಪಡಿಸಿದೆ. ಆದ್ದರಿಂದ ಸರ್ಕಾರ ಈ ವಿಚಾರದಲ್ಲಿ ತುರ್ತಿನ ಕ್ರಮ ಕೈಗೊಳ್ಳಬೇಕೆಂದು ನಾನು ಸ್ಪಷ್ಟ ಮನವಿ ಮಾಡುತ್ತೇನೆ.

# ಸಚಿವರ ಭಾಷಣ

## ಸಚಿವೆಯಾಗಿ ಸ್ಟ್ಯಾಂಡಿಂಗ್ ಕಮೀಟಿಗೆ ಉತ್ತರ ನೀಡಿದ ದೀರ್ಘಭಾಷಣ

ಶ್ರೀಮತಿ ಬಸವರಾಜೇಶ್ವರಿ (ಮಾನವ ಸಂಪನ್ಮೂಲ ಅಭಿವೃದ್ಧಿ ಖಾತೆ ಸಚಿವರು)
(ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ)

**ಮಾನ್ಯ ಸಭಾಧ್ಯಕ್ಷರೆ,**

ಸರ್, ಈ ಸಂದರ್ಭದಲ್ಲಿ ಅತ್ಯುತ್ತಮ ಸಲಹೆ ನೀಡಿ ನೀಡಿದ್ದಕ್ಕಾಗಿ ಮೊದಲು ಸ್ಟಾಂಡಿಂಗ್ ಕಮೀಟಿಯ ಗೌರವಾನ್ವಿತ ಸದಸ್ಯರನ್ನು ಅಭಿನಂದಿಸಲು ಇಚ್ಛಿಸುತ್ತೇನೆ. ಚರ್ಚಾ ಸಂದರ್ಭದಲ್ಲಿ ರಚನಾತ್ಮಕ ಸಲಹೆ–ಸೂಚನೆಗಳನ್ನು ಮುಂದಿಟ್ಟ ಕಮೀಟಿಯ ಸದಸ್ಯರನ್ನು ಮತ್ತೊಮ್ಮೆ ಹೃತ್ಪೂರ್ವಕವಾಗಿ ವಂದಿಸುತ್ತೇನೆ. ಅವರಿಗೆ ನೀಡಿದ ಸಲಹೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದೇನೆ. ಮಹಿಳ ಮತ್ತು ಮಕ್ಕಳ ಕಲ್ಯಾಣ ಬಗ್ಗೆ ಅವರು ಅಪಾರ ಕಳಕಳಿ ವ್ಯಕ್ತಪಡಿಸಿದ್ದಾರೆ. ಅವುಗಳಲ್ಲಿ ಕೆಲವು ಸಲಹೆಗಳಿಗೆ ನಾನಿಲ್ಲಿ ಪ್ರತಿಕ್ರಿಯೆ ನೀಡಲು ಇಚ್ಚಿಸುತ್ತೇನೆ.

1993–94 ರ ಸಾಲಿನಲ್ಲಿ ನಾವು ಕೈಗೊಂಡ ಹಲವು ಪ್ರಗತಿಪರ ಕಾರ್ಯಕ್ರಮಗಳ ಬಗ್ಗೆ ನಾನು ಮೊದಲು ಪ್ರಸ್ತಾಪಿಸಲು ಇಚ್ಛಿಸುತ್ತೇನೆ. ಇವುಗಳಲ್ಲಿ ಪ್ರಮುಖ ಕಾರ್ಯಕ್ರಮ ಎಂದರೆ ಇಲಾಖೆ ಕಾರ್ಯಕ್ರಮ. ಇದು 33 ಪ್ರಮುಖ ಯೋಜನೆಗಳೊಂದಿಗೆ 1975–76ರಲ್ಲಿ ಆರಂಭಗೊಂಡಿತು. ಅಲ್ಲಿಂದ ಇಲ್ಲಿವರೆಗೆ ಸಾಗಿ ಬಂದ ದಾರಿ ಅಮೋಘ. ಸದ್ಯ ನಮ್ಮ ಇಲಾಖೆಯಲ್ಲಿ 3.3.78 ಯೋಜನೆಗಳಿವೆ. ಅವುಗಳಲ್ಲಿ ವಿಶ್ವ ಬ್ಯಾಂಕ್ ನೆರವಿನ ಯೋಜನೆಗಳ ಜೊತೆಗೆ ರಾಜ್ಯ ನೆರವಿನ ಯೋಜನೆಗಳು ಸೇರಿವೆ. ರೂ 1.61 ಲಕ್ಷ ಮಕ್ಕಳನ್ನು ಹಾಗೂ ಗರ್ಭಿಣಿಯರನ್ನು ಒಳಗೊಂಡಂತೆ 32 ಲಕ್ಷ ಮಹಿಳೆಯರನ್ನು ತನ್ನ ವ್ಯಾಪ್ತಿಗೆ ಸೇರಿಕೊಂಡಿದೆ. ಈ ಮಹತ್ವದ ಕಾರ್ಯಕ್ರಮವನ್ನು ಇನ್ನಷ್ಟು ವಿಸ್ತರಿಸುವ ಉದ್ದೇಶ ಹೊಂದಿದ್ದೇವೆ. ಈ ನಿಟ್ಟಿನಲ್ಲಿ ಸ್ಟ್ಯಾಂಡಿಂಗ್ ಉಪಯುಕ್ತ ಸಲಹೆ ಮುಂದಿಟ್ಟಿದೆ. ಆದರೆ ಈ ಯೋಜನೆಯ ವಿಸ್ತರಣೆ ಉದ್ದೇಶಕ್ಕೆ ನಮಗೆ, 8 ನೇ ಯೋಜನೆಯಲ್ಲಿ 1166.27 ಕೋಟಿ ರೂ. ಅಗತ್ಯವಾಗಿದೆ. ರಾಜ್ಯ ಸರ್ಕಾರಗಳು ಕೂಡ ಈ ನಿಟ್ಟಿನಲ್ಲಿ ಸಾಕಷ್ಟು ಮುತುವರ್ಜಿ ವಹಿಸಿ.

ಪೌಷ್ಠಿಕ ಆಹಾರ ಪೂರೈಕೆಗಾಗಿ ಸರ್ಕಾರಗಳು 1279.96 ಲಕ್ಷ ರೂಪಾಯಿಗಳನ್ನು ಈಗಾಗಲೇ ವ್ಯಯ ಮಾಡಿವೆ. ಪೌಷ್ಠಿಕ ಆಹಾರ ಪೂರೈಕೆಗಾಗಿ ಕಳೆದ ವರ್ಷ ನಾವು ಅನುಮತಿ ಪಡೆದಿದ್ದೇವೆ. ಅದೇ ಸಾಲಿನಲ್ಲಿ 300 ಯೋಜನೆಗಳಿಗೆ ಅನುಮತಿ ದೊರೆತಿದೆ. ಈ ವರ್ಷ ಕೂಡ ಹೆಚ್ಚುವರಿ 300 ಯೋಜನೆಗಳನ್ನು ಜಾರಿಗೊಳಿಸುವ ನಮ್ಮ ಉದ್ದೇಶಕ್ಕೆ ಮಾನ್ಯತೆ ಲಭಿಸಿದೆ. ಕಳೆದ ವರ್ಷದ ಯೋಜನೆಗಳಿಗೆ ಈಗಾಗಲೇ ಹಣ ಬಿಡುಗಡೆಯಾಗಿದೆ. ಸಂಬಂಧ ಪಟ್ಟ ರಾಜ್ಯಗಳಿಗೆ ಹಣ ಹಂಚಿಕೆ

ಕಾರ್ಯ ಕೂಡ ಪೂರ್ಣಗೊಂಡಿದೆ. ಈ ಸಂಬಂಧ ಯೋಜನೆಯ ಜವಾಬ್ದಾರಿ ಹೊತ್ತಿರುವ ಅಧಿಕಾರಿಗಳಿಗೆ ನಾನು ಪತ್ರ ಕೂಡ ಬರೆದಿದ್ದೇನೆ.

**ಸಹಕಾರ ಮತ್ತು ಸಂಯೋಜನೆ:** ಯೋಜನೆ ಜಾರಿಯಲ್ಲಿ ಸೂಕ್ತ ಸಹಕಾರ–ಸಂಯೋಜನೆ ಕುರಿತು ಪ್ರಸ್ತಾಪ ಮಾಡಿದೆ. ಈ ಪ್ರಸ್ತಾಪವನ್ನು ನಾನು ಅನುಮೋದಿಸುತ್ತೇನೆ. ಐಸಿಡಿಎಸ್ ಕಾರ್ಯಕ್ರಮಗಳ ಜಾರಿಯಲ್ಲಿ ಸರಿಯಾದ ಸಹಕಾರ–ಸಂಯೋಜನೆ ಖಂಡಿತ ಅಗತ್ಯ ಇದೆ. ಪಂಚಾಯ್ತಿ ಚುನಾವಣೆಯ ಬಳಿಕ ಈ ನಿಟ್ಟಿನಲ್ಲಿ ಗಮನ ಹರಿಸಾಗುವುದು. ಪಂಚಾಯ್ತಿಗಳಿಗೆ ಚುನಾಯಿತರಾದ ಮಹಿಳೆ ಸದಸ್ಯರನ್ನು ವಿಶ್ವಾಸಕ್ಕೆ ತೆಗೆದು ಕೊಂಡು, ಯೋಜನೆ ಅಡಿಯಲ್ಲಿ ಬರುವ ಅಂಗನವಾಡಿ ಕಾರ್ಯಕರ್ತರ ಮೇಲೆ ಉಸ್ತುವಾರಿ ನೇಮಿಸಲಾಗುವುದು. ಈ ನಿಟ್ಟಿನಲ್ಲಿ ನಾವು ಈಗಾಗಲೇ 'ಬಾಲ ವಿಕಾಸ ಸಮಿತಿ'ಗಳನ್ನು ರಚಿಸಿದ್ದೇವೆ. ಈ ಸಮಿತಿಗಳು ಅಂಥ ಕಾರ್ಯಕ್ರಮಗಳ ಮೇಲೆ ನಿಗಾ ವಹಿಸುತ್ತಿದೆ. ಫಲಾನುಭಿಗಳ ಆರೋಗ್ಯ, ಪೌಷ್ಟಿಕ ಸೇರಿದಂತೆ ಹಲವು ಅಂಶಗಳ ಬಗ್ಗೆ ಉತ್ತಮ ರೀತಿಯ ಉಸ್ತವಾರಿ ನಿರ್ವಹಿಸಲಾಗುತ್ತದೆ. ಈ ಕುರಿತು ನಾವು ಮಾಸಿಕ ಮತ್ತು ತ್ರೈ ಮಾಸಿಕ ವರದಿ ಸಹ ತರಿಸಿಕೊಳ್ಳುತ್ತಿದ್ದೇವೆ. ಈ ವಿಷಯಲ್ಲಿ ಯಾವುದೇ ಲೋಪಕ್ಕೆ ಅವಕಾಶವಾಗದ ರೀತಿಯಲ್ಲಿ ಐಸಿಡಿಎಸ್ ಕಾರ್ಯಕ್ರಮದ ಮೇಲೆ ಸಮಗ್ರ ಉಸ್ತುವಾರಿ ಮಾಡಲಾಗುತ್ತದೆ. ಜೊತೆಗೆ ಒಂದು ಪಂಚಾಯ್ತಿ ರಾಜ್ ಸಂಸ್ಥೆಗಳು ರಚನೆಯಾಗಿ ಕಾರ್ಯನಿರ್ವಹಿಸತೊಡಗಿದರೆ, ಮಹಿಳ ಸದಸ್ಯೆಯರು ಎಲ್ಲಾ ಬಾಲ ವಿಕಾಸ ಸಮಿತಿಗಳ ಉಸ್ತುವಾರಿಯನ್ನು ತಮ್ಮ ಸುಪಾರ್ಧಿಗೆ ತೆಗೆದುಕೊಳ್ಳಲಿದ್ದಾರೆ. ಅಗ ಇದರ ಕಾರ್ಯ ನಿರ್ವಹಣೆ ಇನ್ನಷ್ಟು ಭದ್ರಗೊಳ್ಳಲಿದೆ.

**ಸಾರ್ಕ್ ನಿಯೋಗ:** ಎರಡನೆಯದ್ದಾಗಿ, ಪ್ರಸ್ತಾಪಿಸಲು ಇಚ್ಛಿಸುವ ಸಮಿತಿ ಎಂದರೆ ಸಾರ್ಕ್ ನಿಯೋಗ ಕುರಿತದ್ದು. ಹೆಣ್ಣು ಮಗುವಿನ ರಕ್ಷಣೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ನಾವು ಸಾರ್ಕ್ ನಿಯೋಗದೊಂದಿಗೆ ಒಪ್ಪಂದ ಮಾಡಿಕೊಂಡಿದ್ದೇವೆ. ಇದೇವೇಳೆ, ಹೆಣ್ಣು ಮಗುವಿನ ಅಭಿವೃದ್ಧಿ ನಿಟ್ಟಿನಲ್ಲಿ ರಾಷ್ಟ್ರೀಯ ಕಾರ್ಯಯೋಜನೆಯೊಂದನ್ನು ಸಹ ರೂಪಿಸಿದ್ದೇವೆ. ಜೊತೆಗೆ ಇನ್ನು ಹಲವು ಕಾರ್ಯಕ್ರಮಗಳು ರೂಪಿತಗೊಂಡಿವೆ. ಇದರಲ್ಲಿ ವಯಸ್ಕ ಬಾಲಕಿಯರ ಕಾಳಜಿ ಕುರಿತ ಕಾರ್ಯಕ್ರಮ ಮುಖ್ಯವಾದುದಾಗಿದೆ. ಇದು ಈಗಾಗಲೇ 507 ಬ್ಲಾಕ್‌ಗಳಲ್ಲಿ ಆರಂಭಗೊಂಡಿದೆ. 2 ಲಕ್ಷಕ್ಕೂ ಹೆಚ್ಚಿನ ಬಾಲಕಿಯರು ಇದರ ಲಾಭ ಪಡೆಯುತ್ತಿದ್ದಾರೆ. ನಾವು ಅವರಿಗೆ ಒಳ್ಳೆಯ ಪೌಷ್ಟಿಕ ಆಹಾರ ಮತ್ತು ಉದ್ಯೋಗ ಆಧಾರಿತ ಶಿಕ್ಷಣ ನೀಡುತ್ತಿದ್ದೇವೆ. ಅವರನ್ನು ಒಂದು ಹಂತಕ್ಕೆ ಬೆಳಸಿದ ನಂತರ ಮರಳಿ ಬಡ್ಡಿ ಹಣ ಸ್ಪಷ್ಟ ಆಗುತ್ತದೆ. ಅದರ ಆಧಾರದ ಮೇಲೆ ನಾವು ಹೆಚ್ಚಿನ ಶಿಶುವಿಹಾರಗಳನ್ನು ಆರಂಭಿಸುತ್ತೇವೆ. ಶಿಶುವಿಹಾರಗಳನ್ನು ಆರಂಭಿಸುವ ಸಂದರ್ಭದಲ್ಲಿಯೇ ನಾವು ಶೇಕಡ 40 % ರಷ್ಟು ಅಂಗನವಾಡಿಗಳನ್ನು ಶಿಶುವಿಹಾರ ಕೇಂದ್ರಗಳನ್ನಾಗಿ ಪರಿವರ್ತಿಸುತ್ತೇವೆ. ಇದರಿಂದ ನಮ್ಮ ಅಂಗನವಾಡಿಗಳು ಲಾಭ ಪಡೆಯುತ್ತೇವೆ.

ಕೆಲವು ಸದಸ್ಯರು ಬಾಲವಾಡಿ ಪೌಷ್ಠಿಕಾಂಶಗಳ ಕಾರ್ಯಕ್ರಮ (B.N.P) ದ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ನವ (B.N.P) ಯನ್ನು ನಿಲ್ಲಿಸಲು ಹೆಚ್ಚಿಸುವುದಿಲ್ಲ. ಇದುವರೆಗೆ ಅವುಗಳನ್ನು ರಕ್ಷಿಕೊಂಡು ಬಂದ ರೀತಿಯಲ್ಲಿಯೇ ಮುಂದುವರೆಸಿಕೊಂಡು ಹೋಗಲಾಗುವುದು B.N.P ಗೆ ಅಗತ್ಯವಾದ ಒಂದಿಷ್ಟು ಹಣವನ್ನು ಕೂಡ ಒದಗಿಸಲಾಗುವುದು. ಶಿಶುವಿಹಾರ ಕಾರ್ಯಕ್ರಮ ಕೂಡ ಈ ವರ್ಷದಲ್ಲಿ ಅಭಾದಿತವಾಗಿ ಮುಂದೆವರೆದುಕೊಂಡು ಹೋಗಲಿದೆ.

ಇನ್ನು ಕೆಲವು ಸದಸ್ಯರು ರಾಷ್ಟ್ರೀಯ 'ಮಹಿಳಾ ಕೋಶದ ಬಗ್ಗೆ ಪ್ರಸ್ತಾಪಿಸಿದ್ದಾರೆ. ಇದೊಂದು ನೂತನ ಕಾರ್ಯಕ್ರಮ. ರಾಷ್ಟ್ರೀಯ ಮಹಿಳಾ ಕೋಶ. ಸ್ವರೂಪ ರಹಿತ ಕ್ಷೇತ್ರಗಳಲ್ಲಿ ದುಡಿಯುವ ಮಹಿಳೆಗೆ ಹಣಕಾಸಿನ ನೆರವು ನೀಡುತ್ತದೆ. ತರಕಾರಿ ಮಾರುವವರು, ನೇಕಾರರು, ಮೀನು ಮಾರಾಟಗಾರರು ಮೊದಲಾದವರು ಈ ಕ್ಷೇತ್ರದ ವ್ಯಾಪ್ತಿಗೆ ಸೇರುತ್ತಾರೆ. ಇಂತಹ ಸ್ವರೂಪ ರಹಿತ ಕ್ಷೇತ್ರಗಳಲ್ಲಿ ದುಡಿಯುವವರಿಗೆ ಬ್ಯಾಂಕುಗಳಿಂದ ಸಾಲ ಲಭಿಸುವುದು ಕಷ್ಟ ಸಾಧ್ಯ. ಒಂದು ವೇಳೆ ಸಾಲ ಲಭಿಸಿದರೂ ಒಪ್ಪಿದರ ಭಾರಿ ದುಬಾರಿಯದ್ದಾಗಿರುತ್ತದೆ. ಈ ಸಾಲ ನೀಡುವಾಗ ಓರ್ವ ವ್ಯಕ್ತಿಯನ್ನು ಜವಬ್ದಾರನನ್ನು ಗುರುತಿಸುವ ಬಗ್ಗೆ ನಾವಿ ಚಿಂತನೆ ನಡೆಸಿದ್ದೇವೆ. ಕಳೆದ ವರ್ಷ ನಾವು ಭಾರತ ಸರ್ಕಾರದಿಂದ 31 ಕೋಟಿ ರೂಪಾಯಿಗಳನ್ನು ಪಡೆದ್ದಿದ್ದೇವೆ. ಆ ಮೊತ್ತವನ್ನು ಬ್ಯಾಂಕ್‌ನಲ್ಲಿ ಠೇವಣಿ ಇರಿಸಿ ಅದರ ಮೇಲೆ ಬಡ್ಡಿ ಪಡೆದ್ದಿದ್ದೇವೆ. ಬಂದ ಬಡ್ಡಿ ಹಣದಿಂದ ನಮ್ಮ NGOಗಳ ಮೂಲಕ ರಾಷ್ಟ್ರೀಯ ಮಹಿಳಾ ಕೋಶವನ್ನು ಮುನ್ನಡೆಸಿದ್ದೇವೆ. ಇಂತಹ ಕಾರ್ಯಕ್ರಮಗಳನ್ನು ಅತುತ್ತಮ ರೀತಿಯಲ್ಲಿ ನಿರ್ವಹಿಸಿಕೊಂಡು ಹೋಗುವ ಅನೇಕ ಗಳು ನಮ್ಮ ದೇಶದಲ್ಲಿವೆ. ಈ ಮಾದರಿಯ ಕಾರ್ಯಕ್ರಮಗಳನ್ನು ನೆನಸಿದ ಅನುಭವ ಮತ್ತು ತಜ್ಞತೆ ಈ NGO ಗಳಿಗೆ ಇದೆ. ನಾವು ರಾಷ್ಟ್ರೀಯ ಮಹಿಳಾ ಕೋಶ ಕಾರ್ಯಕ್ರಮದ ಜವಾಬ್ದಾರಿ ವಹಿಸಿ ಕೊಡುವ ಮುನ್ನ ಸಂಬಂದಿತ ಕಾರ್ಯ ಕ್ಷೇತ್ರದಲ್ಲಿ ಕನಿಷ್ಟ 3 ವರ್ಷ ಅನುಭವ ಪಡೆದ (NGO) ಗಳಿಗೆ ಆಧ್ಯತೆ ನೀಡಿದ್ದೇವೆ.

ಅವರಿಗೆ (NGO) ನಾವು ಶೇಕಡ 7 ರ ದರದಲ್ಲಿ ಸಾಲ ನೀಡುತ್ತೇವೆ. ಅವರು ಅಗತ್ಯವಿರುವ ವ್ಯಕ್ತಿಯನ್ನು ಗುರುತಿಸಿ ಶೇಕಡ 12 ರ ಬಡ್ಡಿದರದಲ್ಲಿ ಸಾಲ ಒದಗಿಸುತ್ತವೆ. ಅಲ್ಪಾವಧಿ ಮತ್ತು ಮಧ್ಯಮಾವದಿ ಸಾಲವನ್ನು ನೀಡುವ ವ್ಯವಸ್ಥೆಯಿದೆ. ಕ್ರಮವಾಗಿ 15 ತಿಂಗಳು ಮತ್ತು 3 ವರ್ಷದೊಳಗೆ ಮರು ಪಾವತಿ ಮಾಡಬೇಕಾಗುತ್ತದೆ. ಈ ಕಾರ್ಯಕ್ರಮ ದೇಶದಲ್ಲಿ ಉತ್ತಮ ರೀತಿಯಲ್ಲಿ ನಡೆದುಕೊಂಡು ಹೋಗುತ್ತದೆ. ಕೋಶ ಸಮರ್ಥ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತದೆ. ಈ ಕಾರ್ಯಕ್ರಮ ರಾಷ್ಟದ 37,000 ಮಹಿಳೆಯರನ್ನು ಈಗಾಗಲೇ 1993–94 ರ ಸಾಲಿನಲ್ಲಿ 4.29 ಕೋಟಿ ರೂಪಾಯಿ ಈ ಮೂಲಕ ಬಿತ್ತರಿಸಲಾಗಿದೆ. 93–94 ರಲ್ಲಿ 8 ಕೋಟಿ ರೂಪಾಯಿ ಬಿತ್ತರಿಸುವ ಯೋಜನೆ ಹಾಕಿಕೊಂಡಿದ್ದವು. ಆದರೆ ಹಲವು ಎಡರು–ತೊಡರುಗಳಿಂದಾಗಿ ಹಾಕಿಕೊಂಡ ಗುರಿ ಮುಟ್ಟಲು ಸಾಧ್ಯವಾಗಲಿಲ್ಲ. ವೈಫಲ್ಯವಲ್ಲದ ಪ್ರಮುಖ ಕಾರಣ ಎಂದರೆ ಈ ಕಾರ್ಯಕ್ರಮ ಆರಂಭಗೊಂಡಿದ್ದು ಇತ್ತೀಚಿನ ದಿನಗಳಲ್ಲಿ ನೂಂದಾವಣೆ ಮತ್ತಿತ್ತರ ಕಾರ್ಯಗಳಿಗೆ ಕಾಲಾವಕಾಶದ

ಕೊರತೆ ಕಾಡಿತ್ತು. ಇತ್ತೀಚಿನ ದಿನಗಳಲ್ಲಿ ನಾವು ಮಹಿಳಾ ಅಭಿವೃದ್ಧಿ ಸಂಸ್ಥೆಯಂತಹ ಚಿಕ್ಕ ಪುಟ್ಟ ಸಂಘಟನೆಗಳನ್ನು ಸೇರಿಕೊಂಡಿದ್ದೇವೆ. ಇಂತಹ ಸಂಘಟನೆಗಳು ಕೂಡ ರಾಷ್ಟ್ರೀಯ ಮಹಿಳಾ ಕೋಶದಿಂದ ಆ ರೀತಿಯ ಹಣ ಪಡೆಯ ಬಹುದಾಗಿದೆ. ಕೆಲವರು ರಾಷ್ಟ್ರೀಯ ಮಹಿಳಾ ಕೋಶದ ಮೊತ್ತ ಪ್ರಮಾಣವನ್ನು ಯಾಕೆ ಹೆಚ್ಚಿಸುತ್ತಿಲ್ಲವೆಂದು ಕೇಳಿದ್ದಾರೆ. ಆದರೆ ಪ್ರಸ್ತುತ ಈ ಮೊತ್ತದಲ್ಲಿ ಹೆಚ್ಚಳ ಮಾಡುವ ಅಗತ್ಯ ನನಗೆ ಕಾಣಿಸಿಲ್ಲ.

ಮಹಿಳಾ ಸಮೃದ್ಧಿ ಯೋಜನೆ ಕುರಿತು ಕಮಿಟಿ ಎರಡನೇಯ ಮಹತ್ವದ ಶಿಫಾರಸ್ಸು ಮಾಡಿದೆ. ನಮ್ಮ ಪ್ರಧಾನ ಮಂತ್ರಿಗಳು ಇತ್ತೀಚೆಗೆ ತಾನೆ ಈ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಮಹಿಳೆ ತನ್ನ ಸಂಪಾದನೆಯಲ್ಲಿ ಒಂದಿಷ್ಟು ಹಣವನ್ನು ಉಳಿತಾಯ ಮಾಡಲು ಈ ಕಾರ್ಯಕ್ರಮ ನೆರವಾಗುತ್ತದೆ. ಯಾವುದೇ ಮೂಲದಿಂದ ಪಡೆದ ಲಾಭಾಂಶದ ಒಂದಷ್ಟು ಮೊತ್ತವನ್ನು ಉಳಿತಾಯ ಮಾಡಬಹುದಾಗಿದೆ. ಈ ದಾರಿಯಲ್ಲಿ ಉಳಿತಾಯ ಮಾಡುವ ಮಹಿಳೆ ಅಂಚೆ ಕಛೇರಿಗಳಿಂದ ಪಾಸ್‌ಬುಕ್ಕನ್ನು ಪಡೆಯಬೇಕಾಗುತ್ತದೆ. ದೇಶದಲ್ಲಿ 1.32 ಲಕ್ಷ ಅಂಚೆ ಕಛೇರಿಗಳಿವೆ. ಅವು ಕಾರ್ಯಕಾರಿ ಸಂಸ್ಥೆಗಳು. ನಮ್ಮದು ಉಸ್ತುವಾರಿ ಮಾತ್ರ ಅವು ಪಾಸ್‌ಬುಕ್ ಮತ್ತು ಅರ್ಜಿಗಳನ್ನು ವಿತರಿಸಬಹುದಾಗಿದೆ. ಕಮಿಟಿಯಲ್ಲಿ ನಾವು ಆ ಅರ್ಜಿಗಳ ಬಗ್ಗೆ ಹೇಳಿದ್ದೇವೆ. ಠೇವಣಿ ಇರಿಸದ ಹೊರತು ತಳಮಟ್ಟದ ವ್ಯವಸ್ಥೆಯಲ್ಲಿ ಪಾಸ್‌ಬುಕ್‌ಗಳನ್ನು ವಿತರಿಸುವುದು ಅಸಾಧ್ಯ. ಈ ಬಗ್ಗೆ ಆರಂಭದಲ್ಲಿ ಪೋಸ್ಟ್ ತರಬೇತಿ ನೀಡುವುದು ಸಾಧ್ಯವಾಗಿಲ್ಲ. ಇದೀಗ ಆ ನಿಟ್ಟಿನಲ್ಲಿ ಹಲವರನ್ನು ತರಬೇತುಗೊಳಿಸಲಾಗುತ್ತಿದೆ. ಹಣವನ್ನು ಪೋಸ್ಟ್ ಮಾಸ್ಟರ್ ಜನರಲ್ ಅವರಿಗೆ ನೀಡಲಾಗುತ್ತದೆ. ಅವರು ಅಗತ್ಯದ ಅರ್ಜಿ ಮತ್ತು ಪಾಸ್ ಬುಕ್ಕುಗಳನ್ನು ಮುದ್ರಿಸುತ್ತಾರೆ. ಮುದ್ರಿತ ಅರ್ಜಿ ಮತ್ತು ಪಾಸ್ ಬುಕ್ಕುಗಳನ್ನು ತಳಮಟ್ಟದ ಎಲ್ಲಾ ಅಂಚೆ-ಕಛೇರಿಗಳಿಗೆ ಹಂಚಲಾಗುತ್ತದೆ. ಈ ಯೋಜನೆ ಹಣ ಠೇವಣಿ ಇರಿಸಬಹುದಾಗಿದೆ. ಈ ಕಾರ್ಯಕ್ರಮದಲ್ಲಿ ನಿಷೇಧಿತ ವಲಯಗಳ ಮಹಿಳೆಯರನ್ನು ಸೇರಿಸಿಕೊಳ್ಳಬಾರದೇಕೆ ಎಂಬ ಸಲಹೆ ಕೂಡ ಬಂದಿದೆ. ಪ್ರಸ್ತುತ ನಾವು ನಗರ ಪ್ರದೇಶಗಳಲ್ಲಿ ಈ ಯೋಜನೆಯನ್ನು ಪರಿಚಯಿಸುತ್ತಿಲ್ಲ. ಆದ್ದರಿಂದ ನಿಷೇಧಿತ ವಲಯಗಳೆಂದು ಕರೆಸಿಕೊಂಡಿರುವ ಕೊಳಚೆ ಪ್ರದೇಶಗಳನ್ನು ಇರುವ ವ್ಯಾಪ್ತಿಗೆ ಒಳಪಡಿಸುವ ಪ್ರಮೇಯ ಉಂಟಾಗಿಲ್ಲ. ಆದಾಗ್ಯೂ ನಾವು ಈ ಕುರಿತು ಸಮಿತಿ ಮಾಡಿರುವ ಶಿಫಾರಸನ್ನು ನಾವು ಗಣನೆಗೆ ತೆಗೆದುಕೊಳುತ್ತೇವೆ.

ದುಡಿಯುವ ಮಹಿಳೆಯರ ಹಾಸ್ಟೆಲ್ ಕುರಿತು ಯಾವುದೇ ಸಲಹೆಯನ್ನು ಸ್ವೀಕರಿಸಲು ನಾವು ಸಿದ್ಧರಿದ್ದೇವೆ. ಪ್ರಸಕ್ತ 687 ದುಡಿಯುವ ಮಹಿಳೆಯರ ಹಾಸ್ಟೆಲ್‌ಗಳನ್ನು ನಾವು ಆರಂಭಿಸಿದ್ದೇವೆ. ಸಾವಿರಾರು ಮಹಿಳೆಯರು ಈ ಹಾಸ್ಟೆಲ್‌ಗಳ ಲಾಭ ಪಡೆಯುತ್ತಿದ್ದಾರೆ. ಈ ಉದ್ದೇಶಕ್ಕಾಗಿ ಮೀಸಲಾಟ್ಟಿರುವ ಹಣದಲ್ಲಿ ನಾವು ಅಂತ 20,000 ಮಹಿಳೆಯರಿಗೆ ಈ ವರ್ಷ ಹಾಸ್ಟೆಲ್ ಸೌಲಭ್ಯ ಒದಗಿಸಬಹುದಾಗಿದೆ. ಆದರೆ ಬೇಡಿಕೆ ಇದಕ್ಕೂ ಮೀರಿದ ದೊಡ್ಡ ಪ್ರಮಾಣದ್ದಾಗಿದೆ. ಹಾಸ್ಟೆಲ್ ನಿರ್ಮಾಣಕ್ಕಾಗಿ ಮೀಸಲಿಟ್ಟಿರುವ ರೂ. 75 ರಷ್ಟು ಹಣದಲ್ಲಿ ರೂ. 50 ರಷ್ಟನ್ನು ನೀಡಲಿದ್ದೇವೆ. ಒಂದು

ತಲೆಗೆ 40,000 ರೂಪಾಯಿಗಳನ್ನು ನೀಡುತ್ತಿದ್ದೇವೆ. ಆದರೆ ಈಗ ಅಗತ್ಯ ವಸ್ತುಗಳ ಬೆಲೆ ದುಬಾರಿಯಾಗಿರುವುದರಿಂದ ಈ ಹಣ ಯಾವುದಕ್ಕೆ ಸಾಕಾಗುತ್ತಿಲ್ಲವೆಂದು ಎಲ್ಲರು ಅಪಸ್ವರವೆತ್ತಿದ್ದಾರೆ. ದೊಡ್ಡ ನಗರಗಳ ಭೂಮಿಯ ಬೆಲೆ ಗಮನದಲ್ಲಿಟ್ಟು ಕೊಂಡು ನೋಡುವುದಾದರೆ ಈ ಹಣದಲ್ಲಿ ಹಾಸ್ಟೆಲ್ ಆರಂಭಿಸುವುದು ದುಸ್ತರ. ಈ ನಿಟ್ಟಿನಲ್ಲಿ ನಗರದ ಕೆಲವು ಉತ್ತಮ ಸಂಸ್ಥೆಗಳು ಮತ್ತು NGO ಗಳು ಜವಾಬ್ದಾರಿವಹಿಸಲು ಇದುವರೆಗೆ ಮುಂದೆ ಬಂದಿಲ್ಲ. ಈ ವರ್ಷ 30ಕ್ಕೂ ಹೆಚ್ಚು ಹೊಸ ಹಾಸ್ಟೆಲ್‌ಗಳನ್ನು ಆರಂಭಿಸಿದ್ದೇವೆ. ಬೇಡಿಕೆ ಬಂದರೆ ಇನ್ನಷ್ಟು ಹಾಸ್ಟೆಲ್‌ಗಳನ್ನು ತೆರೆಯಲು ಸಿದ್ಧರಿದ್ದೇವೆ.

ಮಹಿಳೆಯರ ಹಾಸ್ಟೆಲ್ ಸೌಲಭ್ಯವನ್ನು ಮೂರು ವರ್ಷಗಳಿಂದ ಐದು ವರ್ಷಗಳವರೆಗೆ ವಿಸ್ತರಿಸಬೇಕೆಂಬ ಬೇಡಿಕೆ ಬಂದಿದೆ. ಈ  ಕುರಿತು ನಾನು ಸದನಕ್ಕೆ ಸ್ಪಷ್ಟ ಪಡಿಸುವುದೇನೆಂದರೆ 500 ರೂಪಾಯಿವರೆಗೆ ಆದಾಯ ಇರುವ ಮಹಿಳೆಯರು ತಮ್ಮ ಹಾಸ್ಟೆಲ್ ವಾಸದ ಅವಧಿಯನ್ನು ಮೂರು ವರ್ಷಗಳಿಂದ ಐದು ವರ್ಷದವರೆಗೆ ಮುಂದುವರೆಸ ಬಹುದಾಗಿದೆ. ಇನ್ನೂ ಕೆಲವು ಪ್ರಕರಣಗಳಲ್ಲಿ ಈ ಅವಧಿಯಲ್ಲಿ ಇನ್ನಷ್ಟು ವಿಸ್ತರಣೆ ಮಾಡಬಹುದಾಗಿದೆ. ಯಾಕೆಂದರೆ ಕೆಲವು ಮಹಿಳೆಯರ ಕುಟುಂಬದ ಸದಸ್ಯರು ದೇಶದ ಬೇರೆ ಬೇರೆ ಕಡೆ ಕೆಲಸ ಮಾಡುವ ಅನಿವಾರ್ಯತೆ ಉಂಟಾದಾಗ ಭದ್ರತೆ ಸಮಸ್ಯೆ ತಲೆದೋರುವುದು ಸಹಜ ಅಂತಹ ಸಂದರ್ಭಗಳಲ್ಲಿ ಹಾಸ್ಟೆಲ್ ಅವಧಿಯ ವಿಸ್ತರಣೆ ಅಗತ್ಯ ಎನಿಸುತ್ತದೆ, ಈ ಕಆರಣಕ್ಕಾಗಿ ನಾನು ದುಡಿಯುವ ಮಹಿಳೆಯರ ಹಾಸ್ಟೆಲ್ ವಿಷಯದಲ್ಲಿ ಹೆಚ್ಚಿನ ಆದ್ಯತೆ ನೀಡಲು ಹೆಚ್ಚಿಸುತ್ತೇನೆ.

'ಇಂದಿರಾ ಮಹಿಳಾ ಯೋಜನೆ'. ಇದರ ಬಗ್ಗೆ ಕೆಲವು ಸದಸ್ಯರು ಕಾಳಜಿ ವ್ಯಕ್ತ ಪಡಿಸಿದ್ದಾರೆ. ಇಂದಿರಾ ಮಹಿಳಾ ಯೋಜನೆಯನ್ನು ಆದಷ್ಟು ಶೀಘ್ರ ಆರಂಭಿಸಲು ನಾವು ಬದ್ಧರಾಗಿದ್ದೇವೆ. ಈ ನಿಟ್ಟಿನಲ್ಲಿ ಕಳೆದ ಮೂರು ವರ್ಷಗಳಿಂದ ಪ್ರಯತ್ನ ಸಾಗಿದೆ. ಈ ಯೋಜನೆಯನ್ನು ನಾವು ಒಂದೇ ಸ್ಥಾಯಿ ಸ್ವರುಪದಡಿ ತರಲು ಇಚ್ಚಿಸಿದ್ದೇವೆ. ಆದರೆ ಅನೇಕ ಸಚಿವಾಲಯಗಳಿಂದ ವಿರೋಧ ವ್ಯಕ್ತವಾಗಿದೆ. ಈಗ ನಾವು ಕೊನೆ ಪಕ್ಷ ಈ ಕಾರ್ಯಕ್ರಮಕ್ಕೆ ತಿಳುವಳಿಕೆ ಮತ್ತು ಆದಾಯ ಮೂಲ ಕಲ್ಪಿಸುವಂತೆ ನಿರ್ಧಾರ ತೆಗೆದುಕೊಳ್ಳಬೇಕಾಗಿದೆ. ಈ ವರ್ಷ ಯೋಜನೆ ಜಾರಿಗೋಳಿಸುವ ನಿಟ್ಟಿನಲ್ಲಿ ಸಿದ್ಧಾಗಿರಿವ ನಮಗೆ ಕನಿಷ್ಠ ಪಕ್ಷ 200 ಬ್ಲಾಕ್‌ಗಳನ್ನು ನೀಡುವಂತೆ ಯೋಜನಾ ಆಯೋಗಕ್ಕೆ ಕೇಳಿಕೊಂಡಿದ್ದೇವೆ. ಆದರೆ ಇದುವರೆಗೆ ಯೋಜನಾ ಆಯೋಗದಿಂದ ನಮ್ಮ ಪ್ರಸ್ತಾವನೆಗೆ ಸ್ಪಷ್ಟನೆ ದೊರೆತಿಲ್ಲ. ಉದ್ದೇಶಿತ ಯೋಜನೆಗೆ ಎಂಟು ಕೋಟಿ ರೂ. ನೀಡುವಂತೆ ಕೇಳಾಲಾಗಿದೆ. ಆದಷ್ಟು ಶೀಘ್ರ ಮಂಜೂರಾತಿ ಪಡೆದು ಯೋಜನೆ ಜಾರಿಗೊಳಿಸುವ ಭರವಸೆ ಇರಿಸಿಕೊಂಡಿದ್ದೇನೆ.

ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯ ಪ್ರಕರಣಗಳು ಹೆಚ್ಚಾಗುತ್ತಾ ನಡೆದಿವೆ. ಅಮಳೆಯ ಮೇಲೆ ಅತ್ಯಾಚಾರ, ದೌರ್ಜನ್ಯ ಪ್ರಕರಣಗಳು ನಡೆಯುತ್ತಿರುವ ಬಗ್ಗೆ ದಿನ ನಿತ್ಯ ನಾವು ಪತ್ರಿಕೆಗಳಲ್ಲಿ ಬಿಡುತ್ತಿದ್ದೇವೆ. ಈ ಹಿನ್ನೆಲೆಯಲ್ಲಿ ಸರಿ ಪಡಿಸಬೇಕಾದ ಹಲವಾರು ಕೆಲಸಗಳು ನಮ್ಮ ಮುಂದಿದೆ. ಮಹಿಳೆ ಮೇಲಿನ ದೌರ್ಜನ್ಯ ಪ್ರಕರಣಗಳನ್ನು ರಾಷ್ಟ್ರೀಯ ಮಹಿಳಾ ಆಯೋಗ

ನಿಭಾಯಿಸುತ್ತದೆ. ಕಾರ್ಯದ ಜೊತೆಗೆ ದಿನಗಳಿಗೆ ಅಗತ್ಯವಾದ ಕಾರ್ಯ ಕನಸುಗಳ ಬಗ್ಗೆಯೂ ಪರಿಶೀಲನೆ ನಡೆಸುತ್ತದೆ. ಆಯೋಗ ಈಗಾಗಲೇ ವರದಕ್ಷಿಣೆ ಮತ್ತು ವಸತಿ ಪದ್ಧತಿ ನಿರ್ಮೂಲನ ಕಾರ್ಯಕ್ಕೆ ತಿದ್ದುಪಡಿ ತರುವ ಕುರಿತು 14 ಶಿಫಾರಸ್‌ಗಳನ್ನು ಮಾಡಿದೆ. ಅಪರಾಧಿಗಳನ್ನು ದಂಡಿಸುವ ನಿಟ್ಟಿನಲ್ಲಿ ಯಾವುದು ಸೂಕ್ತ ತಿದ್ದುಪಡಿ ಎನಿಸಬಲ್ಲದು ಕುರಿತು ನಾವು ಈಗ ಪರಿಶೀಲನೆ ನಡೆಸಿದ್ದೇವೆ. ದೌರ್ಜನ್ಯ ಪ್ರಕರಣಗಳು ನಡೆದ ಬಗ್ಗೆ ಗಮನಕ್ಕೆ ಬಂದರೆ ತಕ್ಷಣವೇ ಮಹಿಳಾ ಆಯೋಗದ ಸದಸ್ಯರು ಅಲ್ಲಿಗೆ ಧಾವಿಸಿ ದೌರ್ಜನ್ಯಕ್ಕೊಳಗಾದವರಿಗೆ ಸಾಂತ್ವಾನ ನೀಡುತ್ತಾರೆ. ಮುಂದುವರೆದು ಆರೋಪಿಗಳ ಬಂಧನಕ್ಕೂ ಅವರು ಪೋಲಿಸರಿಗೆ ನೆರವು ನೀಡುತ್ತಾರೆ.

ಈ ದೌರ್ಜನ್ಯ ಪ್ರಕರಣಗಳು ಇಲ್ಲವಾಗ ಬೇಕಾದರೆ ತಿಳುವಳಿಕೆ ಒಂದೇ ಮಾನ ದಂಡ ಎನಿಸಬಹುದು ಪ್ರಕರಣಗಳಿಗೆ ಸಂಬಂಧಿಸಿದಂತೆ ಕಾನೂನು ಕ್ರಮಗಳ ಅರಿವು ಹೆಚ್ಚಿಸುವ ಉದ್ದೇಶದಿಂದ ಯೂನಿಫ್ ನೆರವಿನೊಂದಿಗೆ ವಿವಿಧ ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟನೆಗಳನ್ನು ಹೊರತರಲಾಗುತ್ತಿದೆ. ಈ ಪ್ರಕಟಣೆಗಳು ತಳಮಟ್ಟದ ಜನತೆಗೆ ತಲುಪಿಸುವ ಪ್ರಯತ್ನ ವೃದ್ಧಿ ಸಂಸ್ಥೆ ಮಾಹಿತಿ ರವಾನಿಸಲಾಗಿದೆ. ಕಾನೂನು ತಿಳುವಳಿಕೆ ಕುರಿತ ಪ್ರಕಟಣೆಗಳನ್ನು ಕೌಟುಂಬಿಕ ವಿವಾದ ಇತ್ಯಾರ್ಥ ಕೇಂದ್ರಗಳಿಗೂ ಹಂಚಲಾಗಿದೆ. ತಳಮಟ್ಟದ ಜನತೆಗೆ ಪ್ರಕಟನೆಗಳನ್ನು ತಲುಪಿಸುವ ನಿಟ್ಟಿನಲ್ಲಿ ಈ ಕೇಂದ್ರಗಳು ಕಾರ್ಯ ನಿರ್ವಹಿಸಲಿವೆ. ದೌರ್ಜನ್ಯಗಳ ಕುರಿತು ಮಹಿಳೆಯರಲ್ಲಿ ಸ್ಪಷ್ಟ ತಿಳುವಳಿಕೆ ಮೂಡಿದರೆ ಸಹಜವಾಗಿ ಅಂತ ಪ್ರಕರಣಗಳು ಕಡಿಮೆಯಾಗುತ್ತಾ ಹೋಗುತ್ತವೆ.

**ರಾಜಕೀಯ ಬಲೀಕರಣ:** ಈ ನಿಟ್ಟಿನಲ್ಲಿ ಸರ್ಕಾರ ಹಲವು ಕ್ರಮಗಳನ್ನು ಕೈಗೊಂಡಿದೆ. ಪ್ರಧಾನವಾಗಿ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ 33% ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿಡಲಾಗಿದೆ. ಈ ಮಹತ್ವದ ಮೀಸಲಾತಿ ಜಾರಿಗೆ ಸಂವಿಧಾನ ತಿದ್ದುಪಡಿ ತರುವ ಮೂಲಕ ಮಹಿಳೆ ಪರ ಒಲವು ತೋರಿದ ಮಾನ್ಯ ಪ್ರಧಾನ ಮಂತ್ರಿಗಳಾದ ಶ್ರೀ ನರಸಿಂಹರಾವ್ ಅವರನ್ನು ನಾವು ಅಭಿನಂದಿಸಲೇ ಬೇಕಾಗಿದೆ. ತಳ ಮಟ್ಟದ ವ್ಯವಸ್ಥೆಯಲ್ಲಿ ಮಹಿಳೆಯನ್ನು ತರಬೇತು ಮಾಡುವ ನಿಟ್ಟಿನಲ್ಲಿ ನಾವು ಪಂಚಾಯತಿರಾಜ್ ಸಂಸ್ಥೆಗಳಲ್ಲಿ ಮಹಿಳೆಯರನ್ನು ನೇಮಿಸಬೇಕಾದದ್ದು ನಮ್ಮ ಪ್ರಾಥಮಿಕ ಕರ್ತವ್ಯ ಎನಿಸಿದೆ. ಎಲ್ಲ ಮೂರು ಹಂತಗಳಲ್ಲಿ ಸರಿಯಾದ ತರಬೇತು ನೀಡದಿದ್ದರೆ ಅವರು ಸಮರ್ಥವಾಗಿ ಕಾರ್ಯನಿರ್ವಹಿಸುವುದು ಅಸಾಧ್ಯ, ಎನ್ನುವುದು ನನ್ನ ಅಭಿಪ್ರಾಯವಾಗಿದೆ. ಅದಕ್ಕಾಗಿ ನಾವು ತರಬೇತಿ ಕಾರ್ಯಕ್ರಮಗಳನ್ನು ಆರಂಭಿಸಿದ್ದೇವೆ. ಪಂಚಾಯತಿಗಳಿಗೆ ಆಂಚುನಾಯಿತರಾದ ಮಹಿಳೆಯರಿಗೆ ತರಬೇತಿ ನೀಡಲು ಮುಂದೆ ಬರುವ ಯಾವುದೇ (NGO) ಅಥವಾ ವಿಶ್ವ ವಿದ್ಯಾಲಯ ಅಥವಾ ಯಾವುದೇ ಸಂಸ್ಥೆಗೆ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯ 10,000– ರೂಗಳನ್ನು ನೀಡಲಾಗುವುದು. ಅಂತ ಮಂಡಳಿಗಳನ್ನು ಈಗಾಗಲೇ ರಚಿಸಲಾಗಿದ್ದು ಅವು ಕಾರ್ಯ ನಿರ್ವಹಿಸುತ್ತಿವೆ. ಜೊತೆಗೆ ನ್ಯಾಯ ಬೆಲೆ ಅಂಗಡಿ ಅಥವಾ ಡೈರಿ ಅಭಿವೃದ್ಧಿ ಕಾರ್ಪೋರೇಶನ್ ಅಥವಾ ಗ್ಯಾಸ್ ಏಜೆನ್ಸಿಗಳನ್ನು ಆರಂಭಿಸಲು ಉದ್ದೇಶಿಸಿದ್ದಾರೆ ಮಹಿಳೆಯರಿಗೆ

ಹೆಚ್ಚಿನ ಆದ್ಯತೆ ನೀಡುವಂತೆ ಸೂಚಿಸಿ ರಾಜ್ಯ ಸರ್ಕಾರಗಳಿಗೆ ನಾನು ಅನೇಕ ಬಾರಿ ಪತ್ರ ಬರೆದಿದ್ದೇನೆ. ಇದಕ್ಕೆ ಸ್ಪಂದಿಸಿ ಆಂಧ್ರ ಸರ್ಕಾರ ಸಕಾರಾತ್ಮಕ ಪ್ರತಿಕ್ರಿಯೆ ನೀಡಿದೆ. ಆ ಬಗ್ಗೆ ನನಗೆ ಸಂತಸ ಎನಿಸಿದೆ. ಕರ್ನಾಟಕ ಸರ್ಕಾರ ಕೂಡ ನ್ಯಾಯ ಬೆಲೆ ಅಂಗಡಿಗಳನ್ನು ಆರಂಭಿಸಿದರೆ ಕೆಳ ಹಂತದ ಮಹಿಳೆಯರಿಗೆ ಆದ್ಯತೆ ನೀಡುವುದಾಗಿ ಭರವಸೆ ನೀಡಿದೆ.

ಪೌಷ್ಠಿಕ ಸಮ್ಮಿಶ್ರಣ ಕುರಿತು 2ನೆಯ ಅಂಶ : ನ್ಯೂಟ್ರೇಷನ್ ನಮ್ಮ (I.C.D.S) ಕಾರ್ಯಕ್ರಮದ ಪ್ರಧಾನ ಭಾಗ. ಪೌಷ್ಠಿಕತೆಗೆ ಸಂಬಂಧಿಸಿದಂತೆ ನಮ್ಮ ಕಾರ್ಯಚಟುವಟಿಕೆಯನ್ನು ವಿಸ್ತರಿಸುವ ಉದ್ದೇಶವಿದೆ. ಇತ್ತೀಚಿನವರೆಗೆ ಹಲವು ರಾಜ್ಯ ಸರ್ಕಾರಗಳು 50 ಪೈಸೆ ದರದಲ್ಲಿ ಇನ್ನು ಕೆಲವು 60 ಪೈಸೆ ಉಳಿದ ಹಲವು 75 ಪೈಸೆ ದರದಲ್ಲಿ ಪೌಷ್ಠಿಕ ಆಹಾರ ಪೂರೈಸುತ್ತಿದ್ದುದು ತಿಳಿದು ಬಂದಿದೆ. ಒಂದು ದಿನಕ್ಕೆ ಒಂದು ಮಗುವಿನ 1 ರೂಪಾಯಿನ ಪೌಷ್ಠಿಕ ಆಹಾರ ಪೂರೈಸುತ್ತಿರುವ ರಾಜ್ಯಗಳಿಗೆ ಇನ್ನು ಮುಂದೆ ಯಾವುದೇ ಹೊಸ ಯೋಜನೆಗಳಿಗೆ ಅನುಮತಿ ನೀಡದಿರಲು ನಿರ್ಧರಿದ್ದೇವೆ. (I.C.D.S) ಕಾರ್ಯಕ್ರಮದಡಿಯಲ್ಲಿ ಮಗುವೊಂದಕ್ಕೆ 1 ರೂಪಾಯಿನ ಪೌಷ್ಠಿಕ ಆಹಾರ ಪೂರೈಸಲು ಅನೇಕ ರಾಜ್ಯಗಳು ಮುಂದೆ ಬಂದಿವೆ.

'ರಾಷ್ಟ್ರೀಯ ಮಹಿಳಾ ಸಂಪನ್ಮೂಲ ಕೇಂದ್ರ' ಮಹಿಳಾ ಸಬಲೀಕರಣ ದೃಷ್ಟಿಯಲ್ಲಿಟ್ಟುಕೊಂಡು ಈ ವರ್ಷ ನಾವು ರಾಷ್ಟ್ರೀಯ ಮಹಿಳಾ ಸಂಪನ್ಮೂಲ ಕೇಂದ್ರ ಆರಂಭಿಸಲು ಉದ್ದೇಶಿಸಿದ್ದೇವೆ. ಈಗಾಗಲೇ ನಾವು ಮಕ್ಕಳ ಸಂಶೋಧನೆ ಕೇಂದ್ರ ಆರಂಭಿಸಿದ್ದೇವೆ. ಇಲ್ಲಿ ಅಂಗನವಾಡಿ ಶಿಕ್ಷಕರುಗಳಿಗೆ ಮಕ್ಕಳ ನಿರ್ವಹಣೆ ಕುರಿತು ಸೂಕ್ತ ತರಬೇತಿ ನೀಡಲಾಗುತ್ತಿದೆ. ಇದೇ ಮಾದರಿಯಲ್ಲಿ ಮಹಿಳೆಯರ ಕುರಿತು ಆಳವಾದ ಅಧ್ಯಯನ ನಡೆಸಲು ಇಚ್ಛಿಸಿದ್ದೇವೆ. ಈ ವರ್ಷ ಆರಂಭಿಸಲು ಉದ್ದೇಶಿಸಿರುವ ಮಹಿಳಾ ರಾಷ್ಟ್ರೀಯ ಸಂಶೋಧನಾ ಕೇಂದ್ರ ಇದಕ್ಕೆ ನೆರವಾಗಲಿದೆ.

ನಿಮಗೆಲ್ಲಾ ಗೊತ್ತಿದೆ... ಇತ್ತೀಚೆಗೆ ನಾವು ಪ್ರಳಯಕಾರಿ ಭೂಕಂಪ ಎದುರಿಸಿದ್ದೇವೆ... ಆ ವೇಳೆ ಅನೇಕ ಅಂತರಾಷ್ಟ್ರೀಯ ಸಂಸ್ಥೆಗಳು ನಮ್ಮ ನೆರವಿಗೆ ಧಾವಿಸಿ ಬಂದಿದ್ದವು... ಅವು ಉದಾರ ಆರ್ಥಿಕ ನೆರವಿನ ಹಸ್ತ ಚಾಚಿದವು... ಲಾಥೋರೆಗೆ ತಜ್ಞ ಅಧಿಕಾರಿಗಳ ತಂಡ ಕಳುಹಿಸಿ ಕೊಟ್ಟವು. ಈ ದುರಂತದಲ್ಲಿ ಬಂಧು–ಬಾಂಧವರನ್ನು ಕಳೆದುಕೊಂಡು ಅನಾಥವಾದ ಮಕ್ಕಳಿಗಾಗಿ 135 ಶಿಶು ಸಂರಕ್ಷಣಾ ಕೇಂದ್ರಗಳನ್ನು ತೆರೆಯಲಾಯಿತು. ನಾವು ಕೂಡ ಅನಾಥರಾದ ಮಹಿಳೆಯರಿಗಾಗಿ ಅನಾಥಾ–ಶ್ರಮಗಳನ್ನು ಆರಂಭಿಸಿದ್ದೇವೆ. ಅವುಗಳ ನಿರ್ವಹಣೆಗಾಗಿ ನಾವು ಸಂಪನ್ಮೂಲ ಕ್ರೋಢಿಕರಿಸುವ ಕಾರ್ಯಕ್ರಮಗಳನ್ನು ಆರಂಭಿಸಿದ್ದೇವೆ. ಅನಾಥ ಮಕ್ಕಳ ಮತ್ತು ವಿಧವೆಯರ ಪೋಷಣೆಗಾಗಿ ವಿಶ್ವ ಬ್ಯಾಂಕ್ 6 ಕೋಟಿ ರೂಪಾಯಿ ಸಂತ್ರಸ್ತ ರಾಜ್ಯಕ್ಕೆ ನೀಡಲು ಮುಂದೆ ಬಂದಿದೆ. ಇಷ್ಟು ನಾವು ಆರಂಭಿಸಿರುವ ಕಾರ್ಯಕ್ರಮಗಳಾಗಿವೆ.

ಸಿಬಂದ್ಧಿ ಕೊರತೆ: ಸಭೆಯಲ್ಲಿ ಸಿಬ್ಬಂದಿ ಬಗ್ಗೆ ಪ್ರಸ್ತಾಪ ಮಾಡಲಾಗಿದೆ. ಕೈ ತುಂಬ ಕಾರ್ಯಕ್ರಮಗಳಿರುವಾಗ ಸಿಬ್ಬಂದಿ ಕೊರತೆ ಎದುರಾಗಿದೆ. ಅನ್ನುವುದು ಸಭೆಯ ಕೂಗು. ಇದನ್ನು ನಾನು ಒಪ್ಪುತ್ತೇನೆ. ಅನೇಕ ಕಾರ್ಯಕ್ರಮಗಳು ವಿಸ್ತರಿಸುತ್ತಿರುವ ಈ ಸಂದರ್ಭದಲ್ಲಿ ನಿಜಕ್ಕೂ ಸಿಬ್ಬಂದಿ ಕೊರತೆ ಗಂಭೀರ ಸ್ವರೂಪದ್ದಾಗಿದೆ.

ಸ್ಟ್ಯಾಂಡಿಂಗ್ ಕಮಿಟಿಯ ಇನ್ನೊಂದು ಸಲಹೆ ಎಂದರೆ, ಹಳೆಯ ಕಾರ್ಯಕ್ರಮಗಳ ಬಗ್ಗೆ ನಮ್ಮ ಗಮನ ಕಡಿಮೆಯಾಗುತ್ತಿದೆ ಎನ್ನುವುದು. ಹೊಸ ಕಾರ್ಯಕ್ರಮಗಳ ಭರದಲ್ಲಿ, ಹಳೆಯ ಕಾರ್ಯಕ್ರಮಗಳಿಗೆ ಆದ್ಯತೆ ಕಡಿಮೆಯಾಗುತ್ತಿದೆ ಎನ್ನುವುದು ಸಮಿತಿಯ ದೂರು. ಆದರೆ ಈ ದೂರಿನಲ್ಲಿ ನಿಜಾಂಶ ಇಲ್ಲ. ಎಲ್ಲಾ ಕಾರ್ಯಕ್ರಮಗಳಿಗೂ ನಾವು ಸೂಕ್ತ ಪ್ರಮಾಣದಲ್ಲಿ ಹಣ ಒದಗಿಸುತ್ತಿದ್ದೇವೆ. ಈ ಎಲ್ಲವುಗಳನ್ನು ಸಮಾನವಾಗಿ ಬಲಿಷ್ಠಪಡಿಸುತ್ತಿದ್ದೇವೆ. ಹಳೆಯ ಕಾರ್ಯಕ್ರಮಗಳಿಗೆ ಹೋಲಿಸಿದರೆ ಹೊಸ ಕಾರ್ಯಕ್ರಮಗಳಿಗೆ ಹೆಚ್ಚಿನ ಪ್ರಚಾರ ನೀಡಲಾಗುತ್ತದೆ. ಟಿ.ವಿ. ರೇಡಿಯೋ, ಗೋಡೆ ಬರಹಗಳ ಮೂಲಕ ಅಂತ ಪ್ರಚಾರ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ.

ಈ ಎಲ್ಲಾ ಕಾರ್ಯಕ್ರಮಗಳು ಮಹಿಳೆಯರನ್ನೂ ಸಾಮಾಜಿಕವಾಗಿ ಸಮೀಕರಣ ಗೊಳಿಸುವಲ್ಲಿ ನೆರವಾಗಲಿವೆ. ಮಹಿಳೆಯರಿಗೆ ಆರ್ಥಿಕ ಬಲವನ್ನು ತಂದುಕೊಡಲಿದೆ. ಆದಾಯ ಗಳಿಕೆ ಯೋಜನೆಗಳನ್ನು ನಾವು ಹಮ್ಮಿಕೊಂಡಿದ್ದೇವೆ. ಅದಕ್ಕಾಗಿ ಸೂಕ್ತ ತರಬೇತಿ ಕೂಡ ನೀಡಲಾಗುತ್ತಿದೆ. ತರಬೇತಿ ಸಾಂಪ್ರದಾಯಿಕ ಮಾದರಿಯಲ್ಲಿರದೆ ಕಂಪ್ಯೂಟರ್ ವಿಜ್ಞಾನ, ಎಲೆಕ್ಟ್ರಾನಿಕ್ಸ್ ಬ್ಯೂಟಿಪಾರ್ಲರ್ನಾ ಮಾದರಿಯಲ್ಲಿದೆ. ಇವೆ ಅಂತಹ ಆದಾಯ ಉತ್ಪನ್ನ ಕಾರ್ಯಕ್ರಮಗಳಿಗೆ ನಾವು ಶೇ 90 ರಷ್ಟು ಗ್ರಾಂಟ್ ನೀಡುತ್ತಿದ್ದೇವೆ. ಈ ಕಾರ್ಯಕ್ರಮಗಳು ಮಹಿಳೆಯರಿಗೆ ಉಳಿತಾಯ ದೃಷ್ಟಿಯಿಂದ ಕಂಡಿತ ನೆರವಾಗಲಿವೆ. ಸಾಮಾಜಿಕ ಸಬಲೀಕರಣದ ನಂತರ ಆರ್ಥಿಕ ಸಮಲಿಕರಣ ಮೊದಲಾಗುತ್ತದೆ. ಅದಕ್ಕಾಗಿ ನಾವು ನಮ್ಮ ಆದಾಯ ಉತ್ಪನ್ನ ಕಾರ್ಯಕ್ರಮಗಳ ಅಡಿ ಕ್ರಮಿಸಲಾಗುತ್ತದೆ.

ಮೂರನೆಯದಾಗಿ ರಾಜಕೀಯ ಸಬಲೀಕರಣ. ಈ ಯೋಜನೆಗೆ ನಮ್ಮ ಪ್ರಧಾನಮಂತ್ರಿಗಳು ಪಂಚಾಯತ್ ರಾಜ್ ಮೂಲಕ ಚಾಲನೆ ನೀಡಿದ್ದಾರೆ. ಈ ಯೋಜನೆಗಳು ನಮ್ಮ ಮಹಿಳೆಯರಲ್ಲಿ ಸವಾಲಿಗೆ ಎದೆಯೊಡ್ಡುವ ಧೈರ್ಯವನ್ನು ತಂದುಕೊಟ್ಟಿವೆ. ಆದಾಯ ದೃಷ್ಟಿಯಿಂದಲೂ ಮಹಿಳೆಗೆ ಸ್ವಾವಲಂಬನೆ ತಂದುಕೊಟ್ಟಿವೆ. ಈ ಕಾರ್ಯಕ್ರಮಗಳ ವ್ಯಾಪ್ತಿಗೆ ಒಳಪಟ್ಟ ಮಹಿಳೆಯರ ಮಕ್ಕಳ ಶಾಲಾ ಹಾಜರಾತಿಗೂ ಸುಧಾರಿಸಿದೆ. ಯೋಜನಾ ಫಲಾನುಭವಿ ಕುಟುಂಬಗಳ ಮಕ್ಕಳ ಶಾಲೆ ತೊರೆಯುವ ಪ್ರಕರಣಗಳು ಸಹ ಗಣನೀಯವಾಗಿ ಸ್ಥಗಿತಗೊಂಡಿವೆ. ಇದರಿಂದ ರಾಷ್ಟ್ರದ ಶೈಕ್ಷಣಿಕ ಮಟ್ಟ ಸುಧಾರಣೆಯಾಗಲಿದೆ.

ಇಷ್ಟು ಮಾಹಿತಿಯೊಂದಿಗೆ ನನ್ನ ಮಾತು ಮುಗಿಸುತ್ತೇನೆ ಮತ್ತೊಮ್ಮೆ ತಮಗೆಲ್ಲ ನನ್ನ ಧನ್ಯವಾದಗಳು.

# ಬಜೆಟ್ ಮೇಲೆ ಅಭಿಪ್ರಾಯ

ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ):

ಮಾನ್ಯರೇ, ನಮ್ಮ ಸರ್ಕಾರದ ರೈಲ್ವೆ ಬಜೆಟ್ ಅನ್ನು ನಾನು ಮುಕ್ತಮನಸ್ಸಿನಿಂದ ಬೆಂಬಲಿಸುತ್ತೇನೆ. ಉಳಿತಾಯ ಬಜೆಟ್ ಮಂಡಿಸಿದ್ದಕ್ಕಾಗಿ ಹಾಗೂ ರೈಲ್ವೆ ಇಲಾಖೆಯನ್ನು ಸಮರ್ಥವಾಗಿ ಮುನ್ನಡೆಸಿಕೊಂಡು ಹೋಗುತ್ತಿದ್ದಕ್ಕಾಗಿ ನಾನು ಯುವ ಉತ್ಸಾಹಿ ರೈಲು ಮಂತ್ರಿಗಳನ್ನು ಅಭಿನಂದಿಸುತ್ತೇನೆ. ಕಟ್ಟು ನಿಟ್ಟಿನ ಹಣಕಾಸು ನಿರ್ವಹಣೆ ಮತ್ತು ಶ್ರೇಷ್ಠ ಆದಾಯ ಕ್ರೋಢೀಕರಣದ ಪ್ರಯತ್ನಗಳಿಂದಾಗಿ ಇಂದು 100 ಕೋಟಿ ರೂ. ಉಳಿತಾಯ ಮಂಡನೆಯಾಗಿದೆ. ಇಂದಿನ ರೈಲ್ವೆ ಆದಾಯದ ಬಜೆಟ್ ಅನ್ನು ಆಧರಿಸಿದೆ. ಅದು ತನ್ನ ಸ್ವಂತ ಸಾಮರ್ಥ್ಯ ನೆಚ್ಚಿಕೊಂಡು ಮುನ್ನಡೆದಿದೆ.

ಸದ್ಯ ಸಂಪನ್ಮೂಲ ಕ್ರೋಢೀಕರಣದತ್ತ ಗಮನ ಹರಿಸಲಾಗಿದೆ. ಇದರ ಪ್ರಧಾನ ಉದ್ದೇಶ, ರೈಲ್ವೆ ಸವಲತ್ತಿನ ವಿಸ್ತರಣೆ ಮತ್ತು ಆಧುನೀಕರಣ. ಈ ಉದ್ದೇಶದೊಂದಿಗೆ ರೈಲ್ವೆ ಇಲಾಖೆ ಇಂದು ಬಂಡವಾಳ ಮಾರುಕಟ್ಟೆಯನ್ನು ಪ್ರವೇಶಿಸಿದೆ. ಸಂಪನ್ಮೂಲ ಕ್ರೋಢೀಕರಿಸುವ ನಿಟ್ಟಿನಲ್ಲಿ ಅದು, ಶೇ. 10ರ ತೆರಿಗೆ ರಹಿತ ಆಧಾರದ ಮೇಲೆ 25 ಲಕ್ಷ ಬಾಂಡುಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಲು ಇಚ್ಛಿಸಿದೆ. ಬಾಂಡ್‌ವೊಂದರ ಮುಖಬೆಲೆ 100 ರೂಪಾಯಿ ಆಗಿದ್ದು, ಅದರ ಒಟ್ಟು 250 ಕೋಟಿ ರೂ. ಆಗಲಿದೆ.

ಈ ಸಾಲಿನ ಬಜೆಟ್‌ನಲ್ಲಿ ಅನೇಕ ರಿಯಾಯಿತಿಗಳನ್ನು ಪ್ರಕಟಿಸಲಾಗಿದೆ. ಅದಕ್ಕಾಗಿ ಮಾನ್ಯ ಸಚಿವರು ಅಭಿನಂದಿಸುತ್ತೇನೆ. ಈ ರಿಯಾಯಿತಿ ಪಟ್ಟಿಯಲ್ಲಿ ಅಂಗವಿಕಲರನ್ನು ಮತ್ತು ಸೈನಿಕರನ್ನು ಸೇರಿಕೊಂಡಿರುವುದು ಶ್ಲಾಘನೀಯ. ಹಳ್ಳಿಗಾಡಿನ ಹೊಲಗದ್ದೆಗಳಲ್ಲಿ ರೈತಾಪಿ ಜನವರ್ಗ ತಮ್ಮ ಜೀವ ತೇಯ್ಯುತ್ತಿದ್ದರೆ, ಅತ್ತ ಗಡಿಯಲ್ಲಿ ಅವರ ಮಕ್ಕಳು ಜೀವಮುಡುಪಿಟ್ಟು ನಮ್ಮ ರಾಷ್ಟ್ರದ ರಕ್ಷಣೆಗೆ ಶ್ರಮಿಸುತ್ತಿದ್ದಾರೆ. ಅಂಥ ಯೋಧರಿಗೆ ರಿಯಾಯಿತಿ ಘೋಷಿಸಿರುವುದು ಮೆಚ್ಚುವಂತ ಕ್ರಮ. ಆದರೆ ಈ ಸವಲತ್ತಿನ ಸದುಪಯೋಗ ಎಷ್ಟರ ಮಟ್ಟಿಗೆ ಆಗುತ್ತದೆ ಎನ್ನುವ ಬಗ್ಗೆ ನನಗೆ ಅನುಮಾನಗಳಿವೆ. ನಿಜವಾದ ಅರ್ಹರನ್ನು ಬದಿಗೆ ಸರಿಸಿ ಕೆಲವು ಕಿಡಿಗೇಡಿಗಳು ರಿಯಾಯಿತಿಯ ದುರುಪಯೋಗ ಪಡೆಯುವ ಅಪಾಯ ಇದೆ.

**ರೈಲ್ವೆ ಇಲಾಖೆ ಆಸ್ತಿ–ಪಾಸ್ತಿ:** ರೈಲ್ವೆ ಅಪಾರ ಪ್ರಮಾಣದ ಆಸ್ತಿ ಹೊಂದಿದೆ. ಅದರ ರಕ್ಷಣೆಗೆ ಹೆಚ್ಚಿನ ಒತ್ತು ನೀಡಬೇಕೆಂದು ನಾನು ಈ ಸಂದರ್ಭದಲ್ಲಿ ಮಾನ್ಯ ಸಚಿವರನ್ನು ಕೇಳಿಕೊಳ್ಳುತ್ತೇನೆ. ಪ್ಲಾಟ್ ಫಾರ್ಮ್‌ಗಳು ಮತ್ತು ಹಳ್ಳಿಗಳ ಬಗ್ಗೆ ನಿರಂತರ ನಿಗಾವಹಿಸುವ ಅಗತ್ಯ ಇದೆ. ಈ ನಿಟ್ಟಿನಲ್ಲಿ ರೈಲ್ವೆ ರಕ್ಷಣಾ ಪಡೆಯನ್ನು ಇನ್ನಷ್ಟು ಬಲಪಡಿಸುವ ಅನಿವಾರ್ಯತೆ ಇದೆ. ಜೊತೆಗೆ ಹೆಚ್ಚುತ್ತಿರುವ ಅಪರಾಧ ಪ್ರಕರಣಗಳ ನಿಗ್ರಹಕ್ಕೆ ರೈಲು ಪಡೆಗೆ ಆಧುನಿಕ ಶಸ್ತ್ರಸ ಪೂರೈಸುವ ಅಗತ್ಯ ಇದೆ. ರೈಲ್ವೆ ಆಸ್ತಿ–ಪಾಸ್ತಿ ಬಗ್ಗೆ ನಾನು ಪ್ರಸ್ತಾಪಿಸಿದೆ. ಅದು ರೈಲ್ವೆ ನಿಲ್ದಾಣಗಳಲ್ಲಿ ಅಷ್ಟೆ ಅಲ್ಲ, ಮಾರ್ಗ ಸಾಗುವ ಇಕ್ಕೆಲಗಳಲ್ಲಿಯೂ ಅಪಾರ ಪ್ರಮಾಣದ ಭೂಮಿ ಇಲಾಖೆಗೆ ಸೇರಿದೆ. ಇದರಲ್ಲಿ ಅನೇಕ ಕಡೆ ಯಾವುದೇ

ತಲತಮ್ಮ ಎಂತಸಿದೇ ಖಾಸಗಿ ವ್ಯಕ್ತಿಗಳಿಗೆ ಗುತ್ತಿಗೆಗೆ ವಹಿಸಿಕೊಡಲಾಗಿದೆ. ಇಂಥ ಗುತ್ತಿಗೆ ಪ್ರಕರಣಗಳಲ್ಲಿ ಪರಬಾರೆಗೆ ಯಾವುದೇ ನಿರ್ದಿಷ್ಟ ನಿಯಮ ರೂಪಿಸಿಲ್ಲ. ಇದು ಸರಿಯಾಗಬೇಕಿದೆ.

ಆದ್ದರಿಂದ ಮಾನ್ಯ ಸಚಿವರಲ್ಲಿ ವಿನಂತಿಸಿಕೊಳ್ಳುವುದೇನೆಂದರೆ, ರೈಲ್ವೆ ಇಲಾಖೆಯಷ್ಟು ಭೂಮಿ ಅರೀತಿ ಖಾಸಗಿ ವ್ಯಕ್ತಿಗಳ ಬಳಿ ಹೋಗಿದೆ, ಅದರಿಂದ ದಷ್ಟು ಹಣ ಸಂದಾಯವಾಗುತ್ತಿದೆ ಅನ್ನುವ ಬಗ್ಗೆ ನಿಖರ ಲೆಕ್ಕ ಇಡಬೇಕು. ಅದಕ್ಕಾಗಿ ಒಂದು ನಿರ್ದಿಷ್ಟ ವ್ಯವಸ್ಥೆಯನ್ನು ಜಾರಿಗೆ ತನ್ನಿ. ರೈಲ್ವೆ ಭೂಮಿ ಗುತ್ತಿಗೆ ಅಥವಾ ಪರಬಾರೆ ವಿಷಯದಲ್ಲಿ ಸಚಿವರು ಖುದ್ದು ಆಸಕ್ತಿ ವಹಿಸಿ ನೋಡಿಕೊಳ್ಳಬೇಕು. ಇಲ್ಲದೇ ಹೋದರೆ, ಅಪಾರ ಪ್ರಮಾಣದ ಆಸ್ತಿಯನ್ನು ನಾವು ಕಳೆದುಕೊಳ್ಳಲಿದ್ದೇವೆ. ಆದ್ದರಿಂದ ಇನ್ನು ಮುಂದಿನ ದಿನಗಳಲ್ಲಿ ಮಾನ್ಯ ಸಚಿವರು, ಈ ನಿಟ್ಟಿನಲ್ಲಿ ಹೆಚ್ಚಿನ ಎಚ್ಚರವಹಿಸಬೇಕೆಂದು ಕೇಳುತ್ತೇನೆ. ಕೆಲವು ನಗರಗಳಲ್ಲಿ ರೈಲು ಮಾರ್ಗದ ಅಕ್ಕ–ಪಕ್ಕ ಚಿನ್ನದ ಬೆಲೆಯ ಭೂಮಿ ಇದೆ. ಅದರ ಮೌಲ್ಯ ಅಪರಿಮಿತ. ಅಂತಹ ಭೂಮಿಯನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸದೇ ಹೋದರೆ, ಅದು ಕೊಳಚೆ ಪ್ರದೇಶಗಳ ವಶವಾಗಲಿದೆ. ಒಂದು ಬಾರಿ ಕೊಳ್ಳೆ ಪ್ರದೇಶವಾಗಿ ನಿರ್ಮಾಣವಾದರೆ, ಮತ್ತೇ ಅದರ ಸ್ವಾಧೀನ ಕಷ್ಟ ಎನ್ನಿಸಲಿದೆ. ಆದ್ದರಿಂದ ಮಾರ್ಗ ಪಕ್ಕದ ಭೂಮಿ ಬಗ್ಗೆ ನಿಗಾ ವಹಿಸಬೇಕೆಂದು ಸೂಚಿಸುತ್ತೇನೆ.

ಮಾನ್ಯರೆ, ರೈಲುಗಳಲ್ಲಿ ಸಂಭವಿಸಬಹುದಾದ ದುರಂತಗಳನ್ನು ತಪ್ಪಿಸಲು ಇಂದಿನ ದಿನಗಳಲ್ಲಿ ಆಧುನಿಕ ಪತ್ತೆ ಉಪಕರಣಗಳನ್ನು ಬಳಸುವ ಅನಿವಾರ್ಯತೆ ಇದೆ. ರೈಲುಗಳಲ್ಲಿ ಸ್ಫೋಟಕ ಸಾಗಿಸುವುದು ಅಥವಾ ಅದನ್ನೇ ಗುರಿಯಾಗಿರಿಸಿಕೊಂಡು ದುರಂತ ಸೃಷ್ಟಿಸುವುದನ್ನು ತಪ್ಪಿಸಲು ಆಧುನಿಕ ಎಲೆಕ್ಟ್ರಾನಿಕ್ ಪತ್ತೆ ಉಪಕರಣಗಳು ಬೇಕೆಬೇಕಿವೆ. ವಿಶೇಷವಾಗಿ ಪಂಜಾಬ್‌ನಂಥ ರಾಜ್ಯಗಳಲ್ಲಿ ಅಂಥ ಉಪಕರಣಗಳ ಅಗತ್ಯ ಜರೂರಾಗಿದೆ. 1996 ಭಾರತೀಯ ರೈಲ್ವೆ ಆಸ್ತಿ ಕಾಯ್ದೆ ಹೊರತಾಗಿಯೂ ಅಪರಾಧ ಪ್ರಕರಣಗಳು ನಿಯಂತ್ರಣಕ್ಕೆ ಬಂದಿಲ್ಲ.

ಇನ್ನು ಪರಿಹಾರ ವಿತರಣೆ ಬಗ್ಗೆ ಹೇಳುವುದಾದರೆ. ಈ ವಿಷಯದಲ್ಲಿ ವಿಳಂಬ ಸಲ್ಲದು. ಯಾಕೆಂದರೆ ನಮ್ಮದು ಕಲ್ಯಾಣ ರಾಜ್ಯ. ನೊಂದವರು, ವಿಳಂಬದಿಂದ ಇನ್ನಷ್ಟು ಕೊರಗುವಂತಾಗಬಾರದು. ಜೊತೆಗೆ ಅಪರಾಧ ಪ್ರಕರಣಗಳ ವಿಚಾರಣೆ ಕೂಡ ಶೀಘ್ರ ಪೂರ್ಣಗೊಳಿಸಬೇಕು, ತಪ್ಪಿತಸ್ಥರಿಗೆ ಶಿಕ್ಷೆಯಾಗಬೇಕು ಮತ್ತು ಸಂತ್ರಸ್ತರಿಗೆ ಪರಿಹಾರ ಲಭಿಸಬೇಕು. ಇದರಲ್ಲಿ ವಿಳಂಬ ಬೇಡ.

ಮಾನ್ಯರೇ, ಎರಡನೇ ದರ್ಜೆಯ ಮೀಸಲು ಬೋಗಿಗಳಲ್ಲಿ ಹೆಚ್ಚುತ್ತಿರುವ ಜನಸಂದಣಿ ಬಗ್ಗೆ ನಾನು ಇಲ್ಲಿ ಪ್ರಸ್ತಾಪಿಸಲು ಇಚ್ಛಿಸುತ್ತೇನೆ. ಈ ಬೋಗಿಗಳಲ್ಲಿ ಆಸನ ಮೀರಿ ಪ್ರಯಾಣಿಕರನ್ನು ತುಂಬಲಾಗುತ್ತದೆ. ಇದು ನನ್ನ ವೈಯುಕ್ತಿಕ ಅನುಭವ. ಟಿಕೆಟ್ ಪಡೆದ ಜನರನ್ನು ತಂದು ತುಂಬುವ ಕೆಲಸ ಮಾಡುತ್ತಿದ್ದಾರೆ. ಇದು ಒಂದೆರಡು ದಿನದ ಪ್ರಕರಣ ಅಲ್ಲ. ಅನೇಕ ಬಾರಿ ಟಿ.ಸಿ.ಗಳು ಈ ಕೆಲಸ ಮಾಡಿದ್ದಾರೆ. ಮಾಡಿಕೊಂಡು ಬರುತ್ತಲಿವಾ ಇದ್ದಾರೆ. ಈ ರೀತಿ ಮಾಡುವುದರಿಂದ ಮೀಸಲು ಮತ್ತು ಮೀಸಲು ರಹಿತ ಬೋಗಿಗಳ ಪ್ರಯಾಣಿಕರ ನಡುವೆ ಜಟಾಪಟಿಗಳಿಗೆ ದಾರಿಯಾಗುತ್ತದೆ.

ಅನೇಕ ಬಾರಿ ಅನಗತ್ಯವಾಗಿ ರೈಲು ವಿಳಂಬಕ್ಕೂ ಕಾರಣ ಎನಿಸಿದೆ. ಅಷ್ಟೇ ಅಲ್ಲ. ಇಂತ ಬೋಗಿಗಳಲ್ಲಿ ಪ್ರಯಾಣಿಸುವ ಮಹಿಳೆಯರು ಮತ್ತು ಮಕ್ಕಳ ಕಿರಿಕಿರಿ ಹಗೂ ಮುಜುಗರದ ಸನ್ನಿವೇಶಗಳಿಗೆ ತುತ್ತಾಗುವಂತಾಗುತ್ತಿದೆ. ಇಂತ ಅಪರಾಧಗಳಲ್ಲಿ ತೊಡಗುವ ಟಿ.ಸಿಗಳ ವಿರಿದ್ಧ ಕಟ್ಟು ನಿಟ್ಟಿನ ಶಿಕ್ಷೆ ಜಾರಿಗೊಳಿಸ ಬೇಕು.

ರೈಲು ಸಿಬ್ಬಂದಿ ಹೆಚ್ಚಿನ ಕಾರ್ಯ ದಕ್ಷತೆ ಮರೆದರೆ ರೈಲು ವಿಳಂಬವಾಗಿ ಚಲಿಸುವ ಪ್ರಕರಣಗಳಿಗೆ ತಡೆ ಹಾಕಿ ಉತ್ತಮ ಸೇವೆ ಒದಗಿಸಬಹುದಾಗಿದೆ.

ಅಮರಾವತಿ ಎಕ್ಸಪ್ರೆಸ್ ರೈಲಿನ ವೇಳಾಪಟ್ಟಿಯಲ್ಲಿ ಮಾಡಲಾಗಿರುವ ಬದಲಾವಣೆಯಿಂದ ಅನೇಕ ರೀತಿಯ ಅಡಚಣೆಗಳು ಎದುರಾಗಿವೆ. ಅದ್ದರಿಂದ ಈ ಹಿಂದೆ ಇದ್ದ ವೇಳಾ ಪಟ್ಟಿಯನ್ನೇ ಉಳಿಸಿಕೊಳ್ಳುವ ಕುರಿತು ಪರಿಶೀಲಿಸಬೇಕೆಂದು ಮಾನ್ಯ ಸಚಿವರಲ್ಲಿ ಕೇಳಿಕೊಳ್ಳುತ್ತೇನೆ.

ಕಿತ್ತೂರ್ ಎಕ್ಸ್‌ಪ್ರೆಸ್ ರೈಲಿನ ಹೆಸರನ್ನು ಬದಲಿಸಿ ಸ್ವಾತಂತ್ರ್ಯ ಹೋರಾಟಗಾರ್ತಿ ಕಿತ್ತೂರ್ ಚೆನ್ನಮ್ಮ ಅವರ ಹೆಸರಿನಿಂದ ಪುನರ್ ನಾಮಕರಣ ಮಾಡುವಂತೆ ಕೋರಿ ನಾನು ಮಾನ್ಯ ಸಚಿವರಿಗೆ ಪತ್ರ ಬರೆದ್ದಿದ್ದೇನೆ. ಆದರೆ ಅದು ಸಾಧ್ಯವಾಗದು. ಎನ್ನುವ ಪ್ರತಿಕ್ರಿಯೆ ಸಚಿವರಿಂದ ಬಂದಿದೆ. ಸಚಿವರು, ಇನ್ನೊಂದು ರೈಲಿನ ಹೆಸರನ್ನು ಟಿಪ್ಪು ಎಕ್ಸ್‌ಪ್ರೆಸ್ ಎಂದು ಕರೆದಿದ್ದಾರೆ. ಆಗಲೂ ಕೂಡ ನಾನು ನಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿದ ಪ್ರಥಮ ಮಹಿಳೆ ಹೆಸರನ್ನು ಕಿತ್ತೂರ್ ಎಕ್ಸ್‌ಪ್ರೆಗೆ ಬದಲಾಗಿ ಕಿತ್ತೂರ್ ಚೆನ್ನಮ್ಮ ಎಕ್ಸ್‌ಪ್ರೆಸ್ ಎಂದು ನಾಮಕರಣ ಕೋರಿದೆ. ಒಂದು ವೇಳೆ ಆ ರೀತಿ ನಾಮಕರಣ ಮಾಡಿದರೆ ಇಡೀ ಕರ್ನಾಟಕದ ಜನತೆ ಖುಷಿ ಪಡುತ್ತಾರೆ.

ರೈಲ್ವೆ ಸಚಿವರು ಗುರುತಿಸಿರುವ ದೇಶದ 20 ಮಾದರಿ ರೈಲು ನಿಲ್ದಾಣಗಳಲ್ಲಿ ಬಳ್ಳಾರಿ ಕೂಡ ಒಂದು. ಎನ್ನುವ ಸಂಗತಿಯನ್ನು ನಾನಿಲ್ಲಿ ಹೇಳ ಬಯಸುತ್ತೇನೆ. ಅಂತ ಮಾದರಿ ನಿಲ್ದಾಣ ಯೋಜನೆಯನ್ನು ಬಳ್ಳಾರಿಗೆ ಪ್ರಸಕ್ತ ವರ್ಷದಲ್ಲಿಯೇ ನಿರ್ಮಾಣವಾಗುವಂತೆ ಕ್ರಮ ಕೈಗೊಳ್ಳಬೇಕೆಂದು ಮಾನ್ಯ ಸಚಿವರಲ್ಲಿ ವಿನಂತಿಸಿಕೊಳ್ಳುತ್ತೇನ. ಬ್ರಾಡ್ ಗೇಜ್ ಮತ್ತು ಮೀಟರ್ ಗೇಜ್ ನಡುವೆ ಸಂಪರ್ಕ ಕಲ್ಪಿಸುವ ನಿಟ್ಟಿನಲ್ಲಿ ಮೇಲ್ಸೇತುವೆ ನಿರ್ಮಿಸುವ ಅಗತ್ಯ ಇದೆ. ಇದು ಸಮಗ್ರ ಬಳ್ಳಾರಿ ಅಭಿವೃದ್ಧಿ ಕಾರ್ಯಕ್ರಮದ ವ್ಯಾಪ್ತಿಯಲ್ಲಿ ಬರುತ್ತವೆ. ಇದುವರೆಗೂ ಜಾರಿಯಲ್ಲಿ ಊಟ ಪೂರೈಕೆ ವ್ಯವಸ್ಥೆ ಬಳ್ಳಾರಿ ನಿಲ್ದಾಣದಲ್ಲಿ ಈಗ ಸ್ಥಗಿತಗೊಂಡಿದೆ. ಅದನ್ನು ಯಥಾಪ್ರಕಾರ ಪುನರಾರಂಭಿಸಲು ಕ್ರಮ ಕೈಗೊಳ್ಳ ಬೇಕೆಂದು ಸಚಿವರಲ್ಲಿ ಕೋರುತ್ತೇನೆ. ಇಲ್ಲದೆ ಹೋದರೆ ಪ್ರಯಾಣಿಕರು ತೀವ್ರ ತೊಂದರೆಗೆ ಗುರಿಯಾಗಬೇಕಾಗುತ್ತದೆ.

ಈ ಎಲ್ಲಾ ಸಮಸ್ಯೆಗಳ ಮಧ್ಯ ರೈಲ್ವೆ ಇಲಾಖೆ ನಮ್ಮ ಯುವ ನಾಯಕತ್ವದ ಅಡಿಯಲ್ಲಿ ಪುನಃ ಚೇತನಗೊಂಡು ಸಮೃದ್ಧಿ ಹೊಂದುವ ಭರವಸೆ ನಡೆದಿದೆ. ಜೊತೆಗೆ ರೈಲ್ವೆ ಬಜೆಟ್ ಮಂಡನೆ ವೇಳೆ ಸಚಿವರು ಮುಂದಿಟ್ಟ ಕನಸು ನನಸಾಗಲಿ ಎಂದು ನಾನು ಈ ಸಂದರ್ಭದಲ್ಲಿ ಆಶೈಸುತ್ತೇನೆ.

# ಮಹಿಳಾ ಮತ್ತು ಮಕ್ಕಳ ಕಲ್ಯಾಣ

ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ): ಮಾನ್ಯ ಉಪಸಭಾಧ್ಯಕ್ಷರೇ ಮಹಿಳಾ ಮಸೂದೆ ಕುರಿತ ರಾಷ್ಟ್ರೀಯ ಆಯೋಗವನ್ನು ನಾನು ಸ್ವಾಗತಿಸುತ್ತೇನೆ. ಮಹಿಳಾ ಅಭಿವೃದ್ಧಿ ನಿಟ್ಟಿನಲ್ಲಿ ಇರಿಸಿರುವ ಪುಟ್ಟ ಹೆಜ್ಜೆಯಿದು ಹಾಗೂ ಸುಧಾರಣೆಯ ದಿಕ್ಕಿನಲ್ಲಿ ಸಾಗಿರುವ ಮೊದಲ ಪ್ರಯತ್ನವಿದು. ಈ ಮಸೂದೆ ಚಳಿಗಾಲದ ಅಧಿವೇಶನ ಪೂರ್ಣಗೊಳ್ಳುವ ಮುನ್ನ ಅಂಗೀಕಾರಗೊಳ್ಳಬೇಕಾದ ಜರೂರತ್ತಿದೆ ಈ ಮಸೂದೆ ಇತರೆ ಕಡೆಗಳಿಂದ ವಿರೋಧಕ್ಕೆ ಗುರಿಯಾಗಿದೆ ಕಾಂಗ್ರೆಸ್ ಸದಸ್ಯರಿಗೆ ಇದರಲ್ಲಿ ಆಸಕ್ತಿಯಿಲ್ಲ ಆದರೆ ನಾನು ಅವರ ವಿರೋಧವನ್ನು ಒಪ್ಪುವುದಿಲ್ಲ ಮಸೂದೆ ಅಂಗೀಕಾರಗೊಳ್ಳುವ ದಿನ ನಾನು ಸದಸನದಲ್ಲಿ ಹಾಜರಿರುತ್ತೇನೆ.

ಸಭ್ಯ ಸಂಚಿ ಮುಖರ್ಜಿ ಅಧ್ಯಕ್ಷತೆಯಲ್ಲಿ ನಡೆದ ಸಭೆ ಈ ಮಸೂದೆ ಕುರಿತು ಚರ್ಚಿಸಿತು ಆದರೆ ಈ ಸಭೆಯಲ್ಲಿ ಕಾಂಗ್ರೆಸ್ M.P. ಗಳು ಯಾರೂ ಭಾಗವಹಿಸಲಿಲ್ಲ ಎಂದು ಸ್ನೇಹಿತೆ ಗೀತಾ ಮುಖರ್ಜಿ ಮತ್ತೊಂದು ಆರೋಪ ಮಾಡಿದ್ದಾರೆ. ಸಭೆಯಲ್ಲಿ ಭಾಗವಹಿಸದಿದ್ದರೂ ನಾವು ಆ ಸಭೆ ಕೈಗೊಂಡ ಮೌಲ್ಯ ಪೂರಿತ ನಿರ್ಧಾರಗಳನ್ನು ಬೆಂಬಲಿಸುತ್ತೇವೆ.

ಸಮಸ್ಯೆ ಅನ್ನುವುದು ರಾಜ್ಯದಿಂದ ಕುಟುಂಬದಿಂದ ಕುಟುಂಬಕ್ಕೆ ಮತ್ತು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ ಆದ್ದರಿಂದ ಈ ಮಸೂದೆ ಜಾರಿಯೊಂದರಿಂದಲೇ ಮಹಿಳಾ ಸಮುದಾಯವನ್ನು ಕಾಡುವ ಎಲ್ಲಾ ಸಮಸ್ಯೆಗಳಿಗೆ ಅಂತ್ಯ ಆಡುವುದು ಅಸಾಧ್ಯ ವಯೋವೃದ್ಧ ಮಹಿಳೆಯರ ಸಮಸ್ಯೆಗಳು ಮತ್ತು ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯ ಪ್ರಕರಣಗಳು ಸೇರಿದಂತೆ ಅನೇಕ ಸಾಮಾಜಿಕ ಅನಿಷ್ಟಗಳು ಇಂದಿಗೂ ಯಥಾವತ್ತಾಗಿ ಚಾಲನೆಯಲ್ಲಿವೆ.

ಮಾನ್ಯ ವಾರ್ತಾ ಸಚಿವರ ಮುಂದೆ ನೇರ ಪ್ರಶ್ನೆ ಮುಂದಿಡಲು ಇಚ್ಛಿಸುತ್ತೇನೆ. ಆ ಪ್ರಶ್ನೆ ಏನೆಂದರೆ ಇಂದಿನ ಟೀವಿಗಳಲ್ಲಿ ಪ್ರಸಾರಗೊಳ್ಳುತ್ತಿರುವ ಜಾಹೀರಾತುಗಳ ಬಗ್ಗೆ ನಿಮಗೆ ಸಂತೃಪ್ತಿ ಇದೆಯೆ? ಅದು ನಮ್ಮ ಸಂಸ್ಕೃತಿಯೆ? ಮಹಿಳೆಯರು ಅರೆ ಬೆತ್ತಲೆಯಾಗಿ ಕಾಣಿಸಿಕೊಳ್ಳುವ ಹೀನ ಅಭಿರುಚಿಯ ಜಾಹೀರಾತುಗಳನ್ನು ನೀವು ಪ್ರೋತ್ಸಾಹಿಸುತ್ತೀರಾ? ಇಂತಹದ್ದೇ ಕೆಟ್ಟ ಅಭಿರುಚಿಯ ಜಾಹೀರಾತು ಎಂದರೆ ಸಿಗರೇಟು ಕುರಿತದ್ದು ಕ್ಯಾನ್ಸರ್‌ನಂತಹ ಮಾರಕ ರೋಗಕ್ಕೆ ದಾರಿ ಮಾಡಿಕೊಡುವ ಧೂಮಪಾನವನ್ನು ಇಡೀ ವಿಶ್ವವೇ ಇಂದು ಬಹಿಷ್ಕರಿಸಿದೆ ಆದರೆ ಆ ಕುರಿತು ನಮ್ಮಲ್ಲಿ ವೈಭವೀಕರಿಸುವ ಜಾಹೀರಾತುಗಳು ಪ್ರಸಾರಗೊಳ್ಳುತ್ತಿದೆ. ವಿಚಿತ್ರವೆಂದರೆ ಸಿಗರೇಟಿನ ಜೊತೆ ಮಹಿಳೆ ಕಾಣಿಸಿಕೊಳ್ಳುವಂತ ಕೆಟ್ಟ ಚಿತ್ರ ಇಂದು ಜಾಹೀರಾತಿನ ಸರಕು ಎನ್ನಿಸಿದೆ. ಇದು ನಮ್ಮ ಸಂಸ್ಕೃತಿಯೆ? ಇಂತಹ ಜಾಹೀರಾತುಗಳನ್ನು ನೀವು ನೋಡಬೇಕೆ ಅನ್ನುವುದನ್ನು ಯೋಚಿಸಿ ಭಾರತೀಯ ಮಹಿಳಾ ಧೂಮಪಾನ ಮಾಡುವ ಅಸಹ್ಯಕರ ದೃಶ್ಯವನ್ನು ನೀವು ನೋಡಬೇಕೆ? ಇಂತಹ ಜಾಹೀರಾತುಗಳಿಗೆ ನಿಷೇಧ ವಿಧಿಸದೇ ಬಿಟ್ಟಿರುವುದು ನಾವೆಲ್ಲಾ ತಲೆ ತಗ್ಗಿಸುವಂತಹ ವಿಷಯವಲ್ಲವೆ? ನಿಷೇಧಿಸುವ ಕೆಲಸ ನೀವು ಮಾಡಿಲ್ಲ.

ಕಾಂಗ್ರೆಸ್ಸಿನ ಜನ ಕೂಡ ಅಂತಹ ಅಂಶಗಳ ಬಗ್ಗೆ ತಲೆ ಕೆಡಿಸಿಕೊಂಡಿಲ್ಲ ರಾಷ್ಟ್ರಪಿತಾಹ ಮಹಾತ್ಮಗಾಂಧಿ ನಮಗೆಲ್ಲಾ ಸಮಾನ ಸ್ಥಾನಮಾನ ದಯಪಾಲಿಸಿದ್ದಾರೆ. ಆದರೆ ನೀವು ಅದನ್ನು ಮರೆತ್ತಿದ್ದೀರಿ ಎಂದು ನನಗೆ ಅನ್ನಿಸುತ್ತದೆ. ಅಂತಹ ಮಹಾಪುರುಷನ ಹೆಸರನ್ನು ಇಂದುಯಾರು ಸ್ಮರಿಸುತ್ತಿಲ್ಲ ಈ ಬಗ್ಗೆ ನನಗೆ ಇಂದು ಕಳವಳವುಂಟಾಗಿದೆ ಮಹಿಳೆಯರಿಗೆ ಸಮಾನ ಸ್ಥಾನಮಾನ ಕಲ್ಪಿಸುವ ಸಂದರ್ಭದಲ್ಲಿ ನನ್ನ ಕೆಲವು ಸ್ನೇಹಿತರಿಗೆ ಈ ಧೀಮಂತ ವ್ಯಕ್ತಿಯ ನೆನಪಾಗಬಹುದು

ಅವರು ಕರ್ನಾಟಕದ ಪಾಲಿನ ಬಹುದೊಡ್ಡ ಸುಧಾರಕ ಎನ್ನಿಸಿದ್ದರು ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರದ ಜನತೆ ಆ ಮಹಾಪುರುಷನ ಬಗ್ಗೆ ಚೆನ್ನಾಗಿ ತಿಳಿದಿದ್ದರು ಆತ 12 ನೇ ಶತಮಾನದ ಕ್ರಾಂತಿ ಪುರುಷ ಆತನ ಹೆಸರು ಬಸವಣ್ಣ ಅವರು ಮಹಿಳೆಯರಿಗೆ ಸಮಾನ ಅವಕಾಶ ಹಾಗೂ ಸ್ಥಾನಮಾನ ಕಲ್ಪಿಸಿದರೆ ಸಂಸದೀಯ ಚುನಾವಣೆಗಳಲ್ಲಿ ಭಾಗವಹಿಸುವಂತೆ ಅವರು ಮಹಿಳೆಯರನ್ನು ಕೇಳುತ್ತಿದ್ದರು. ಪ್ರಾದೇಶಿಕ ಭಾಷೆಯಲ್ಲಿ ಅನೇಕ ಸತ್ವಯುತ ವಚನಗಳನ್ನು ಅವರು ಬರೆದರು ಸಾಮಾಜಿಕ ಸುಧಾರಣೆ ಅಸ್ಪೃಶ್ಯತೆ ನಿವಾರಣೆ ಮಹಿಳಾ ಸಮಾನತೆ ಇತ್ಯಾದಿ ವಿಷಯಗಳಲ್ಲಿ ಕ್ರಾಂತೀಕಾರಕ ಬದಲಾವಣೆ ತಂದ ಪ್ರಥಮ ಸುಧಾರಣಾ ಪುರುಷ ಬಸವಣ್ಣ ನಮ್ಮ ಮಹಿಳೆಯರು ಹೇಡಿಗಳಲ್ಲ ಝೂನ್ಸಿರಾಣಿ ಲಕ್ಷ್ಮೀಬಾಯಿ ಮತ್ತು ಕಿತ್ತೂರು ಚೆನ್ನಮ್ಮ ಅವರಂತಹ ಧೀರ ವನಿತೆಯರು ಬ್ರಿಟಿಷರ ವಿರುದ್ಧ ಹೋರಾಡಿದ ನಿದರ್ಶನಗಳಿವೆ ಮೀಸಲಾತಿಗಾಗಿ ನಾವು ಅಪೇಕ್ಷಿಸುತ್ತಿಲ್ಲ. ಆದರೆ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯ ತಡೆಗೆ ನೀವು ಪರಿಹಾರ ರೂಪಿಸಬೇಕಿದೆ.

ಮಾನ್ಯ ಉಪಸಭಾಧ್ಯಕ್ಷರು: ಒಂದು ನಿಮಿಷ ನನ್ನ ಬಳಿ ದೊಡ್ಡ ಪಟ್ಟಿಯಿದೆ.

ಶ್ರೀಮತಿ ಬಸವರಾಜೇಶ್ವರಿ: ದಯವಿಟ್ಟು ನನಗೆ ಅಡ್ಡಿ ಪಡಿಸಬೇಡಿ ಬಾಲ್ಯ ವಿವಾಹ, ಮಹಿಳೆಯರ ಕಳ್ಳ ಸಾಗಣೆಯಂತಹ ಕೃತ್ಯಗಳ ತಡೆಗೆ ಸಂಸತ್ತು ಹಲವಾರು ಕಾಯ್ದೆಕಾನೂನುಗಳನ್ನು ಜಾರಿಗೊಳಿಸಿದೆ. ಆದರೆ ಇದುವರೆಗೆ ಅದರ ಫಲವೇನು? ಪ್ರತಿದಿನ ಅದೆಷ್ಟು ವರದಕ್ಷಿಣೆ ಸಾವುಗಳು ನಡೆಯುತ್ತಿವೆ? ವರದಕ್ಷಿಣೆ ಸಾವು ಹೆಚ್ಚಳ ಕುರಿತು ಮಾನ್ಯ ಸಚಿವರು ನೀಡಿರುವ ಹೇಳಿಕೆಗೆ ನಾನಿಲ್ಲಿ ಲಿಖಿತ ಉತ್ತರ ನೀಡಲು ಬಯಸುತ್ತೇನೆ. ನಾನು ಇಂದಿನ ಸರ್ಕಾರವನ್ನಾಗಲೀ ಅಥವಾ ಇದರ ಹಿಂದಿನ ಸರ್ಕಾರವನ್ನಾಗಲಿ ದೂಷಿಸುತ್ತಿಲ್ಲ ಆದರೆ ಇಲ್ಲಿನ ವಿಷಯವೆಂದರೆ ವರದಕ್ಷಿಣೆ ಸಾವುಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿವೆ ಅವನ್ನು ನೀವು ಅರಿತುಕೊಳ್ಳಬೇಕಿದೆ ಸಚಿವರು ಹೇಳಿದ ಲಿಖಿತ ಹೇಳಿಕೆಯ ಪ್ರಕಾರ 1987 ರಲ್ಲಿ, 7767 ಅತ್ಯಾಚಾರ ಪ್ರಕರಣಗಳು ದಾಖಲಾಗಿವೆ. ಈ ಸಂಖ್ಯೆ 1988 ರಲ್ಲಿ 876 ಕ್ಕೆ ಜಿಗಿಯಿತು, 1989 ರಲ್ಲಿ 8207 ಪ್ರಕರಣಗಳು ದಾಖಲಾದವು 1987 ರಲ್ಲಿ 9016 ಅಪಹರಣ ಪ್ರಕರಣಗಳು ಬೆಳಕಿಗೆ ಬಂದಿವೆ. ಈ ಸಂಖ್ಯೆ 1988 ರಲ್ಲಿ 9633 ಮತ್ತು 1989 ರಲ್ಲಿ 9202 ಆಗಿದೆ.

1987 ರಲ್ಲಿ 1912 ವರದಕ್ಷಣೆ ಪ್ರಕರಣಗಳು ದಾಖಲಾಗಿವೆ. ಈ ಸಂಖ್ಯೆ 1988 ರಲ್ಲಿ 2,209 ಮತ್ತು 1989ರಲ್ಲಿ 3,829ಕ್ಕೆ ಏರಿದೆ ಈ ಅಂಕಿ ಅಂಶಗಳನ್ನು ಮಾನ್ಯ ಸಚಿವರು ರಾಜ್ಯ ಸಭೆಗೆ ನೀಡಿದ್ದಾರೆ ಕಟ್ಟು ನಿಟ್ಟಿನ ಕಾಯ್ದೆ ಜಾರಿ ಮಾಡಿರುವ ವರತಾಗಿಯೂ ವರದಕ್ಷಣೆ ಸಾವಿನ ಸಂಖ್ಯೆ ಹೆಚ್ಚಾಗಿರುವುದನ್ನು ಇದು ತೋರಿಸುತ್ತದೆ ಆದ್ದರಿಂದ ನಾನು ಹೇಳುವುದೇನೆಂದರೆ ಬರೀ ಕಾಯ್ದೆ ಕಟ್ಟಳೆಗಳು ಮಾತ್ರ ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರವಲ್ಲ. ಕಾನೂನಿನ ಈ ತುಣುಕು ಎಲ್ಲೋ 5 ಜನರಿಗೆ ನೆರವಾಗುತ್ತದೆ ಅಷ್ಟೆ.

ಉಪಾಸಭಾಧ್ಯಕ್ಷರು: ಈಗಾಗಲೇ ಒಂದು ನಿಮಿಷ ತೆಗೆದುಕೊಂಡಿದ್ದೀರಿ, ದಯವಿಟ್ಟು ಮಾತು ಮುಗಿಸಿ.

ಶ್ರೀಮತಿ ಬಸವರಾಜೇಶ್ವರಿ: ಐವರು ಸದಸ್ಯರ ಸಭೆ ವಿವಿಧ ರಾಜ್ಯಗಳು ಎದುರಿಸುತ್ತಿರುವ ಸಮಸ್ಯೆಗೆ ಪರಿಹಾರ ಸೂಚಿಸುತ್ತದೆ ಅನ್ನುವುದು ನಿಮ್ಮ ಮಾತಿನ ಅರ್ಥವೇ? ಇಲ್ಲಿ ನನ್ನ ರಾಜ್ಯ ಮತ್ತು ಮಹಾರಾಷ್ಟ್ರದ ನಿದರ್ಶನವನ್ನು ನೀಡುತ್ತೇನೆ ಉಪಸಭಾಧ್ಯಕ್ಷರು ಉದಾರತೆ ತೋರುತ್ತಿಲ್ಲ ಏಕೆ ಅನ್ನುವುದು ನನಗೆ ಅರ್ಥವಾಗುತ್ತಿಲ್ಲ ಅವರ ರಾಜ್ಯ ಮಹಾರಾಷ್ಟ್ರದ ಬಗ್ಗೆ ನಾನು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ದೇವದಾಸಿ ಪದ್ಧತಿಯನ್ನು ಅಲ್ಲಿಯೂ ಕೂಡ ನಿರ್ಬಂಧಿಸಲಾಗಿದೆ ಆದರೆ ಈ ಪದ್ಧತಿಯ ಅಂಕಿ ಅಂಶಗಳನ್ನು ನೀಡಿದರೆ ಖಂಡಿತ ಅವರು ಬೆರಗಾಗುತ್ತಾರೆ ಉತ್ತರ ಭಾಗದ ರಾಜ್ಯಗಳಲ್ಲಿ ಈ ಪದ್ಧತಿ ಇಲ್ಲ ಆದರೆ ಮಹಾರಾಷ್ಟ್ರ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಇದು ವ್ಯಾಪಕವಾಗಿ ಆಚರಣೆಯಲ್ಲಿದೆ ಅಗತ್ಯವೆನಿಸಿದರೆ ನಾನು ಈ ಕುರಿತು ಪತ್ರಿಕಾ ವರದಿಗಳನ್ನು ನಿದರ್ಶನವಾಗಿ ನೀಡಬಲ್ಲೆ ಅವರ ಕ್ಷೇತ್ರಕ್ಕೆ ಸಮೀಪ ಎನಿಸುವ ಬೆಳಗಾವಿಯಲ್ಲಿ ದೇವದಾಸಿ ಪದ್ಧತಿ ಜಾರಿಯಲ್ಲಿದೆ ಬೆಳಗಾವಿ ಜಿಲ್ಲೆಯಲ್ಲಿ 4,700 ಮತ್ತು ಬಿಜಾಪುರ ಜಿಲ್ಲೆಯಲ್ಲಿ 4,600 ಕುಟುಂಬಗಳು ದೇವದಾಸಿ ಪದ್ಧತಿಯನ್ನು ಒಪ್ಪಿ ಬದುಕುತ್ತಿವೆ ಕ್ಷೇತ್ರದ ಹಳ್ಳಿಯೊಂದರ ಶೇ 60 ರಷ್ಟು ಕುಟುಂಬಗಳು ದೇವದಾಸಿ ಪದ್ಧತಿಗೆ ಹೊಂದಿಕೊಂಡಿವೆ ಧಾರವಾಡ ಮತ್ತಿತ್ತರ ರಸ್ತೆಗಳಲ್ಲಿಯೂ ಸಹಸ್ರಾರು ಕಟುಂಬಗಳು ಈ ಪದ್ಧತಿಗೆ ಬಲಿಯಾಗಿವೆ ನಾಲ್ಕರಿಂದ ಇಪ್ಪತ್ತು ವರ್ಷ ಪ್ರಾಯದ ಬಾಲಕೀಯರನ್ನು ಕರೆದೊಯ್ದು ದೇವದಾಸಿ ಪದ್ಧತಿಗೆ ಒಪ್ಪಿಸಲಾಗುತ್ತವೆ ಈ ಅನಿಷ್ಟ ಪದ್ಧತಿ ನಮ್ಮಲ್ಲಿ ಯಾವುದೇ ನಾಚಿಕೆ ಭಾವನೆಯನ್ನು ಮೂಡಿಸುತ್ತಿಲ್ಲ ಈ ಪದ್ಧತಿ ನಿರ್ಮೂಲನೆ ಮಾಡಬೇಕಿದೆ ಆದ್ದರಿಂದಲೇ ನಾನು ಆರಂಭದಲ್ಲಿಯೇ ಹೇಳಿದ್ದು ಸಮಸ್ಯೆಗಳು ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುತ್ತವೆಯೆಂದು

ಸಮುದಾಯವೊಂದರಲ್ಲಿ ಗರ್ಭಿಣಿ ಮಹಿಳೆಯನ್ನು ನಿರ್ಜನ ಪ್ರದೇಶದಲ್ಲಿ ಎಸೆಯಲಾಗುತ್ತದೆ. ಜನಸಂಪರ್ಕವೇ ಇಲ್ಲದ ಗುಡಿಸಲೊಂದರಲ್ಲಿ ಗರ್ಭಿಣೀಯನ್ನು ಕೂಡಿ ಹಾಕಲಾಗುತ್ತದೆ ಯಾರು ಆಕೆಯ ಬಳಿ ಸುಳಿಯುವುದಿಲ್ಲ ಆಹಾರ ಕೂಡ ಹೊರಗಡೆಯಿಂದಲೇ ಎಸೆಯುತ್ತಾರೆ. ಹೆರಿಗೆಯ 10 ದಿನಗಳ ಬಳಿಕವೆ ಆಕೆಯನ್ನು ನೋಡಲಾಗುತ್ತದೆ ಇಂತಹ ಅನಿಷ್ಟ ಆಚರಣೆ ಇಂದಿನ ದಿನಗಳಲ್ಲಿ ಜಾರಿಯಿದೆ.

ತಮಿಳು ನಾಡಿನಲ್ಲಿ ಮಹಿಳೆಯರ ಬಗ್ಗೆ ಕೆಟ್ಟ ನಿರ್ಲಕ್ಷ್ಯವಿದೆ ಅಲ್ಲಿ ಹೆಣ್ಣು ಮಗು ಜನಿಸಿದರೆ ಅದಕ್ಕೆ ಉಣಸಿ ಅಥವಾ ಅದರ ಬಾಯಿಯಲ್ಲಿ ಭತ್ತದ ಕಾಳು ಹಾಕಿ ಕೊಲೆಗೈಯ್ಯಲು ತಾಯಿಗೆ ಸೂಚಿಸಲಾಗುತ್ತದೆ. ಇದಕ್ಕೆ ಕಾರಣ ವರದಕ್ಷಿಣೆ ಪೆಡಂಬೂತ ಆದ್ದರಿಂದಲೇ ನಾನು ಹೇಳಿದ್ದು ಸಮಸ್ಯೆ ರಾಜ್ಯದಿಂದ ರಾಜ್ಯಕ್ಕೆ ಭಿನ್ನವೆಂದು.

ಇಂತಹ ಸಮಸ್ಯೆಗಳ ಇತ್ಯಾರ್ಥಕ್ಕೆ ಉಭಯ ಸದನಗಳ ಸದಸ್ಯರುಗಳನ್ನು ಒಳಗೊಂಡ ತಜ್ಞರು ಸಮಿತಿ ರಚನೆಯಾಗಬೇಕು. ಈ ಸಮಿತಿ ಎಲ್ಲಾ ರಾಜ್ಯಗಳಿಗೆ ಭೇಟಿ ನೀಡಿ ವಾಸ್ತವಾಂಶ ಅಧ್ಯಾಯನ ಮಾಡಿ ಅಂತಹ ಕುಟುಂಬಗಳ ಪುನರ್ ವಸತಿಗೆ ಏನು ಬೇಕು ಅನ್ನುವುದನ್ನು ಅರಿತು ವರದಿ ಮಾಡಬೇಕು ಪುನರ್ ವಸತಿ ಕಲ್ಪಿಸುವ ಬದಲು ಇಂತಹ ಒಂದು ತುಂಡು ಶಾಸನವನ್ನು ಜಾರಿಗೊಳಿಸಿ ಸುಧಾರಣೆ ತರುವುದು ಅಸಾಧ್ಯ ಈ ಶಾಸನದಡಿ 2 ಕೋಟಿ ರೂಪಾಯಿಗಳನ್ನು ಮೀಸಲಿಡಲಾಗಿದೆ ಆದರೆ ಈ ಮೊತ್ತ ಏನಕ್ಕೂ ಸಾಲದು ಕರ್ನಾಟಕದಲ್ಲಿ ದೇವದಾಸಿಯವರಿಗಾಗಿ ಪುನರ್ ವಸತಿ ಕಾರ್ಯಕ್ರಮ ಚಾಲನೆಯಲ್ಲಿದೆ ಆದರೆ ಈ ಕಾರ್ಯಕ್ರಮ ಅದೆಷ್ಟರ ಮಟ್ಟಿಗೆ ಯಶಸ್ಸು ಕಾಣುತ್ತದೆ ಅನ್ನುವುದನ್ನು ಹೇಳಲಾಗದು 25 ಮಹಿಳೆಯರು ಈ ಕಾರ್ಯಕ್ರಮದ ವ್ಯಾಪ್ತಿಗೆ ಸೇರಿದರು ಎಂದು ಭಾವಿಸುವುದಾದರೆ ಮುಂದಿನ ಯೋಜನೆ ಏನು? ಅವರ ಕುಟುಂಬಗಳನ್ನು ಯಾರು ನೋಡಿಕೊಳ್ಳುತ್ತಾರೆ ಅಂತಹವರ ಮಕ್ಕಳ ಪೋಷಣೆಯ ಹೊಣೆ ಯಾರದ್ದು? ಅವರ ಆರ್ಥಿಕ ಅಭಿವೃದ್ಧಿಯನ್ನು ಹೇಗೆ ಸರಿದೂಗಿಸುತ್ತೀರಿ? ಇಂತಹ ಪ್ರಶ್ನೆಗಳಿಗೆ ಮೊದಲು ಉತ್ತರ ಕಂಡುಕೊಳ್ಳಬೇಕಿದೆ ಅದಕ್ಕಾಗಿಯೆ ನಾವು ತಜ್ಞರ ಸಮಿತಿ ರಚಿಸಬೇಕಿದೆ ಸಮಿತಿ ಪ್ರತಿರಾಜ್ಯಕ್ಕೆ ಭೇಟಿ ನೀಡಿ ಸ್ವಯಂ ಸೇವಾ ಸಂಘಟನೆಗಳಿಂದ ಮಾಹಿತಿ ಕಲೆ ಹಾಕಬೇಕು ಸಂಗ್ರಹಿತ ಅಂಕಿ ಅಂಶಗಳ ಆಧಾರದ ಮೇಲೆ ಪುನರ್ ವಸತಿ ಹಾಗೂ ಆ ರೀತಿಯ ಕಾರ್ಯಕ್ರಮಗಳಿಗೆ ಎಷ್ಟು ಹಣ ಬೇಕಾಗುತ್ತದೆ ಅನ್ನುವುದನ್ನು ನಿರ್ಧರಿಸಬೇಕು ಅನಿಷ್ಟ ಆಚರಣೆಗಳನ್ನು ತೊಡೆದು ಹಾಕುವ ನಿಟ್ಟಿನಲ್ಲಿ ನೀವು ಯಾವ ರೀತಿಯ ಪ್ರಯತ್ನ ನಡೆಸಿದ್ದಿರಿ? ಮಹಿಳೆಯರ ಮೇಲಿನ ಸೌರ್ಜನ್ಯಗಳ ನಿರ್ಮೂಲನಕ್ಕೆ ನಿಮ್ಮ ಕ್ರಮವೇನು? ಕಾನೂನಿನ ನೆರವು ಎಂತಹದ್ದು? ನ್ಯಾಯಾಲಯಗಳಿವೆ ಆದರೆ ಮಹಿಳೆಯರ ಸಮಸ್ಯೆಗಳನ್ನು ಕೇಳುವವರಾರು? ಅವರ ನೀವಿನ ಕೂಗು ಯಾರಿಗೂ ಕೇಳಿಸುತ್ತಿಲ್ಲ.

ನಿನ್ನೆ ನನ್ನ ಸೋದರಿ ಹೇಳಿದಳು ಇದು ಪುರುಷ ಪ್ರಧಾನ ಸಮಾಜ ಈ ಮಾತು ಖಂಡಿತ ನಿಜ ಯಾಕೆಂದರೆ ಮಹಿಳೆಯ ಸಮಸ್ಯೆಗಳ ಇತ್ಯಾರ್ಥಕ್ಕೆ ಯಾರು ಮುಂದೆ ಬರುತ್ತಿಲ್ಲ.

ನಿನ್ನೆ ಈ ವಿಷಯದಲ್ಲಿ ಪ್ರಧಾನ ಮಂತ್ರಿಗಳು ಮಧ್ಯಪ್ರವೇಶ ಮಾಡಿದರು ಆ ವೇಳೆ ನಾನು, ಮಂಡಲ್ ವರದಿ ಪ್ರಕಾರ ಹಿಂದುಳಿದ ವರ್ಗದ ಮಹಿಳೆಯರಿಗೆ ಕೊಡಲು ಉದ್ದೇಶಿಸಿರುವ ಶೇ 5 ರಷ್ಟು ಮೀಸಲಾತಿ ತೃಪ್ತಿಕರವಾಗಿದೆಯೆ ಎಂದು ಕೇಳಿದೆ.

ಹಿಂದುಳಿದ ವರ್ಗಗಳಲ್ಲಿ ಅನೇಕ ಮಹಿಳೆಯರು ನಿರುದ್ಯೋಗಿಗಳಾಗಿದ್ದಾರೆ. ಅವರಿಗೆ ಉದ್ಯೋಗ ಏಕೆ ಒದಗಿಸಬಾರದು? ಅವರನ್ನು ಸ್ವತಂತ್ರರನ್ನಾಗಿ ಬದುಕಲು ಅವಕಾಶ ಮಾಡಿಕೊಡಿ ನಿರಂತರವಾಗಿ ಪುರುಷರ ಅಧೀನರಾಗಿ ಬದುಕಲು ಆಗದು ಮಹಿಳೆ ಆರ್ಥಿಕವಾಗಿ ಸಬಲಳಾದರೆ ತನ್ನನ್ನು ಕಾಡುವ ಸಮಸ್ಯೆಗಳ ವಿರುದ್ಧ ಹೋರಾಡಲು ಆಕೆಗೆ ಶಕ್ತಿ ಲಭ್ಯವಾಗುತ್ತದೆ. ಅವರಿಗೆ ನಾವು ಉತ್ತಮ ಪರಿಸರವನ್ನು ಕಲ್ಪಿಸಕೊಡಬೇಕು ನಾನು ಹೇಳಿದ ಪ್ರಕಾರ ಮಹಿಳೆ ಗುರು ಆಗುವ ಆರಂಭಿಕ ಹಂತದಲ್ಲಿದ್ದಾಳೆ ಆಕೆಯಿಂದಲೇ ರಾಷ್ಟ್ರಾಭಿವೃದ್ಧಿ ಸಾಧಿಸಬೇಕಿದೆ. ಮಕ್ಕಳು ಬುದ್ದಿ ಕಲಿಯುವುದು ಮಹಿಳೆಯಿಂದಲೆ ಅಂತಹ ಗುರುವಿಗೆ ನೀವು ಯಾವ ರೀತಿಯ ವಾತಾವರಣ ಕಲ್ಪಿಸಿಕೊಟ್ಟಿದ್ದಿರಿ? ಹಳ್ಳಿಗೆ ಹೋಗಿ ನೋಡಿದರೆ ನಿಮಗೆ ಮಹಿಳೆಯ ಹರಿಕಷ್ಟ ಅರ್ಥವಾಗುತ್ತದೆ ಅಲ್ಲಿ ದಿನದ ಕುಡಿತಕ್ಕಾಗಿ ಪತಿ ಪತ್ನಿಯನ್ನು ಹೊಡೆಯುವ ಕೆಟ್ಟ ದೃಶ್ಯ ಕಾಣಬಹುದು. ಇಂತಹ ಅನಿಷ್ಟ ವಾತಾವರಣ ತುಂಬ ಹಿಂದಿನಿಂದಲು ಉಳಿದುಕೊಂಡು ಬಂದಿದೆ ಇದು ಮುಂದುವರೆಯ ಬಾರದೆಂದು ನಾವು ಬಯಸುತ್ತೇವೆ. ಸರಿಯಾದ ವಾತಾವರಣವಿಲ್ಲದೆ ಮಹಿಳೆಯರು ಸೂಕ್ತ ವಾತಾವರಣವಿಲ್ಲದೆ ಸಂಕಷ್ಟಕ್ಕೆ ಗುರಿಯಾಗಿದ್ದಾರೆ. ಆದ್ದರಿಂದ ನಾನು ಎಲ್ಲಾ ರಾಜ್ಯಗಳಿಗೆ ಸಲಹೆ ನೀಡುವುದೆಂದರೆ ಜಿಲ್ಲಾ ಮಟ್ಟದಲ್ಲಿ ಸಮಿತಿಗಳನ್ನು ರಚಿಸಿ ಅದರಲ್ಲಿ ಮಹಿಳಾ ಸಂಕಷ್ಟಗಳ ಬಗ್ಗೆ ಅರಿವಿರುವ ಸದಸ್ಯರನ್ನು ನೇಮಿಸಬೇಕು ಸಮಿತಿಯ ಸದಸ್ಯರನ್ನು ವಿವಿಧ ಮಹಿಳಾ ಸಂಘಟನೆಗಳಿಂದ ಆಯ್ಕೆ ಮಾಡುವುದು ಸೂಕ್ತ.

ಹೊಲಗದ್ದೆಗಳಲ್ಲಿ ದುಡಿಯುವ ಮಹಿಳೆಯನ್ನು ನಾವು ಸಂಪೂರ್ಣ ಮರೆತ್ತಿದ್ದೇವೆ ಶೇ 80 ರಷ್ಟು ಮಹಿಳೆಯರು ತಮ್ಮ ಬದುಕನ್ನು ಜಮೀನುಗಳಲ್ಲಿ ದುಡಿಯುವ ಮೂಲಕ ಸವಿಸುತ್ತಿದ್ದಾರೆ. ಆದರೆ ಅವರನ್ನು ಪ್ರತಿನಿಧಿಸುವ ಜನ ಇಲ್ಲಿ ಇಲ್ಲದಿರುವುದು ವಿಷಾದನೀಯ ಅವರು ಸಮಾನ ವೇತನದಿಂದ ವಂಚಿತರಾಗಿದ್ದಾರೆ ಪುರುಷರಿಗೆ ಸರಿಸಮಾನ ದುಡಿಮೆ ಮಾಡುತ್ತಿದ್ದರೂ ಇಂದು ಅವರಿಗೆ ಸಮಾನ ವೇತನ ದೊರಕುತ್ತಿಲ್ಲ ಈ ನಿಟ್ಟಿನಲ್ಲಿ ನೀವು ಏನು ಕ್ರಮ ಕೈಗೊಂಡಿದ್ದೀರಿ?

ಅವರು ಕಾಂಗ್ರೆಸ್ ಪಕ್ಷವನ್ನು ದೂಷಿಸುತ್ತಿದ್ದಾರೆ ಕಾಂಗ್ರೆಸ್ ತಮಗಾಗಿ ಏನು ಮಾಡುತ್ತಿಲ್ಲ ವೆಂದು ಆರೋಪಿಸುತ್ತಿದ್ದಾರೆ ಇದನ್ನು ಸರಿಪಡಿಸುವ ನಿಟ್ಟಿನಲ್ಲಿ ಸರಿಯಾದ ದೃಷ್ಟಿಕೋನ ಒಳಗೊಂಡ ಯೋಜನೆಯನ್ನು ರೂಪಿಸಿರುವವರಾರು? ಮಹಿಳೆಯರಿಗೆ ಲಾಭದಾಯಕ ವೆನಿಸುವ ರೀತಿಯಲ್ಲಿ ಬ್ಯಾಂಕ್‌ಗಳನ್ನು ರಾಷ್ಟ್ರೀಕರಣ ಮಾಡಿದವರು ಯಾರು? ಇವತ್ತು ಮಹಿಳೆಯರು I.R.D.P. ಮೂಲಕ ಸುಲಭವಾಗಿ ಸಾಲ ಪಡೆಯುತ್ತಿದ್ದಾರೆ ಇದಕ್ಕೆ ಕಾರಣ ರಾಷ್ಟ್ರೀಕರಣ ಅಲ್ಲವೇ? ಅವರು ಯಂತ್ರಗಳನ್ನು ಪಸುಗಳನ್ನು ಹಾಗೂ ಇತರ ಸಾಕು ಪ್ರಾಣಿಗಳನ್ನು ಖರೀದಿಸುತ್ತಿಲ್ಲವೇ? ಅವರು ಅನೇಕ ಕೆಲಸಗಳನ್ನು ಮಾಡುತ್ತಿದ್ದಾರೆ. ಆ ಬಗ್ಗೆ ನಿಮಗೆ ಸಂತಸವಿಲ್ಲವೇ? ನಮ್ಮ ಮಾಜಿ ಪ್ರಧಾನಿಗಳು ಪಂಚಾಯತ್‌ರಾಜ್ ಮಸೂದೆಯನ್ನು ಜಾರಿಗೊಳಿಸಿದ್ದಾರೆ ಅವರು ಮಹಿಳೆಯರಿಗೆ ಪ್ರಾತಿನಿಧ್ಯ ಕಲ್ಪಿಸಲಿಲ್ಲವೇ? ನಮಗೆ ಮಹಿಳೆಯರ ಬಗ್ಗೆ ಅನುಕಂಪವಿದೆ ಅವರನ್ನು ಮುಖ್ಯವಾಹಿನಿಗೆ ತರುವ ಕಾಳಜಿಯಿದೆ.

ಈಗ ತುಂಡು ಶಾಸನವೊಂದನ್ನು ಜಾರಿಗೊಳಿಸಿ ಐವರ ಆಯೋಗ ರಚಿಸಿದ್ದೀರಿ. ಈ ಮೂಲಕ ಗ್ರಾಮೀಣ ಮಹಿಳೆಯರ ಸಂಕಷ್ಟ ನಿವಾರಿಸುವುದು ನಿಮ್ಮ ಉದ್ದೇಶವೆ? ಹೌದು ಎಂಥಾದರೆ ಈ ತುಂಡು ಶಾಸನದಿಂದ ಅದು ಸಾಧ್ಯವಾಗದು.

ಇಷ್ಟು ಸಲಹೆ ಸೂಚನೆಗಳೊಂದಿಗೆ ನಾನು ಮಸೂದೆಯಲ್ಲಿ ಸ್ವಾಗತಿಸುತ್ತೇನೆ ಇದು ಒಂದು ಆರಂಭ ಮುಂದುವರೆದು ಸಚಿವರು ಇನ್ನಷ್ಟು ಸುಧಾರಣಾ ಕಾರ್ಯಗಳನ್ನು ಕೈಗೊಳ್ಳುವ ಭರವಸೆ ನನಗಿದೆ.

ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ): ಮಾನ್ಯ ಉಪಸಭಾಧ್ಯಕ್ಷರೇ ವಿಧವೆಯರ ಬದುಕಿನ ಪುನರ್ ನಿರ್ಮಾಣದ ಉದ್ದೇಶದಿಂದ ಶ್ರೀ ಜಾನಿಯವರು ಮಂಡಿಸಿರುವ ವಿಧವಾ ವೇತನ ಮಸೂದೆಯನ್ನು ನಾನು ತುಂಬು ಹೃದಯದಿಂದ ಸ್ವಾಗತಿಸುತ್ತೇನೆ.

ನಮ್ಮ ರಾಷ್ಟ್ರದಲ್ಲಿ ಇಂದಿಗೂ ಕೆಲವು ಅನಿಷ್ಟ ಆಚರಣೆಗಳು ಮುಂದುವರೆದುಕೊಂಡು ಬಂದಿವೆ ದೇವದಾಸಿ ಪದ್ಧತಿ, ವರದಕ್ಷಣೆ ಪಿಡುಗು ಸೇರಿದಂತೆ ಹತ್ತು ಹಲವು ಕುರುಡು ಆಚರಣೆಗಳು ಇಂದಿನ ಸಮಾಜದಲ್ಲಿ ಮಹಿಳೆಯ ಸ್ಥಾನಮಾನವನ್ನು ತುಚ್ಛೀಕರಿಸಿವೆ ದೇವರ ಹೆಸರಿನಲ್ಲಿ ಮಹಿಳೆಯನ್ನು ವೇಶ್ಯಾ ವಾಟಿಕೆಯಂತಹ ಕೆಟ್ಟ ಆಚರಣೆಗೆ ದೂಡುವ ಪದ್ಧತಿ ಇಂದಿಗೂ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದಲ್ಲಿ ಕಾಣಬಹುದಾಗಿದೆ ಈ ಹೇಯ ಆಚರಣೆಯನ್ನು ನಿರ್ಮೂಲನೆ ಮಾಡಲು ನಾವು ಹಲವು ರೀತಿಯಲ್ಲಿ ಪ್ರಯತ್ನ ಮಾಡಿದ್ದೇವೆ ಈ ಸಂಪ್ರದಾಯಕ್ಕೆ ಮೊದಲ ಬಲಿಪಶುವಾಗುತ್ತಿರುವವರು ಬಡ ಕುಟುಂಬಗಳ ಮಹಿಳೆಯರು ಇವರ ನಿರ್ಮೂಲನೆಗೆ ಸಚಿವಾಲಯ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ತಿಳಿಯಲು ನಾನು ಇಚ್ಛಿಸಿದ್ದೇನೆ ಈ ಆಚರಣೆ ಕಿತ್ತೊಗೆಯಲು ಕರ್ನಾಟಕದಲ್ಲಿ ಕಾನೂನುಗಳು ಜಾರಿಯಲ್ಲಿವೆ ದೇವದಾಸಿ ಮತ್ತು ಅಂತಹ ಆಚರಣೆಗೆ ಬಲಿಯಾದ ಮಹಿಳೆಯರ ಮಕ್ಕಳುಗಳನ್ನು ನೋಡಿಕೊಳ್ಳಲು ಆ ರಾಜ್ಯದಲ್ಲಿ ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿದೆ .

ಈ ಭಾಷಣ ಮೂಲತಃ ಕನ್ನಡ ಭಾಷೆಯಲ್ಲಿ ಮಂಡನೆಯಾಯಿತು.

ಈ ಎಲ್ಲಾ ಕ್ರಮಗಳ ಹೊರತಾಗಿಯೂ ಮಹಿಳೆ ವಿರುದ್ಧದ ಶೋಷಣೆ ಮುಂದುವರೆದಿದೆ. ವರದಕ್ಷಿಣೆ ಬಾಲ್ಯವಿವಾಹ ಮತ್ತು ಇತರ ಸಾಂಪ್ರದಾಯಿಕ ಆಚರಣೆಗಳು ಈಗಲೂ ನಡೆಯುತ್ತಿವೆ. ಬಾಲ್ಯವಿವಾಹ ನಿಷೇಧಕ್ಕೆ ಕಾಯ್ದೆ ಜಾರಿಯಿದೆ ಇದನ್ನು ಆಚರಿಸುವವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ ಇತ್ತೀಚಿನ ದಿನಗಳಲ್ಲಿ ಮದುವೆ ಖರ್ಚು ವೆಚ್ಚ ಕೂಡ ಗಗನಕ್ಕೇರಿದೆ ಆದರೂ ಬಾಲ್ಯವಿವಾಹ ಮುಂದುವರೆದಿವೆ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಇಂತಹ ಮದುವೆಗಳು ಹೆಚ್ಚಾಗಿ ನಡೆಯುತ್ತಿವೆ ಈ ಅನಿಷ್ಟ ಆಚರಣೆಗಳು ನಿರ್ಮೂಲನೆ ಗೊಳ್ಳದಿದ್ದರೆ ಮಹಿಳಾ ಪ್ರಗತಿ ಯನ್ನುವುದು ಕನಸಿನ ಮಾತಾಗಿ ಉಳಿಯುತ್ತದೆ. ನಾವು ನಿಜವಾಗಿ ಮಹಿಳೆಯನ್ನು ಗೌರವಿಸುವುದಾದರೆ ಮೊದಲು ಈ ಅನಿಷ್ಟ ಆಚರಣೆಗಳಿಗೆ ತಡೆ ಹಾಕಲು ಗಂಭೀರ ಪ್ರಯತ್ನ ಮಾಡಬೇಕು.

ಇತ್ತೀಚೆಗೆ ನಾನು ಇಂಡಿಯಾದೇ ನಿಯತ ಕಾಲಿಕೆಯಲ್ಲಿ ಲೇಖನವೊಂದನ್ನು ಓದಿದೆ ತಮಿಳುನಾಡಿನ ಮಧುರೈ ಜಿಲ್ಲಾ ಪ್ರದೇಶದಲ್ಲಿ ಇದುವರೆಗೆ 60,000 ಹೆಣ್ಣು ಶಿಶುಗಳನ್ನು ಹತ್ಯೆಗೈಯಲಾಗಿದೆ ಎನ್ನುವ ಆಘಾತಕಾರಿ ಅಂಶ ಆ ಲೇಖನದಿಂದ ತಿಳಿಯಿತು ಈ ಪ್ರದೇಶದ ಜನ ಮೊದಲ ಮಗು ಹೆಣ್ಣಾದರೆ ಸ್ವಲ್ಪ ಮಟ್ಟಿಗೆ ಸಹಿಸಿಕೊಳ್ಳುತ್ತಾರೆ ಒಂದು ವೇಳೆ ಎರಡನೇಯ ಮಗು ಕೂಡ ಹೆಣ್ಣಾದರೆ ಅವರು ಸಹಿಸುವುದಿಲ್ಲ ತಕ್ಷಣವೇ ಅದನ್ನು ಹತ್ಯೆಗೈದು ಬಿಸಾಡುತ್ತಾರೆ. ಮಗುವಿನ ಬಾಯಿ ಮತ್ತು ಮೂಗಿನ ಮೇಲೆ ವಸ್ತ್ರದಿಂದ ಅದುಮಿ ಹಿಡಿದು ಹತ್ಯೆಗೈಯುತ್ತಾರೆ ಸಹಜವಾಗಿಯೇ ಮಗು ಕ್ಷಣಾರ್ಧದಲ್ಲಿ ಕೊನೆಯುಸಿರೆಳೆಯುತ್ತದೆ ವಿಷ ಉಣಿಸಿ ಕೊಲೆಗೈಯುವ ಇನ್ನೊಂದು ವಿಧಾನ ಕೂಡ ಬಳಕೆಯಲ್ಲಿದೆ ವರದಕ್ಷಿಣೆ ಪಿಡುಗು ದುಬಾರಿಯಾಗಿರುವ ಮದುವೆ ವೆಚ್ಚ ಹೆಣ್ಣು ಶಿಶುವಿನ ಇಂತಹ ಹೇಯ ಹತ್ಯೆಗೆ ಕಾರಣ ಎನಿಸಿವೆ ಇಂತಹ ಪಾತಕ ಕೃತ್ಯಗಳ ಬಗ್ಗೆ ಸರ್ಕಾರ ಎಚ್ಚೆತ್ತುಕೊಳ್ಳಬೇಕಿದೆ ಈ ಆಚರಣೆಯ ಮಾಹಿತಿ ಇಲ್ಲದಿದ್ದರೆ ಸರ್ಕಾರ ಈಗಲಾದರು ಜಾಗೃತಗೊಂಡು ಮಾಹಿತಿ ಕಲೆಹಾಕಬೇಕು ಜೊತೆಗೆ ಅದಕ್ಕೊಂದು ತಡೆ ಹಾಕುವ ಸೂಕ್ತ ರೀತಿಯ ತುರ್ತಿನ ಕ್ರಮ ಕೈಗೊಳ್ಳಬೇಕು.

ಮಹಿಳಾ ಅಭಿವೃದ್ಧಿಗಾಗಿ ನಮ್ಮ ಪ್ರಧಾನಮಂತ್ರಿಗಳು ವಿಶೇಷ ವ್ಯವಸ್ಥೆ ಮಾಡಿದ್ದಾರೆ. ನಿರ್ಗತಿಕ ಮಹಿಳೆಯರ ಕಲ್ಯಾಣಕ್ಕೆ ಅನೇಕ ಕ್ರಮಗಳನ್ನು ಕೈಗೊಂಡಿದ್ದಾರೆ ಆದರೆ ಕ್ರೂರ ಸಾಂಪ್ರದಾಯಿಕ ಆಚರಣೆಗಳ ತಡೆಗೆ ಈಗಿನ ಸುಧಾರಣ ಕ್ರಮಗಳು ಸಾಕಾಗದು.

ಸಂಕಷ್ಟದಲ್ಲಿರುವ ಮಹಿಳೆಯರಿಗೆ ನೆರವು ಕಲ್ಪಿಸುವ ನಿಟ್ಟಿನಲ್ಲಿ ವಿವಿಧ ರಾಜ್ಯಗಳಲ್ಲಿ ವಿಭಿನ್ನ ರೀತಿಯ ಯೋಜನೆಗಳು ಜಾರಿಯಿವೆ ಗರ್ಭಿಣಿ ವಿಧವೆಯರಿಗೆ ಹಾಗೂ ಅಂಗವಿಕಲ ಮಹಿಳೆಯರಿಗೆ ನೀಡಲಾಗುತ್ತಿರುವ ನೆರವಿನ ಮೊತ್ತ ತೀರ ಕಡಿಮೆಯೆನಿಸುತ್ತದೆ ನನ್ನ ಪ್ರಕಾರ ಈಗಿನ ನೆರವು ಕಾರ್ಯಕ್ರಮಗಳು ಅಗತ್ಯವಿರುವ ಮಹಿಳೆಯರಿಗೆ ಅಂತಹ ದೊಡ್ಡ ಅನುಕೂಲವೇನು ಒದಗಿಸುತ್ತಿಲ್ಲ I.U.C.ಅಳವಡಿಕೆಗೆ ಬಿಡುಗಡೆಯಾಗುವ ಹಣದ ಪೂರ್ಣ ಮೊತ್ತವನ್ನು ಗ್ರಾಮೀಣ ಪ್ರದೇಶಗಳ ಅದೆಷ್ಟು ಮಹಿಳೆಯರು ಪಡೆಯುತ್ತಿದ್ದಾರೆ?ಇದರಲ್ಲಿ ಅಪಾರ ಪ್ರಮಾಣದ ಹಣ ಮಧ್ಯದಲ್ಲಿಯೇ ಸೋರಿ ಹೋಗುತ್ತಿದ್ದರಿಂದ ಸರ್ಕಾರ ಇದನ್ನು ಸರಿಪಡಿಸುವ ನಿಟ್ಟಿನಲ್ಲಿ ಸೂಕ್ತ ಕ್ರಮ ಕೈಗೊಳ್ಳುವ ಅಗತ್ಯವಿದೆ ಬಿಡುಗಡೆಯಾಗುವ ಹಣ ನೇರವಾಗಿ ಫಲಾನುಭವಿಗಳಿಗೆ ತಲುಪುವ ವ್ಯವಸ್ಥೆಯಾಗಬೇಕು ಜೊತೆಗೆ ವಿಧವಾ ವೇತನವಾಗಿ ಸದ್ಯ ನೀಡಲಾಗುತ್ತಿರುವ ಮಾಸಿಕ 60 ರೂಪಾಯಿಗಳನ್ನು 100 ರೂಪಾಯಿಗೆ ಹೆಚ್ಚಿಸಬೇಕೆಂದು ಸಚಿವರನ್ನು ಈ ಸಂದರ್ಭದಲ್ಲಿ ಕೋರುತ್ತೇನೆ.

ಭೂ ಸುಧಾರಣ ಕಾಯ್ದೆವ ಜಾರಿಯ ಬಳಿಕ ಅನೇಕ ಜನ ವಿಧವೆಯರು ತಮ್ಮ ಜಮೀನನ್ನು ಕಳೆದುಕೊಂಡಿದ್ದಾರೆ ಟೆನೆನ್ಸಿ ಕಾಯ್ದೆ ಜಾರಿಯಲ್ಲಿದೆ ಆದರೆ ಆ ಕಾಯ್ದೆಯ ಪ್ರಕಾರ ಅಂತಹ ಮಹಿಳೆ ವ್ಯವಸಾಯ ಮಾಡುವಂತಿಲ್ಲ ಅಂತಹ ಸಂದರ್ಭದಲ್ಲಿ ಮಹಿಳೆ ಜಮೀನನ್ನು ಗುತ್ತಿಗೆ ಪಡೆಯಲು ಅವಕಾಶವಿದೆ ಈ ರೀತಿ ಜಮೀನು ಕಳೆದುಕೊಂಡ ನತದೃಷ್ಟ ವಿಧವೆಯರಿಗೆ ನೇರ ಪರಿಹಾರ ಧನ

ದೊರಕುವಂತೆ ನೋಡಿಕೊಳ್ಳಬೇಕಿದೆ ಅಂತರ್‌ಜಾತಿ ಮತ್ತು ವಿಧವಾ ವಿವಾಹಗಳಿಗೆ ನಮ್ಮ ಕೇಂದ್ರ ಸರ್ಕಾರ ಪ್ರೋತ್ಸಾಹ ನೀಡುತ್ತಿರುವುದು ಖುಷಿಯ ಸಂಗತಿಯಾಗಿದೆ ವಿಧವೆಯರ ಮಾಹಿತಿ ಆಧರಿಸಿ ವಿಧವೆಯರ ಪುನರ್‌ ವಸತಿ ಕಾರ್ಯಕ್ರಮ ಜಾರಿಯಾಗಬೇಕು ಗ್ರಾಮೀಣ ಪ್ರದೇಶಗಳಲ್ಲಿ ಅಕ್ಷರಸ್ಥ ವಿಧವೆಯರು N.R.E.P. ಪ್ರಾಥಮಿಕ ಶಾಲೆ ಇತ್ಯಾದಿಗಳ ಮೂಲಕ ಪುನರ್ ವಸತಿ ಕಂಡುಕೊಳ್ಳುತ್ತಿದ್ದಾರೆ ಆ ಮೂಲಕ ತಮ್ಮ ಆರ್ಥಿಕತೆಯನ್ನು ಸುಭದ್ರಗೊಳಿಸಿಕೊಂಡಿದ್ದಾರೆ. ಆದರೆ ಅನಕ್ಷರಸ್ಥ ವಿಧವೆಯರಿಗೆ ಪುನರ್ ವಸತಿ ಕಲ್ಪಿಸುವುದೇ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ.

ಸಾರ್ವಜನಿಕ ವಿತರಣಾ ವ್ಯವಸ್ಥೆ ಸುಧಾರಣೆ ಮತ್ತು ವಿಸ್ತರಣೆಗಾಗಿ ನಮ್ಮ ಸರ್ಕಾರ ಪ್ರಯತ್ನ ಮುಂದುವರೆಸಿದೆ ಆದ್ದರಿಂದ ನಾನು ಇಲ್ಲಿ ಕೇಳಿಕೊಳ್ಳುವುದೇನೆಂದರೆ ಸಾರ್ವಜನಿಕ ವಿತರಣಾ ವ್ಯವಸ್ಥೆ ಮತ್ತು ಪ್ರಾಥಮಿಕ ಶಿಕ್ಷಣಾ ಸಂಸ್ಥೆಗಳಲ್ಲಿ ಅನಾಥ ಮಹಿಳೆಯರಿಗೆ ಉದ್ಯೋಗವಕಾಶ ಕಲ್ಪಿಸಕೊಡಬೇಕು ಇದರಿಂದ ಸಾರ್ವಜನಿಕ ವಿತರಣಾ ವ್ಯವಸ್ಥೆಯ ದಕ್ಷತೆ ಮತ್ತು ಜನಪ್ರಿಯತೆ ಹೆಚ್ಚುವುದರ ಜೊತೆಗೆ ಪುನರ್‌ವಸತಿ ಕಾರ್ಯಕ್ರಮ ಕೂಡ ಬಲಿಷ್ಠಗೊಳ್ಳುತ್ತದೆ.

ಅನಾಥ ಮಹಿಳೆಯರ ಕಲ್ಯಾಣಕ್ಕಾಗಿ ಕಠಿಣ ಪರಿಶ್ರಮ ವಹಿಸುವಂತೆ ಸಚಿವ ಸ್ಥಾನದಲ್ಲಿದ್ದಾಗ ಶ್ರೀಮತಿ ಮಾರ್ಗರೇಟ್ ಆಳ್ವ ರವರನ್ನು ನಾನು ಕೇಳಿಕೊಂಡಿದ್ದೇನೆ ನಗರೀಕರಣ ಆಧುನೀಕರಣ ಮತ್ತು ವಿದೇಶಿ ಸಂಸ್ಕೃತಿಯ ಪರಿಣಾಮದಿಂದ ಹಿಂದಿನ ನಮ್ಮ ಅವಿಭಕ್ತ ಕುಟುಂಬಗಳು ಇಂದು ಛಿದ್ರಗೊಂಡಿವೆ ಇದರಿಂದ ಹಠಾತ್ ನೆಲೆ ಕಳೆದುಕೊಂಡ ಅನಾಥ ಮಹಿಳೆಯರನ್ನು ರಕ್ಷಿಸುವ ಬಹು ದೊಡ್ಡ ತುರ್ತು ಇದೆ.

ಶ್ರೀಯುತ ಜೈನ್ ಮಂಡಿಸಿರುವ ಮಸೂದೆಯನ್ನು ನಾನು ಸ್ವಾಗತಿಸುತ್ತೇನೆ ಹಾಗೂ ಅದನ್ನು ಬೆಂಬಲಿಸುತ್ತೇನೆ ಇಷ್ಟು ಮಾತಾಡಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ತಮ್ಮನ್ನು ವಂದಿಸಿ ಮಾತು ಮುಗಿಸುತ್ತೇನೆ.

# ಸಲಹೆ

## ಭ್ರಷ್ಟಾಚಾರ, ರಾಜಕೀಯ ಉದ್ದೇಶಕ್ಕೆ ಧಾರ್ಮಿಕ ಸ್ಥಳ ಬಳಕೆ ನಿಲ್ಲಿಸಿ ಸಲಹೆ

ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ): ಮಾನ್ಯ ಸಭಾಧ್ಯಕ್ಷರೇ ಈ ಮಹತ್ವದ ನಿರ್ಣಯದ ಮೇಲೆ ಮಾತನಾಡಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಮೊದಲು ತಮ್ಮನ್ನು ಅಭಿನಂದಿಸುತ್ತೇನೆ. ಇದೊಂದು ಮಹತ್ವದ ನಿರ್ಣಯ ಅನೇಕ ಸದಸ್ಯರು ನಿರ್ಣಯದ ಮೇಲೆ ಉತ್ತಮ ಸಲಹೆಗಳನ್ನು ನೀಡಿದ್ದಾರೆ ಈಗ ಈ ಕುರಿತು ನಾನು ಕೆಲವು ಮಾತುಗಳನ್ನಾಡಲು ಬಯಸುತ್ತೇನೆ ಮಾನ್ಯರೇ ಇತ್ತೀಚಿನ ದಿನಗಳಲ್ಲಿ ರಾಜಕೀಯದ ಬಗ್ಗೆ ಜನ ಹೆಚ್ಚು ಹೆಚ್ಚಾಗಿ ಮಹತ್ವಾಕಾಂಕ್ಷಿಗಳಾಗುತ್ತಿದ್ದಾರೆ. ಅದಕ್ಕೆ ಹಲವು ಎಲ್ಲರೂ ಮಾತಾಡಿಕೊಳ್ಳುವ ಸಂಗತಿಯೆಂದರೆ ರಾಜಕಾರಣಿಯಾದರೆ ಸುಲಭವಾಗಿ ಹಣ ಮಾಡಬಹುದು ಅನ್ನುವ ನಂಬಿಕೆಯಿದೆ ಇದು ತಲೆ ಕೆಟ್ಟವರ ಮಾತು ಇದನ್ನು ನಾನು ಒಪ್ಪುವುದಿಲ್ಲ ಆದರೂ ಈ ಕುರಿತ ಕೆಲಸಕ್ಕೆ ಬಾರದ ಮಾತುಗಳು ಮುಂದುವರೆದಿವೆ ಇದಕ್ಕೆ ಕಾರಣ ನಿರುದ್ಯೋಗ ನಾವು ರಾಜಕಾರಣಿಗಳನ್ನು ಸೃಷ್ಟಿಸುತ್ತಾ ಇದ್ದೇವೆ ಅದಕ್ಕೆ ತಕ್ಕಂತೆ ಭ್ರಷ್ಟಾಚಾರ ಕೂಡ ಉಲ್ಬಣಿಸುತ್ತಲೇ ಇದೆ ನನ್ನ ಗೌರವಾನ್ವಿತ ಸಹ ಸದಸ್ಯೆ ವಿವರಿಸಿದ ರೀತಿಯಲ್ಲಿ ಭ್ರಷ್ಟಾಚಾರ ಇಂದು ವ್ಯಾಪಕವಾಗಿ ಹರಡಿಕೊಂಡಿದೆ ಮಾನ್ಯರೇ ಭ್ರಷ್ಟಾಚಾರ ಆರಂಭಗೊಳ್ಳುವುದೇ ಲೆಕ್ಕಾಚಾರ ದಿಂದ ಯಾವುದೇ ಪಕ್ಷ ಅಧಿಕಾರಕ್ಕೆ ಬಂದ ಬಳಿಕ ಮೊದಲು ಮಾಡುವ ಕೆಲಸವೇ ಓಟಿನ ಲೆಕ್ಕಾಚಾರ ಬಳಿಕ ನಡೆಯುವುದು ಮತಪೆಟ್ಟಿಗೆಯ ಸ್ಥಳನಿಗಧಿಯ ಲೆಕ್ಕಾಚಾರ ಇಂತಲ್ಲಿಯೂ ಕೂಡ ಭ್ರಷ್ಟಚಾರ ಮಹತ್ವದ ಪಾತ್ರ ವಹಿಸುತ್ತದೆ ಬಳಿಕ ಮತಗಟ್ಟೆ ಅಧಿಕಾರಿ ಮತ್ತು ರಿಟರ್ನಿಂಗ ಅಧಿಕಾರಿಗಳ ನೇಮಕದಲ್ಲಿಯೂ ಭ್ರಷ್ಟಾಚಾರ ತಲೆಯೆತ್ತುತ್ತದೆ ಈ ರೀತಿ ಭ್ರಷ್ಟಾಚಾರ ಏಕಮುಖವಾಗಿ ಬೆಲೆಯುತ್ತಲೇ ಇದೆ ಚುನಾವಣಾ ವೆಚ್ಚ ದುಬಾರಿಯಾಗುತ್ತಲೇ ಇದೆ ಆದ್ದರಿಂದ ಚುನಾವಣಾ ವೆಚ್ಚಕ್ಕೆ ತಡೆ ಹಾಕುವುದು ಹೇಗೆ ಅನ್ನುವುದು ಮಹತ್ವದ ವಿಷಯವಾಗಿದೆ ವೆಚ್ಚಕ್ಕೆ ತಡೆ ಹಾಕಬೇಕಾದರೆ ಚುನಾವಣೆಗೆ ಆಯಯ ರಾಜ್ಯಗಳೆ ಹಣ ಪೂರೈಕೆ ಮಾಡಬೇಕು ಅನ್ನುವುದು ಕೆಲವು ಸದಸ್ಯರುಗಳ ಅಬಿಪ್ರಾಯವಾಗಿದೆ ಆದರೆ ನಾನು ಇದನ್ನು ಒಪ್ಪುವುದಿಲ್ಲ ಈ ಸಲಹೆ ಪ್ರಾಯೋಗಿಕ ಅರ್ಥದಲ್ಲಿ ಅವಾಸ್ತವಿಕ ಇದು ಸಲಹೆಯಾಗಿ ಪರಿಗಣಿಸಲು ಸುಲಭ ಆದರೆ ಪ್ರಯೋಗ ತೀರ ಕಷ್ಟ ನಾವು ಅಸ್ಪೃಶ್ಯತೆ ಎನ್ನುತ್ತೇವೆ. ಆದರೆ ಅದನ್ನು ಗೆಲ್ಲುವಲ್ಲಿ ಅದೆಷ್ಟೋ ದೂರು ಹಿಂದುಳಿದ್ದಿದ್ದೇವೆ ಬಾಲ್ಯ ವಿವಾಹದ ಬಗ್ಗೆ ಮಾತಾಡುತ್ತೇವೆ ಆದರೆ ಅದನ್ನು ತಡೆಗಟ್ಟಲು ಸಾಧ್ಯವಾಗಿಲ್ಲ ಸತಿಪದ್ಧತಿ ಬಗ್ಗೆ ಪ್ರಸ್ತಾಪಿಸುತ್ತೇವೆ. ಆದರೆ ಅದನ್ನು ನಿಗ್ರಹಿಸಲು ಆಗಿಲ್ಲ ದೇವದಾಸಿ ಪದ್ಧತಿ ನಿರ್ಮೂಲನೆ ಬಗ್ಗೆ ಮಾತಾಡುತ್ತೇವೆ. ಆದರೆ ಅದು ಸಾಧ್ಯವಾಗಿದೆಯೇ? ಈ ಎಲ್ಲಾ ಅನಿಷ್ಟ ಪದ್ಧತಿಗಳು ಇಂದಿಗೂ ನಡೆಯುತ್ತಿವೆ. ಅದರಂತೆಯೇ ಚುನಾವಣೆಗೆ ರಾಜ್ಯಗಳು ಹಣ ಪೂರೈಸಬೇಕು ಎಂಬ ವಿಷಯ ಕೂಡ ಬರೇ ಮಾತು ಮತ್ತು ಚಿಂತನೆ ಮಟ್ಟಕ್ಕೆ ನಿಂತು ಹೋಗುವ ಸಂಗತಿಯೆನಿಸಿದೆ ಆದ್ದರಿಂದ ಈ ಸಲಹೆ ಪ್ರಾಯೋಗಿಕ ಮಹತ್ವವುಳ್ಳದ್ದು ಎಂದು ನನಗೆ ಎನಿಸುತ್ತಿಲ್ಲ

ಮಾನ್ಯರೇ ವೆಚ್ಚ ತಗ್ಗಿಸುವ ನಿಟ್ಟಿನಲ್ಲಿ ನಾನು ಕೆಲವು ಸಲಹೆಗಳನ್ನು ನೀಡಲು ಬಯಸುತ್ತೇನೆ. ನನ್ನ ಸ್ನೇಹಿತೆ ಮಾತಿನ ಮಧ್ಯೆ ಹೇಳಿದರು ರಾಜಕೀಯ ಉದ್ದೇಶಕ್ಕೆ ಧಾರ್ಮಿಕ ಸ್ಥಳಗಳನ್ನು ಬಳಸಿಕೊಳ್ಳುವುದನ್ನು ನಿಲ್ಲಿಸಬೇಕೆಂದು ಈ ವ್ಯವಸ್ಥೆ ಮುಂದುವರೆದರೆ ಅಪಾಯ ಅನ್ನುವುದನ್ನು ಅಂತೇ ನಾವೀಗ ಕಾಯ್ದೆಯನ್ನು ಜಾರಿ ತಂದಿದ್ದೇವೆ ಇದೇ ವೇಳೆ ಚುನಾವಣಾ ಸುಧಾರಣೆಗಳನ್ನು ಜಾರಿಗೊಳಿಸಲಾಗುತ್ತಿದೆ ರಾಜಕೀಯ ಪ್ರಚಾರಕ್ಕೆ ಧಾರ್ಮಿಕ ಸ್ಥಳಗಳನ್ನು ಬಳಸಿಕೊಳ್ಳಬಾರದೆಂದು ನಮ್ಮ ಹಿಂದಿನ ಸರ್ಕಾರ ಹೇಳಿತ್ತು ಚುನಾವಣೆ ಸಂದರ್ಭದಲ್ಲಿ ಜನರಿಗೆ ಮದ್ಯೆ ವಿತರಿಸುವ ಅನುಚಿತ ಕೆಲಸ ನಡೆಯುಕೊಂಡು ಬಂದಿದೆ ಈ ಅವಧಿಯಲ್ಲಿ ಯಥೇಚ್ಚವಾಗಿ ಮದ್ಯೆ ಸರಬರಾಜು ಆಗುತ್ತದೆ ಇದರ ಅಪಾಯ ಅರಿತೇ ನಾವು ಚುನಾವಣೆ ಸಂದರ್ಭದ 3 ದಿನಗಳ ಕಾಲ ಮದ್ಯೆ ಮಾರಾಟ ನಿಷೇಧಿಸಿದ್ದಾರೆ ಆದರೆ ಈ ನಿಷೇಧ ಸಾಕಾಗದು ಹಿಂದಿನ ದಿನಗಳಲ್ಲಿ ಜನ ಕಾಫಿ ಕೇಳುತ್ತಿದ್ದರು ಆದರೆ ಇತ್ತಿಚಿನ ದಿನಗಳಲ್ಲಿ ಕಾಫಿ ಅಥವಾ ತಿಂಡಿಯನ್ನು ಯಾರು ಕೇಳುವುದಿಲ್ಲ ಅವರು ಸಾರಾಯಿ ಮಾತ್ರ ಕೇಳುತ್ತಾರೆ.

**ಅಧ್ಯಕ್ಷರೇ:** ಮೇಡಂ, ಆ ಸಂದರ್ಭದಲ್ಲಿ ಅವರು ಆ ರೀತಿ ಮಾತಾಡಿಕೊಳ್ಳುತ್ತಿದ್ದರು ಆದರೆ ಈಗ ಕಾಲ ಬದಲಾಗಿದೆ.

ಬಸವರಾಜೇಶ್ವರಿ: ಮಾನ್ಯರೇ ನಾನೀಗ ಮುಖ್ಯ ವಿಷಯಕ್ಕೆ ಬರುತ್ತೇನೆ ರಾಷ್ಟ್ರದಲ್ಲಿ ಸಾರಾಯಿ ಮಾರಾಟದ ಮೇಲೆ ದ್ಯಾಕೆ ಸಂಪೂರ್ಣ ನಿಷೇಧ ಹೇರಬಾರದು ಮದ್ಯೆ ಪಿಡುಗಿನಿಂದ ದಿನಂಪ್ರತಿ ಅದೆಷ್ಟೊ ಮಹಿಳೆಯರು ಗೋಳಾಡುವಂತಾಗಿದೆ ಮದ್ಯೆ ಮಾರಾಟದ ಮೇಲೆ ಸಂಪೂರ್ಣ ನಿಷೇಧ ಉತ್ತಮ ವಿಧಿಸಿದರೆ ಕೊನೆಯ ಪಕ್ಷ ಮಹಿಳೆಯರ ಗೋಳು ತಪ್ಪುತ್ತದೆ. ಮತ್ತು ಅವರ ಮಕ್ಕಳುಗಳಿಗೆ ಉತ್ತಮ ಶಿಕ್ಷಣ ಲಭಿಸುತ್ತದೆ ಇದನ್ನು ನಿಲ್ಲಿಸದ ಹೊರತು ದಬ್ಬಾಳಿಕೆ ಮತ್ತು ಮತಗಟ್ಟೆ ಅಕ್ರಮಗಳನ್ನು ತಡೆಯುವುದು ಅಸಾಧ್ಯ ಆದ್ದರಿಂದ ಇದರ ನಿರ್ಮೂಲನೆ ಕುರಿತು ಪ್ರತಿಯೊಬ್ಬರು ಗಂಭೀರ ಚಿಂತನೆ ನಡೆಸುವ ಅಗತ್ಯ ಇದೆ.

ಮಾನ್ಯರೆ ಕ್ಷೇತ್ರಗಳ ವಿಂಗಡನಾ ಕಾರ್ಯ ವರ್ಷಗಳಿಂದ ನಡೆದಿಲ್ಲ ಕಳೆದ 15,20, ವರ್ಷಗಳಿಂದ ಮೀಸಲು ಕ್ಷೇತ್ರಗಳಾಗಿರುವ ಪ್ರದೇಶಗಳು ಇಂದಿಗೂ ಅದೇ ವ್ಯವಸ್ಥೆಯಲ್ಲಿ ಉಳಿದಿವೆ ಆದ್ದರಿಂದ ಕ್ಷೇತ್ರಗಳ ಮರುವಿಂಗಡನಾ ಕಾರ್ಯ ತಕ್ಷಣದಿಂದಲೇ ನಡೆಯಬೇಕಿದೆ ಅನೇಕ ವರ್ಷಗಳಿಂದ ಮೀಸಲಾತಿ ನಿಯಮಕ್ಕೆ ಒಳಪಟ್ಟ ಕ್ಷೇತ್ರಗಳಿವೆ ಅಂತಹ ಕಡೆಗಳಲ್ಲಿ ಸುಧಾರಣೆ ತರುವ ನಿಟ್ಟಿನಲ್ಲಿ ಮರುವಿಂಗಡಣೆ ತುರ್ತಾಗಿ ನಡೆಯಬೇಕಿದೆ ಇದರ ಜೊತೆಗೆ ಇನ್ನು ಕೆಲವು ಸಲಹೆಗಳನ್ನು ಮುಂದಿಡಲು ಇಚ್ಚಿಸುತ್ತೇನೆ.

ಪ್ರತಿ ಹಳ್ಳಿಗೂಮತಗಟ್ಟೆ ವ್ಯವಸ್ಥೆ ಆಗಬೇಕು ಸಾಧ್ಯವಾದರೆ ಚುನಾವಣಾ ವೆಚ್ಚಕ್ಕೆ ಯಶಸ್ವಿ ತಡೆ ಹಾಕಬಹುದಾಗಿದೆ ಇತ್ತೀಚಿನ ದಿನಗಳಲ್ಲಿ ಸ್ಥಳೀಯ ಸಂಸ್ಥೆಗಳ ಚುನಾವಣೆ ಹಣಾಹಣೆ ಕೂಡ ಪಕ್ಷದ ಟಿಕೆಟ್ ಅಧಾರದ ಮೇಲೆ ನಡೆಯುತ್ತಿದೆ ಇದರ ಬಗ್ಗೆ ನನಗೆ ಒಲವು ಇಲ್ಲ ಸ್ಥಳೀಯ ಸಂಸ್ಥೆಗಳ ಚುನಾವಣೆ ಪಕ್ಷದ ಟಿಕೆಟ್ ಆಧಾರದ ಮಾಲೆ ನಡೆದರೆ ವೆಚ್ಚ ಕಡಿತದ ಮಾತು ಮತ್ತೆ

ಕಗ್ಗಾಂಟಾಗಿ ಉಳಿಯುತ್ತದೆ ಜೊತೆಗೆ ಹಳ್ಳಿಗಳ ಸಾಹಾರ್ದದ ವಾತಾವರಣ ಕೂಡ ಹದಗೆಡುತ್ತದೆ ಆದ್ದರಿಂದ ಸ್ಥಳೀಯ ಸಂಸ್ಥೆಗಳ ಚುನಾವಣೆ ಪಕ್ಷ ಟಿಕೆಟ್ ಆಧರಿಸಿ ನಡೆಯದಂತೆ ಕ್ರಮ ಕೈಗೊಳ್ಳ ಬೇಕು ಈ ವಿಷಯದಲ್ಲಿ ಸ್ಥಳಿಯರಿಗೆ ಮುಕ್ತತೆ ಕಲ್ಪಿಸಬೇಕು ಹೀಗಾದಾಗ ಒಮ್ಮತದ ಅಭ್ಯರ್ಥಿ ಯಾವುದೇ ತಾಪತ್ರಯ ಇಲ್ಲದೆ ಆಯ್ಕೆಯಾಗುವ ಸಾಧ್ಯತೆ ಇದೆ ಪರಸ್ಪರ ತಿಳುವಳಿಕೆ ಮೇಲೆ ಒಮ್ಮತದ ಅಭ್ಯರ್ಥಿಯನ್ನು ಆರಿಸಿದ ನಿದರ್ಶನಗಳುಂಟು ಅಂತಹ ವಾತಾವರಣವನ್ನು ನಾವು ಕದಡಬಾರದು ಪಕ್ಷದ ಟಿಕೆಟ್ ಆಧರಿಸಿ ಸ್ಥಳೀಯ ಸಂಸ್ಥೆಗಳ ಚುನಾವಣೆ ನಡೆಸಿದರೆ ಹಳ್ಳಿಗಳು ಸೌಹಾರ್ದವಾಗಿ ಉಳಿಯುವುದು ಅಸಾಧ್ಯ.

ಮಾನ್ಯರೇ ಚುನಾವಣಾ ಪ್ರಚಾರಕ್ಕೆ 21 ದಿನಗಳ ಕಾಲಮಿತಿ ಹೇರಲಾಗಿದೆ ಆದರೆ ಈ ಕಾಲಾವಧಿ ನನಗೆ ತೃಪ್ತಿ ತಂದಿಲ್ಲ ಇನ್ನಷ್ಟು ದಿನ ಕಡಿತಗೊಳಿಸುವ ಪ್ರಚಾರ ದಿನಗಳ ಸಂಖ್ಯೆಯಲ್ಲಿ ಕಡಿತಗೊಳಿಸಿದರೆ ವೆಚ್ಚಕ್ಕೆ ನಿಯಂತ್ರಣ ಹೇರಬಹುದಾಗಿದೆ.

ಕೊನೆಯದಾಗಿ ಮತಗಟ್ಟೆ ಅಪಹರಣ ಮತ್ತು ಹಲ್ಲೆ ಪ್ರಕರಣಗಳು ಇತ್ತೀಚಿಗೆ ಹೆಚ್ಚಾಗುವುದನ್ನು ನಾವು ಕೇಳುತ್ತಿದ್ದೇವೆ ನಾನು 1957 ರಿಂದ ಇಲ್ಲಿಯವರೆಗೆ ರಾಜಕೀಯರಂಗದಲ್ಲಿ ಸಕ್ರಿಯವಾಗಿದ್ದೇನೆ ಖಂಡಿತವಾಗಿ ಇತ್ತೀಚಿನ ದಿನಗಳಲ್ಲಿ ಪರಿಸ್ಥಿತಿ ಬದಲಾಗಿರುವುದನ್ನು ನಾನು ಒಪ್ಪುತ್ತೇನೆ ಆದರೂ ಮತಪೆಟ್ಟಿಗೆ ಅಪಹರಣ ಮತ್ತು ಹಲ್ಲೆ ಪ್ರಕರಣಗಳ ಬಗ್ಗೆ ನನಗೆ ಇನ್ನು ಏನೂ ತಿಳಿಯದು ನಮ್ಮ ರಾಜ್ಯದಲ್ಲಿ ಈ ಪ್ರಕರಣಗಳು ನಡೆದ ಬಗ್ಗೆ ನಾನು ಕೇಳಿಲ್ಲ ಮತಗಟ್ಟೆ ಅಪಹರಣ ಮತ್ತು ಹಲ್ಲೆ ಪ್ರಕರಣಗಳು ನಡೆದರೆ ಮೊದಲು ಬಲಿಯಾಗುವುದು ಮುಗ್ಧ ಜನಗಳು ನಮ್ಮ ರಾಜ್ಯದಲ್ಲಿ ಮುಕ್ತ ಹಾಗೂ ನ್ಯಾಯೋಚಿತ ಚುನಾವಣೆ ನಡೆದುಕೊಂಡು ಬಂದಿದೆ ಮರು ಚುನಾವಣೆಗಳು ನಡೆದ ನಿದರ್ಶನ ನಮ್ಮ ರಾಜ್ಯದಲ್ಲಿ ತೀರ ವಿರಳ ಮತಪೆಟ್ಟಿಗೆ ಅಪಹರಣ ಹಲ್ಲೆ, ಇತರೆ ಚುನಾವಣೆ ಅಕ್ರಮಗಳ ಕುರಿತು ಪತ್ರಿಕೆಯಲ್ಲಿ ಓದಿದಾಗ ನಿಜಕ್ಕೂ ನಮಗೆ ವ್ಯಥೆಯೆನಿಸಿದೆ ಇದು ಪ್ರಜಾಪ್ರಭುತ್ವದ ವ್ಯವಸ್ಥೆಯಡಿ ನಡೆಯುವ ಚುನಾವಣೆಯಲ್ಲವೇ? ಅಂದಾಗ ಇಂತಹ ಘಟನೆಗಳು ನಡೆಯುತ್ತಿವೆಯೆಂದರೆ ಏನು ಅರ್ಥ?

ಆದ್ದರಿಂದ ಇನ್ನಷ್ಟು ಉತ್ತಮ ಸಲಹೆಗಳನ್ನು ನೀಡಲು ನಾನು ಮಾನ್ಯ ಸದಸ್ಯರುಗಳಲ್ಲಿ ಕೋರುತ್ತೇನೆ ರಾಜ್ಯಗಳೆ ಚುನಾವಣಾ ವೆಚ್ಚ ಹೆಚ್ಚಿಸುವ ಸಲಹೆ ಬದಲಿಗೆ ಬೇರೆ ಉತ್ತಮ ಸಲಹೆ ನೀಡಲು ಸಾಧ್ಯವೇ ಎನ್ನುವುದನ್ನು ಯೋಚಿಸಬೇಕಿದೆ.

ಇಷ್ಟು ಸಲಹೆಗಳೊಂದಿಗೆ ನನ್ನ ಮಾತು ಮುಗಿಸುತ್ತೇನೆ ಧನ್ಯವಾದಗಳು.

# ವಿದ್ಯುತ್

ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ): ಮಾನ್ಯ ಸಭಾಧ್ಯಕ್ಷರೇ 1986 ರ ಭಾರತೀಯ ವಿದ್ಯುತ್ (ತಿದ್ದುಪಡಿ) ಮಸೂದೆಯನ್ನು ನಾನು ಬೆಂಬಲಿಸುತ್ತೇನೆ ಎಲ್ಲಾ ಹಂತಗಳಲ್ಲಿ ನಡೆಯುತ್ತಿರುವ ವಿದ್ಯುತ್ ಕಳ್ಳತನಕ್ಕೆ ತಡೆ ಹಾಕುವುದು ಈ ಮಸೂದೆಯ ಮುಖ್ಯ ಉದ್ದೇಶ ಆದಕ್ಕಾಗಿಯೇ ಮೂಲ ಕಾಯ್ದೆಯ 39, 44, ಮತ್ತು 50 ನೇ ಕಾಲಮ್ ತಿದ್ದುಪಡಿ ಕೋರಲಾಗಿದೆ.

ಮಾನ್ಯರೇ ರಾಷ್ಟ್ರದ ಸರ್ವೋತ್ತೋಮುಖಿ ಅಭಿವೃದ್ದಿಗೆ ವಿದ್ಯುತ್ತೇ ಮೂಲ ಒಂದು ರಾಷ್ಟ್ರದ ಸಾಮರ್ಥ್ಯ ಅದು ತಯಾರಿಸುವ ವಿದ್ಯುತ್ತನ್ನು ಆಧರಿಸಿರುತ್ತೇನೆ. ರಾಷ್ಟ್ರದಲ್ಲಿ ವಿದ್ಯುತ್ ಉತ್ಪಾದಿಸುವ ಹಲವು ಮೂಲಗಳಿವೆ ಅಂತಹವುಗಳಲ್ಲಿ ಜಲವಿದ್ಯುತ್ ಯೋಜನೆ ಪ್ರಧಾನವಾದ್ದುದ್ದಾಗಿದೆ ಥರ್ಮಲ್ ಘಟಕದ ಮೂಲಕ ಅಣುಸ್ಥಾವರ ಘಟಕಗಳ ಮೂಲಕ ಜನರೇಟರ್‌ಗಳನ್ನು ಸ್ಥಾಪಿಸುವ ಮೂಲಕ ಮತ್ತು ಇತರೆ ಅಸಾಂಪ್ರದಾಯಿಕ ವಿಧಾನದ ಮೂಲಕ ನಾವು ವಿದ್ಯುತ್ ಉತ್ಪಾದಿಸುತ್ತಿದ್ದೇವೆ. ಈ ಎಲ್ಲಾ ಪ್ರಯತ್ನಗಳ ಹೊರತಾಗಿಯೂ ಇಂದು ಅನೇಕ ರಾಜ್ಯಗಳು ತೀವ್ರ ವಿದ್ಯುತ್ ಭರ ಎದುರಿಸುತ್ತಿವೆ ಇದರಿಂದ ಸಾರ್ವಜನಿಕ ಮತ್ತು ಖಾಸಗಿ ವಲಯದ ಅನೇಕ ಕೈಗಾರಿಕೆಗಳು ಮುಚ್ಚುವ ಪರಿಸ್ಥಿತಿ ತಲೆದೋರಿದೆ ಜಲವಿದ್ಯುತ್‌ನೆಚ್ಚಿಕೊಂಡಿರುವ ಕರ್ನಾಟಕದಂತಹ ಹಲವು ರಾಜ್ಯಗಳು ಮುಂಗಾರು ವೈಫಲ್ಯದಿಂದ ಸಂಕಷ್ಟಕ್ಕೆ ಗುರಿಯಾಗಿವೆ ಈ ಸಮಸ್ಯೆಯ ಬಗ್ಗೆ ಗಂಭೀರ ಚಿಂತನೆ ನಡೆಸಿ ಪರಿಹಾರ ಕಂಡುಕೊಳ್ಳುವ ಅಗತ್ಯವಿದೆ.

ಈ ಪ್ರಸ್ತಾಪದೊಂದಿಗೆ ನಾನು ಈಗ ಮಸೂದೆಯ ತಿದ್ದುಪಡಿಯನ್ನು ಸ್ವಾಗತಿಸುತ್ತೇನೆ. ವಿದ್ಯುತ್ ಸೋರಿಕೆ ತಡೆ ಮತ್ತು ಆದರಲ್ಲಿ ಆಗುತ್ತಿರುವ ಕಳ್ಳತನ ತಡೆಯುವ ಬಗ್ಗೆ ಸರ್ಕಾರ ವಹಿಸಿರುವ ಎಚ್ಚರ ಸಮಯೋಜಿತವಾದ್ದದ್ದು ಅದು ನನಗೆ ಖುಷಿ ತಂದಿದೆ ವಿದ್ಯುತ್ ವಿಷಯದಲ್ಲಿ ಅಪರಾಧ ಎಸಗುವವರ ವಿರುದ್ಧ ದಂಡ ಮತ್ತು ಸೆರೆವಾಸ ಶಿಕ್ಷೆಯಂತ ಕಠಿಣ ಕ್ರಮಗಳನ್ನು ಕೈಗೊಳ್ಳಬಹುದಾಗಿದೆ ಸಂಬಂಧ ಪಟ್ಟ ರಾಜ್ಯ ವಿದ್ಯುತ್ ಮಂಡಳಿ ಕೂಡ ತಪ್ಪಿತಸ್ಥರ ವಿರುದ್ಧ ಕ್ರಮ ಜರೂಗಿಸಬಹುದೆಂದು ಮಸೂದೆ ಸ್ಪಷ್ಟಪಡಿಸಿದೆ ಆದರೆ ಶಿಕ್ಷೆ ವಿಧಿಸುವ ವಿಷಯದಲ್ಲಿ ರಾಜ್ಯ ಸರ್ಕಾರ ಮತ್ತು ರಾಜ್ಯ ವಿದ್ಯುತ್ ಮಂಡಳಿ ನಡುವಿನ ಅಧಿಕಾರ ವ್ಯತ್ಯಾಸ ಏನ್ನೆನ್ನುವುದು ಸ್ಪಷ್ಟವಾಗಿಲ್ಲ ವಿದ್ಯುತ್ ಮಂಡಳಿ ಸಲಹಾ ಘಟಕ ಮಾತ್ರ ಆಗಿರಬೇಕು ತಪ್ಪಿತಸ್ಥರ ವಿರುದ್ಧ ಏನು ಕ್ರಮಕೈಗೊಳ್ಳಬಹುದು ಅನ್ನುವುದನ್ನು ರಾಜ್ಯ ಸರ್ಕಾರಕ್ಕೆ ಮಂಡಳಿ ಸಲಹೆ ನೀಡಬೇಕೆ ವಿನಹ ಶಿಕ್ಷೆ ನಿರ್ಧಾರ ಕೈಗೊಳ್ಳಬಾರದು ಈ ವಿಷಯದಲ್ಲಿ ಮಾನ್ಯ ಸಚಿವರು ಗಮನಹರಿಸಿ ಸೂಕ್ತ ನಿರ್ಧಾರ ಕೈಗೊಳ್ಳಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಈ ಮಸೂದೆಯಲ್ಲಿ ನನಗೆ ಅಚ್ಚರಿ ಉಂಟುಮಾಡಿದ ಸಂಗತಿಯೆಂದರೆ ಒಬ್ಬ ರೈತ ಮತ್ತು ಒಬ್ಬ ಉದ್ಯಮಿ ಎಸಗುವ ವಿದ್ಯುತ್ ಅಪರಾಧಗಳ ಮಧ್ಯ ವ್ಯತ್ಯಾಸ ಗುರುತಿಸದೇ ಇರುವುದು

ಒಬ್ಬ ಉದ್ಯಮಿ ವಿವಿಧ ಪ್ರಮಾಣದಲ್ಲಿ ವಿದ್ಯುತ್ ಕಳ್ಳತನ ಮಾಡಿ ಶಿಕ್ಷೆಗೆ ಅರ್ಹ ಎನಿಸುವುದು ಆದರೆ ಪಂಪ್ ಸೆಟ್ ಬಳಕೆಗಾಗಿ ಒಂದು HP ಯಿಂದ 5 HP ವರೆಗೆ ವಿದ್ಯುತ್ ಬಳಸುವ ರೈತ ಉದ್ಯಮಿ ಎದುರಿಸುವ ಶಿಕ್ಷೆಗೆ ಸಮಬಲವೆನಿಸಲು ಸಾಧ್ಯವಿಲ್ಲ. ರೈತರು ನೀರಾವರಿ ಉದ್ದೇಶಕ್ಕೆ ಪಂಪ್‌ಸೆಟ್ ಅಳವಡಿಸಿದ್ದಾರೆ ಅಂತಹವರ ವಿರುದ್ಧ ನೀವು ದಂಡ ವಿಧಿಸಲು ಮುಂದಾದರೆ ರೈತರ ಸ್ಥಿತಿ ಅದೋಗತಿಗೆ ಹೋಗಲಿದೆ.

ರೈತರ ಪಂಪ್‌ಸೆಟ್‌ಗಳಿಗೆ ಮೀಟರ್ ದರ ವಿಧಿಸುವ HP ಬದಲು ಆಧಾರದ ಮೇಲೆ ದರ ನಿಗದಿಗೊಳಿಸಬೇಕು ಈ ನಿಟ್ಟಿನಲ್ಲಿ ಈಗಾಗಲೇ ಕರ್ನಾಟಕ ಮತ್ತು ಆಂಧ್ರಪ್ರದೇಶ ಸರ್ಕಾರಗಳು ಕ್ರಮ ಕೈಗೊಂಡಿವೆ ಈ ರಾಜ್ಯಗಳಲ್ಲಿ ಪಂಪ್‌ಸೆಟ್‌ಗಳಿಗೆ ದರದ ಬದಲಿಗೆ HP ದರವನ್ನೆ ಮಾನದಂಡವಾಗಿ ಬಳಸಲಾಗುತ್ತಿದೆ ಈ ವ್ಯವಸ್ಥೆಯನ್ನು ರಾಷ್ಟ್ರ ವ್ಯಾಪಿ ವಿಸ್ತರಿಸುವಂತೆ ಕ್ರಮಕೈಗೊಳ್ಳಬೇಕೆಂದು ನಾನು ಸರ್ಕಾರವನ್ನು ಕೇಳುತ್ತೇನೆ.

ಹೆಚ್ಚಿಗೆ ಮಾತು ಮುಂದುವರೆಸದೆ ಇನ್ನು ಒಂದೆರೆಡು ಸಲಹೆಗಳನ್ನು ನೀಡಿ ನನ್ನ ಮಾತು ಮುಗಿಸುತ್ತೇನೆ ವಿದ್ಯುತ್ ಕಳ್ಳತನ ಪತ್ತೆಗೆ ನೆರವಾಗುವ ಆಧುನಿಕ ಮೀಟರ್‌ಗಳನ್ನು ಅಳವಡಿಸಬೇಕು ಎರಡನೆಯದಾಗಿ ಕೃಷಿ ಬಳಕೆಗೆಂದೇ ಕೆಲ ಪ್ರಮಾಣದ ವಿದ್ಯುತ್ ಮೀಸಲಿಡಬೇಕು ವಿದ್ಯುತ್ ರಾಷ್ಟ್ರೀಯ ಸಂಪತ್ತಾಗಬೇಕು ಅದರ ಹಂಚಿಕೆ ಮತ್ತು ವಿದ್ಯುತ್ ಕಡಿತ ರಾಷ್ಟ್ರದ್ಯಾಂತ ಏಕ ರೀತಿಯದ್ದಾಗಿರಬೇಕು ಕೆಲವು ರಾಜ್ಯಗಳು ತೀವ್ರ ವಿದ್ಯುತ್ ಕ್ಷಾಮ ಎದುರಿಸುತ್ತಿದೆ ಅಂತಹವುಗಳಲ್ಲಿ ಕರ್ನಾಟಕವೂ ಒಂದಾಗಿದೆ ವಿದ್ಯುತ್ ಕೊರತೆ ಅನುಭವಿಸುತ್ತಿರುವ ರಾಜ್ಯಗಳಲ್ಲಿ ಉದ್ಯಮ ಸ್ಥಾಪಿಸಲು ಮುಂದೆ ಬರುವ ಸಾಹಸಿಗಳಿಗೆ ಕೇಂದ್ರ ಸರ್ಕಾರ ದೀರ್ಘಾವಧಿ ಮತ್ತು ಕಡಿಮೆ ಬಡ್ಡಿದರದ ಸಾಲ ನೀಡಿ ಪ್ರೋತ್ಸಾಹಿಸಬೇಕು.

ವಿದ್ಯುತ್ ಕೊರತೆ ಎದುರಿಸುವ ರಾಜ್ಯಗಳು ಮತ್ತು ಹೆಚ್ಚುವರಿ ವಿದ್ಯುತ್ ಉತ್ಪಾದಿಸುವ ರಾಜ್ಯಗಳ ಜೊತೆ ಕೇಂದ್ರ ಸರ್ಕಾರ ಚರ್ಚೆ ನಡೆಸಬೇಕು ವಿದ್ಯುತ್ ಕ್ಷಾಮ ಎದುರಿಸುವ ರಾಜ್ಯಗಳಿಗೆ ಸೂಕ್ತ ದರದಲ್ಲಿ ವಿದ್ಯುತ್ ಪೂರೈಸಬೇಕು ಜೊತೆಗೆ ಎಲ್ಲಾ ಹಂತಗಳಲ್ಲೂ ಅಸಂಪ್ರದಾಯಿಕ ವಿದ್ಯುತ್ ಉತ್ಪಾದನೆಯನ್ನು ಪ್ರೋತ್ಸಾಹಿಸಬೇಕು ಈ ನನ್ನ ಸಲಹೆಗಳ ಕುರಿತು ಮಾನ್ಯ ಸಚಿವರು ಗಮನ ಹರಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಕೊನೆಯದಾಗಿ ಕರ್ನಾಟಕದ ವಿದ್ಯುತ್ ಬರ ಪರಿಸ್ಥಿತಿಯ ಬಗ್ಗೆ ನಾಲ್ಕು ಮಾತಾಡಲು ಇಚ್ಚಿಸುತ್ತೇನೆ ಮುಂಗಾರಿನ ವ್ಯತ್ಯಯದಿಂದಾಗಿ ಈ ವರ್ಷ ರಾಜ್ಯದಲ್ಲಿ ವಿದ್ಯುತ್ತಿನ ತೀವ್ರ ಅಭಾವ ಕಾಣಿಸಿಕೊಂಡಿದೆ ವಿದ್ಯುತ್ ಘಟಕಗಳು ಶೇ 80 ರಿಂದ 85 ರಷ್ಟು ವಿದ್ಯುತ್ ಕಡಿತ ಆರಂಭಿಸಿದೆ ಮುಂದಿನ ಸಾಲಿಗಾದರೂ ಮಾನ್‌ಸೂನ್ ಸುಧಾರಿಸಿ ವಿದ್ಯುತ್ ಅಭಾವ ನೀಗಬಹುದು ಎನ್ನುವುದು ರಾಜ್ಯದ ಜನತೆಯ ನಿರೀಕ್ಷೆಯಾಗಿದೆ ಆದರೆ ಈ ಕುರಿತ ನನ್ನ ಆತಂರಿಕ ಬಗೆಹರಿಯುತ್ತಿಲ್ಲ ಈ ಆಗಸ್ಟ್ 15 ಕ್ಕೆ ಮುಂಗಾರು ಕೊನೆಗೊಳ್ಳುತ್ತದೆ ಆದರೆ ಅಣೆಕಟ್ಟುಗಳು ಇನ್ನೂ ಭರ್ತಿಯಾಗಿಲ್ಲ

ಆದ್ದರಿಂದ ಸರ್ಕಾರದ ಮುಂದೆ ಅನುಮತಿಗಾಗಿ ಕಾಯ್ದು ನಿಂತಿರುವ ಎಲ್ಲಾ ಸಣ್ಣ ಜಲವಿದ್ಯುತ್ ಯೋಜನೆಗಳಿಗೆ ಸಾಧ್ಯವಾದಷ್ಟು ಶೀಘ್ರ ಅನುಮತಿ ನೀಡಬೇಕೆಂದು ಸಚಿವರನ್ನು ಕೋರುತ್ತೇನೆ.

ಶ್ರೀಮತಿ ಬಸವರಾಜೇಶ್ವರಿ (ಬಳ್ಳಾರಿ): ಅನೇಕ ಗತ್ಯ ವಸ್ತುಗಳ ಬೆಲೆಯಲ್ಲಿ ಆಗುತ್ತಿರುವ ಏರು ಪೇರಿನ ಬಗ್ಗೆ ಸದಸ್ಯರುಗಳು ಈಗಾಗಲೇ ತಮ್ಮ ಅಭಿಪ್ರಾಯ ಮಂಡಿಸಿದ್ದಾರೆ. ಆದ್ದರಿಂದ ನಾನು ಆ ಬಗ್ಗೆ ಹೆಚ್ಚಿನ ವಿವರಗಳಿಗೆ ಹೋಗದೆ ಸಂಕ್ಷಿಪ್ತವಾಗಿ ಕೆಲವು ಮಹತ್ವದ ಸಂಗತಿಗಳನಷ್ಟೆ ಮಂಡಿಸುತ್ತೇನೆ.

ತರಕಾರಿ,ಬೇಳೆ,ಸಕ್ಕರೆ,ಹಣ್ಣು ಮತ್ತು ಇತರೆ ಕೆಲವು ಅಗತ್ಯ ವಸ್ತುಗಳ ಬೆಲೆ ಗಗನ ಮುಖಿಯಾಗಿದೆ ಆದರೆ ಜೋಳ,ರಾಗಿ,ಅಕ್ಕಿ,ಗೋಧಿ, ಬೆಲೆಯಲ್ಲಿ ಮಾತ್ರ ಹೆಚ್ಚಿನ ಏರಿಕೆ ಇಲ್ಲದಾಗಿದೆ ಇದೇ ವೇಳೆ ಸಿಮೆಂಟ್, ಕಬ್ಬಿಣ, ಪೆಟ್ರೋಲ್, ಮರ ಮುಟ್ಟುಗಳ ಬೆಲೆಕೈಗೆಟುಕದಷ್ಟು ದುಬಾರಿಯಾಗಿದೆ. ಇದರಿಂದ ರೈತ ಸಮುದಾಯ ತೀವ್ರ ಸಂಕಷ್ಟಕ್ಕೆ ಗುರಿಯಾಗಿದೆ.

ಈ ಬೆಲೆ ಏರು ಪೇರಿನ ಸಂಕಷ್ಟ ನೀಗಿಸಲು ಎರಡು ದಾರಿಗಳಿವೆ ಮೊದಲನೆಯದು ತಾತ್ಕಾಲಿಕ ಪರಿಹಾರ, ಎರಡನೆಯದು ಶಾಶ್ವತ ಪರಿಹಾರ.

ಬೇಡಿಕೆ ನಿರ್ವಹಣೆ ಸಾರ್ವಜನಿಕ ವಿರತಣಾ ವ್ಯವಸ್ಥೆ ಬಲಪಡಿಸುವುದು ಮತ್ತು ಅಗತ್ಯ ಮೀರಿದ ದಾಸ್ತಾನಿಗೆ ತಡೆ ಹಾಕುವುದು ಮೊದಲ ವಿಭಾಗದಲ್ಲಿ ಬರುತ್ತವೆ ಸಕ್ಕರೆ ಕೊರತೆ ಯಿದ್ದರೆ ಸರ್ಕಾರ ಆಮದು ಮಾಡಿಕೊಳ್ಳಲು ಮುಂದಾಗಬೇಕು ಅದೇ ರೀತಿ ಸಾಮಗ್ರಿಗಳ ಪೂರೈಕೆಯಲ್ಲಿನ ಅಡಚಣೆ ನಿವಾರಣೆ ಕ್ರಮ ಕೈಗೊಳ್ಳಬೇಕು ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿ ಕೆಲವು ಲೋಪಗಳಿವೆ. ಸಹಕಾರಿ ವಲಯ ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿಲ್ಲ ಅಲ್ಲಿ ಸಾಮಗ್ರಿಗಳ ದುರ್ಬಳಕೆಯಾಗುತ್ತಿದೆ. ಇದನ್ನು ತಡೆಯಲ್ಲಿ ಸೂಕ್ತ ವ್ಯವಸ್ಥೆ ಮಾಡಬೇಕು ಮತ್ತು ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಬಲಪಡಿಸಭೇಕು.

ನಮ್ಮ ಸಮಾಜದ ಅತ್ಯಂತ ಅಪಾಯಕಾರಿ ಸಂಗತಿಯೆಂದರೆ ಅಗತ್ಯ ಮೀರಿದ ದಾಸ್ತಾನು ಅಂತಹ ದಾಸ್ತಾನುಕೋರರನ್ನು ಗುರುತಿಸಿ ಶಿಕ್ಷೆಗೆ ಒಳಪಡಿಸುವ ಕೆಲಸ ಆಗಬೇಕಿದೆ ಕಲಬೆರಿಕೆ ಕೂಡ ಇಂದು ದೇಶ ವ್ಯಾಪಿ ದಾಂದಲೆ ನಡೆಸಿದೆ ಸೀಮೆ ಎಣ್ಣೆಯಲ್ಲಿ ನೀರು ಬೆರೆಸುವುದು ಅಕ್ಕಿಯಲ್ಲಿ ಸಣ್ಣ ಕಲ್ಲು ಸೇರಿಸುವುದು ಕಂಡುಬರುತ್ತಿದೆ ಸಕ್ಕರೆ ಮತ್ತು ದವಸ ಧಾನ್ಯ ಕೂಡಾ ಕಲಬೆರೆಕೆಯಿಂದ ಮುಕ್ತವಾಗಿಲ್ಲ ಜೀವರಕ್ಷಕ ಔಷಧಿಗಳ್ಳಲ್ಲಿಯೂ ಕೂಡಾ ಕಲಬೆರೆಕೆ ನಡೆಯುತ್ತಿದೆ.

ಈ ಸಮಸ್ಯೆ ನೀಗಿಸಲು ಇರುವ ಶಾಶ್ವತ ಪರಿಹಾರ ಕಡೆ ಗಮನಹರಿಸುತ್ತೇನೆ ಕಬ್ಬು ಬೆಳೆಯಲು ರೈತರು ಇಂದು ಆಸಕ್ತಿ ತೋರುತ್ತಿಲ್ಲ ಕಬ್ಬಿಗೆ ಸೂಕ್ತ ಬೆಲೆ ನಿಗದಿಪಡಿಸದೇ ಇರುವುದರಿಂದ ಅದನ್ನು ಬೆಳೆಯಲು ಇಂದು ರೈತರು ನಿರಾಸಕ್ತಿ ತೋರುತ್ತಿದ್ದಾರೆ. ಇದರಿಂದ ದೇಶದಲ್ಲಿ ಸಕ್ಕರೆ ಕೊರತೆ ಕೂಡ ಉದ್ಭವವಾಗುತ್ತಿದೆ ಸಕ್ಕರೆ ಕಾರ್ಖಾನೆ ಮಾಲೀಕರು ರೈತರನ್ನು ವಂಚಿಸುತ್ತಿದ್ದಾರೆ.

ಈ ಪರಿಸ್ಥಿತಿ ಹೀಗೆ ಮುಂದುವರೆದರೆ ಸಕ್ಕರೆ ಉತ್ಪಾದನೆ ಸಂಪೂರ್ಣ ನಿಂತುಹೋಗುವ ಕಾಲ ದೂರವೇನು ಇಲ್ಲ ಈ ಸಮಸ್ಯೆ ನೀಗಿಸಲು ಕಬ್ಬಿಗೆ ಸೂಕ್ತ ಬೆಂಬಲ ಬೆಲೆ ನೀಡುವುದೊಂದೇ ಪರಿಹಾರ ರೈತರಿಗೆ ಎಲ್ಲಾ ರೀತಿಯ ಪ್ರೋತ್ಸಾಹ ಲಭ್ಯವಾಗಬೇಕಿದೆ ಅದಕ್ಕಾಗಿ ನೆರವಿನ ಹಸ್ತ ಚಾಚಲು ಮಾನ್ಯ ಸಚಿವರು ಮುಂದೆ ಬರಬೇಕಿದೆ ಎಣ್ಣೆ ಬೀಜ ದ್ವಿದಳ ಧಾನ್ಯ ತರಕಾರಿ ಮತ್ತು ಹಣ್ಣು ಬೆಳೆಯುವ ರೈತರಿಗೆ ಬೆಂಬಲ ಬೆಲೆ ನೀಡಬೇಕಿದೆ.

ಈ 7ನೇ ಪಂಚವಾರ್ಷಿಕ ಯೋಜನೆಯಲ್ಲಿ ಅನುಮತಿಗಾಗಿ ಅನೇಕ ಯೋಜನೆಗಳು ಕಾಯ್ದುನಿಂತಿವೆ ಅಂತಹ ಯೋಜನೆಗಳಿಗೆ ಕೇಂದ್ರ ಸರ್ಕಾರ ತಕ್ಷಣವೇ ಅನುಮತಿ ಮಂಜೂರು ಮಾಡಬೇಕಿದೆ ನೀರಾವರಿ ಯೋಜನೆಗಳನ್ನು ಕೈಗೆತ್ತಿಕೊಂಡಿರುವ ರಾಜ್ಯಗಳಿಗೆ ಅಗತ್ಯ ಪ್ರಮಾಣ ಆರ್ಥಿಕ ನೆರವನ್ನು ಸಹ ನೀಡಬೇಕು ಈ ಮೇಲೆ ಸೂಚಿಸಿದ ನೆರವು ದಯಪಾಲಿಸಿದ ಬಳಿಕ ಕೇಂದ್ರ ಸರ್ಕಾರ ಅಗತ್ಯ ಪ್ರಮಾಣದ ಎಣ್ಣೆ ಬೀಜ ಮತ್ತು ದ್ವಿದಳ ಧಾನ್ಯ ಬೆಳೆಯುವಂತೆ ರಾಜ್ಯಗಳಿಗೆ ಸೂಚಿಸಬಹುದಾಗಿದೆ ಆಂತರಿಕ ಬೇಡಿಕೆ ನೀಗಿಸುವುದಷ್ಟೇ ಅಲ್ಲದೆ ರಫ್ತು ಕೂಡ ಮಾಡಬಹುದಾಗಿದೆ ಇದರಿಂದ ಆಮದು ತಾಪತ್ರೇಯ ನೀಗುವುದಿಲ್ಲದೆ ವಿದೇಶಿ ಕರೆನ್ಸಿಯ ಮುಂದೆ ಕರೆನ್ಸಿಯ ಮೌಲ್ಯ ಕೂಡ ಹೆಚ್ಚಾಗುತ್ತದೆ ಈ ವಿಷಯದಲ್ಲಿ ಕೇಂದ್ರ ಸರ್ಕಾರ ಒಂದು ಸಮಗ್ರ ಯೋಜನೆ ರೂಪಿಸುವ ಅಗತ್ಯವಿದೆ ಮುಂಗಡವಾಗಿಯೇ ರೈತರ ಉತ್ಪನ್ನಗಳಿಗೆ ಲಾಭದಾಯಿಕ ಬೆಲೆ ಪ್ರಕಟಿಸುವ ಕೆಲಸ ಮಾಡಬಹುದಾಗಿದೆ ಜಪಾನಿನ್ನಲ್ಲಿ ಅಂತಹ ಒಂದು ಪದ್ಧತಿಯಿದೆ ಅಲ್ಲಿ ಕೆಲವೊಂದು ಉತ್ಪನ್ನಗಳಿಗೆ ಒಂದು ನಿರ್ದಿಷ್ಟ ಬೆಲೆ ನಿಗದಿಪಡಿಸಲಾಗಿರುತ್ತದೆ ಜೊತೆಗೆ ಅಲ್ಲಿ ವಿತರಣಾ ವ್ಯವಸ್ಥೆ ಕೂಡ ಉತ್ತಮವಾಗಿದೆ ಇಂತಹ ವ್ಯವಸ್ಥೆ ನಮ್ಮಲ್ಲು ಜಾರಿಗೊಳಿಸಲು ಪ್ರಯತ್ನಿಸಬಹುದು ಇಂತಹ ವ್ಯವಸ್ತೆ ಜಾರಿಯಾದರೆ ರೈತರು ಗ್ರಾಹಕರು ಮತ್ತು ಇಡೀ ರಾಷ್ಟ್ರವೇ ಲಾಬ ಪಡೆದುಕೊಳ್ಳಲಿದೆ ಈ ನಿಟ್ಟಿನಲ್ಲಿ ಮಾನ್ಯ ಸಚಿವರು ಯೋಚಿಸಿ ಕ್ರಮ ಕೈಗೊಳ್ಳಬೇಕೆಂದು ವಿನಂತಿಸುತ್ತೇನೆ. ಇಷ್ಟು ಮಾತಾಡಲು ಅವಕಾಶ ಮಾಡಿಕೊಟ್ಟ ಗಣ್ಯರಿಗೆ ವಂದಿಸಿ ಮಾತು ಮುಗಿಸುತ್ತೇನೆ ನಮಸ್ಕಾರ.

ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ
ಸತಿಪತಿಗಳೊಂದಾಗದವನ ಭಕ್ತಿ
ಅಮೃತದೊಳು ವಿಷ ಬೆರೆದಂತೆ ಕಾಣಾ ರಾಮನಾಥ!

- ಜೇಡರ ದಾಸಿಮಯ್ಯ

ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ ಒಂದರೆಘಳಿಗೆಯಿತ್ತಡೆ
ನಿನ್ನನಿತ್ತೆ ಕಾಣಾ ರಾಮನಾಥ!

- ಜೇಡರ ದಾಸಿಮಯ್ಯ

## ಅಲ್ಲಂ ವೀರಭದ್ರಪ್ಪನವರು

### ಶಾಸಕರು, ಮಾಜಿ ಸಚಿವರು ಹಾಗೂ ಕೆ.ಪಿ.ಸಿ.ಸಿ. ಮಾಜಿ ಅಧ್ಯಕ್ಷರು

ಶ್ರೀಮತಿ ಬಸವರಾಜೇಶ್ವರಿಯವರು ತಮ್ಮ ಚಿಕ್ಕ ವಯಸ್ಸಿನಲ್ಲಿ ರಾಜಕೀಯ ಪ್ರವೇಶ ಮಾಡಿದರು. ನಮ್ಮ ತಾಯಿ ಶ್ರೀಮತಿ ಅಲ್ಲಂ ಸುಮಂಗಳಮ್ಮ ಅವರ ಸಮಾನವಯಸ್ಕರು ಆಗಿದ್ದ ಅವರು ನಮ್ಮ ತಾಯಿಯವರ ಜೊತೆಯಲ್ಲಿಯೇ ಎಂಎಲ್‌ಎ ಆಗಿ ಆಯ್ಕೆಗೊಂಡು ಅಂದಾಜು 1957 ರಿಂದ 1962 ರವರೆಗಿನ ಅವಧಿಯಲ್ಲಿ ಅಂತಾಕಾಣುತ್ತದೆ ವಿಧಾನಸೌಧ ಪ್ರವೇಶ ಪಡೆದ ಸಾಮಾನ್ಯ ಮಹಿಳೆಯರಪಾಲಿಗೆ ಸೇರ್ಪಡೆಗೊಂಡರು.

ರಾಜಕೀಯಕ್ಷೇತ್ರದಲ್ಲಿ ಒಂದೇ ಮತ ಕ್ಷೇತ್ರದಿಂದ ಒಂದೇ ಪಕ್ಷದ ಚಿನ್ಹೆಯೊಂದಿಗೆ ಸ್ಪರ್ಧಿಸಿದಾಗಲೂ ಅದು ಪರ ಮತ್ತು ವಿರೋಧ ಆಗುವ ಸನ್ನಿವೇಶಗಳೇ ಹೆಚ್ಚು ಅಂಥಹವರಲ್ಲಿ ಶ್ರೀಮತಿ ಬಸವರಾಜೇಶ್ವರಿಯವರು ಎರಡು ಮೂರು ಬೇರೆ ಬೇರೆ ಮತಕ್ಷೇತ್ರಗಳಲ್ಲಿ ಪ್ರತಿನಿಧಿಸಿ, ಚುನಾವಣೆ ಎದುರಿಸಿ ಗೆದ್ದ ಉದಾಹರಣೆ ಇದೆ ಎಂದರೆ ಅವರ ಜನಪ್ರಿಯತೆ ಮತ್ತು ಮತದಾರರೊಂದಿಗಿನ ಅವರ ಭಾವನಾತ್ಮಕ ಸಂಬಂಧ ಎಂಥಹದಿರಬಹುದು. ಓದುಗರೇ ಊಹಿಸಬಹುದು ವಿಧಾನಸಭೆಯಲ್ಲಿ ಪ್ರತಿನಿಧಿಸುವುದರ ಜೊತೆಯಲ್ಲಿ ವಿಧಾನಪರಿಷತ್‌ಗೂ ಆಯ್ಕೆ ಗೊಂಡು ಸಭಾಧ್ಯಕ್ಷರಾಗಿ ಸೇವೆ ಸಲ್ಲಿಸಿದ ದಿಟ ಮಹಿಳೆ ಅವರಾಗಿದ್ದರು ಅವರ ಬಾರಿ ಬಾರಿ ಗೆಲ್ಲುವಿಕೆ ಹಿಂದೆ ಅವರ ಚಾಣಾಕ್ಷತನ ಚತುರತನದ ಜೊತೆಗೆ ಸಮಯಪ್ರಜ್ಞೆಗಳು ಸಾಕ್ಷಿಯಾಗಿ ನಿಲ್ಲುತ್ತವೆ.

ಶ್ರೀಮತಿ ಬಸವರಾಜೇಶ್ವರಿಯವರು ಕೃಷಿ ಸಂಸ್ಥೆಯ ಅಧ್ಯಕ್ಷರಾದಾಗ, ದೆಹಲಿಯಲ್ಲಿ ಇರತಕ್ಕಂಥಹ ರಾಜಕೀಯ ವ್ಯಕ್ತಿಗಳು, ರಾಷ್ಟ್ರ ನಾಯಕರ, ಗಣ್ಯರ ಸಂಪರ್ಕಬೆಳೆಯಿತು. ಹೀಗೆ ಅವರ ವ್ಯಕ್ತಿತ್ವ ವಿಕಶನಗೊಂಡು ರಾಜಕೀಯ ಪ್ರಭಾವದಿಂದ ಅವರಿಗೆ ಬಳ್ಳಾರಿಯ ಲೋಕಸಭೆಯ ಸ್ಥಾನಕ್ಕೆ ಸ್ಪರ್ಧಿಸಲು ಅನುಕೂಲವಾಯಿತು. ಅದೂ ಅಲ್ಲದೇ ಅವರ ಸ್ವ-ಸಾಮರ್ಥ್ಯ ರಾಜಕೀಯ ಅನುಭವದ ಹಿನ್ನೆಲೆಯಲ್ಲಿ ಕೇಂದ್ರ ಸಚಿವರೂ ಆಗಿ ಸೇವೆ ಸಲ್ಲಿಸುವ ಅವಿಕಾಶ ಲಭ್ಯವಾಯಿತು ರಾಜಕೀಯದಲ್ಲಿ ಎಷ್ಟೇ ಪಳಗಿದ್ದರೂ ಕೂಡಾ ಕುಂಟುಂಬದ ಪ್ರತಿ ಸಮಸ್ಯೆಗಳಿಗೆ ಪರಿಹಾರ ಇವರ ಮೂಲಕವೇ ಆಗಬೇಕಾದ ಸನ್ನಿವೇಶ ಸಂದರ್ಭಗಳು ಇದ್ದರೂ ಕೂಡಾ ಎಂದೂ ಇವರು ವಿಚಲಿತಗೊಳ್ಳಲಿಲ್ಲ ಕೃಷಿ ಬಗ್ಗೆ ಬಹಳಷ್ಟು ಶ್ರದ್ಧೆ ಮಕ್ಕಳು ಮತ್ತು ಮೊಮಕ್ಕಳ ಬಗ್ಗೆ ಪ್ರೀತಿ ಮತ್ತು ಮಮಕಾರ ಇವರಲ್ಲಿ ಗುರುತಿಸಬೇಕಾದ ಅತಿ ವಿಶೇಷವಾದ ಗುಣ ಅಂದರೆ ಇವರು ಪ್ರತಿನಿತ್ಯ ಮಾಡುತ್ತಿದ್ದ 'ಶಿವಪೂಜೆ' ಹಾಗೂ ಅತಿಥಿಸತ್ಕಾರ ಒಂದು ಸಲ ನಾವೆಲ್ಲ ದೆಹಲಿಯಲ್ಲಿ ಅವರ ಮನೆಗೆ ಹೋದಾಗ, ಆದಿನ ಬಸವಜಯಂತಿ ಸಚಿವೆಯಾಗಿದ್ದ ಶ್ರೀಮತಿ ಬಸವರಾಜೇಶ್ವರಿಯವರು

ತಾವೇ ಸ್ವತಃ ಅಡಿಗೆ ಮಾಡಿ ಹೋಳಿಗೆ ತುಪ್ಪ ತಿನ್ನಿಸಿದ್ದು ನಮಗೆ ಈಗಲೂ ಅಚ್ಚಳಿಯದೇ ನೆನಪಿನಲ್ಲಿ ಉಳಿದಿದೆ ಅಂಥ ಮಾತೃಸ್ವರೂಪಿ ಅತ್ಯಂತ ನಿರಭಿಮಾನಿಯಾಗಿದ್ದರು. ಉಣ್ಣುವವರ ತೃಪ್ತಿಕಂಡು ಸಂತೋಷಪಡುತ್ತಿದ್ದರು.

ಶ್ರೀಮತಿ ಬಸವರಾಜೇಶ್ವರಿಯವರಿಗೆ ತೆರೆದ ಹೃದಯ ಚಿಕಿತ್ಸೆ ಆದರೂ ಕೂಡಾ-ಶ್ರದ್ಧೆ ಮತ್ತು ಶಿಸ್ತುಬದ್ಧ ಜೀವನ ನಡೆಸಿದ್ದರಿಂದ ಈವರೆಗೆ ಯಾವುದೇ ವೈದ್ಯಕೀಯ ಸಮಸ್ಯೆಗಳಿಗೆ ಅವಕಾಶ ಕೊಟ್ಟಿಲ್ಲ ಅವರು ತಾವೇ ಮನಃಪೂರ್ವಕವಾಗಿ ರಾಜಕೀಯದಿಂದ ನಿವೃತ್ತಿಹೊಂದಿದ್ದರಿಂದ ಆಸ್ಥಾನವನ್ನ ಬೇರೆಯವರು ಪ್ರತಿನಿಧಿಸಲು ಸಾಧ್ಯವಾಯ್ತು ಇಲ್ಲದಿದ್ದರೆ ಈಗ ರಾಷ್ಟ್ರದ ಗಮನ ಸೆಳೆದ ಬಳ್ಳಾರಿಯ ಲೋಕಸಭೆಯ ಸ್ಥಾನ ಅವರಿಗೆ ಇರುತ್ತಿತ್ತು ಜಿಲ್ಲೆಯಲ್ಲಿ ಪ್ರತಿಊರಿನ ಸಮಸ್ಯೆ ಹಾಗೂ ಆ ಸ್ಥಳದ ಪೂರ್ಣಪರಿಚಯ ಅಲ್ಲಿಯ ಮತದಾರರ ಮುಖಂಡರ ಹೆಸರುಗಳು ನಾಲಿಗೆ ತುದಿಯಲ್ಲಿ ಯಾವತ್ತು ಇರುತ್ತುದ್ದಿವು ಅವರು ರಾಜಕೀಯದಲ್ಲಿ ಇದ್ದಷ್ಟೆ ದಿವಸ ಒರ್ವ ಯಶಸ್ವಿ ರಾಜಕಾರಣ ಎಂದು ಸಾಬೀತುಪಡಿಸಿದ್ದಾರೆ. ಸಮಯಕ್ಕೆ ತಕ್ಕಂತೆ ಅನುಕೂಲ ಪರಿಸ್ಥಿತಿ ಇದ್ದರೆ ತಮ್ಮ ನಿರ್ಧಾರಗಳೆ ಆಗಬೇಕೆಂದು ಹೋರಾಟ ಮಾಡಿ ಗೆದ್ದಿದ್ದಾರೆ. ಅಷ್ಟೇ ಸಂದರ್ಭಗಳಲ್ಲಿ ತಮ್ಮ ನಿರ್ಧಾರಕ್ಕೆ ಹೆಚ್ಚಿನ ಬೆಂಬಲ ಇಲ್ಲದಾಗ ತಮ್ಮ ಎದುರು ಗುಂಪಿನ ಜತೆ ರಾಜಿಯಾಗಿ ಸೋಲು ಇಲ್ಲದ ಹಾಗೆ ಮುಂದುವರೆಸಿದ ಸನ್ನಿವೇಶಗಳು ಬಹಳಷ್ಟು ಇವೆ

ಸಾಮಾನ್ಯ ರೈತ ಕುಟುಂಬದಲ್ಲಿ ಹುಟ್ಟಿ ಬೆಳೆದ ದೆಹಲಿಯಲ್ಲಿ ಮಂತ್ರಿಯಾಗಿದ್ದು ನಿಜವಾಗಿಯೂ ನಾವು ಹೆಮ್ಮೆಪಡಬೇಕಾದಂತಹ ವಿಷಯ ಒಟ್ಟಾರೆ ರಾಜಕೀಯದಲ್ಲಿ ತಮ್ಮ ಅನುಭವವನ್ನು ಮುಂದೆ ಇಟ್ಟುಕೊಂಡು ತಾಳ್ಮೆ ಹಾಗೂ ಜಾಣ್ಮೆಯಿಂದ ರಾಜಕೀಯ ಜೀವನವನ್ನು ಹಂತ ಹಂತದಲ್ಲಿ ಎರುತ್ತ ತಮ್ಮ ಸ್ವಂತ ಮನಸ್ಸಿನ ಇಚ್ಛೆಯಂತೆ ನಿವೃತ್ತರಾಗಿರುವುದು ಇದು ರಾಜಕೀಯ ವ್ಯಕ್ತಿಗಳಲ್ಲಿ ಅಪರೂಪದ ಸಂಗತಿ ಇದು ನಾವೆಲ್ಲರೂ ಮೆಚ್ಚಬೇಕಾದಂಥಹ ವಿಚಾರ.

# ಲೀಲಾದೇವಿ ಆರ್ ಪ್ರಸಾದ್

ಮಾಜಿ ಸಚಿವರು, ಬೆಂಗಳೂರು

ಶ್ರೀಮತಿ ಬಸವರಾಜೇಶ್ವರಿಯವರನ್ನು ನಾನು ಕಳೆದ 50 ವರ್ಷಗಳಿಂದ ನೋಡ್ತಾ ಬಂದಿದ್ದೀನಿ ಅಂದ್ರೆ ನಾನು ಚಿಕ್ಕವಳಿದ್ದಾಗಿನಿಂದಾ ನಾನು ಅವರಿಗೆ ಗೊತ್ತು ಅವರು ಮತ್ತವರ ಮನೆತನ ನನಗೆ ಗೊತ್ತು ಉತ್ತರ ಕರ್ನಾಟಕದಂಥಾ ಹಿಂದುಳಿದ ಪ್ರದೇಶದಲ್ಲಿ ಹೆಣ್ಣು ಮಕ್ಕಳು ಹೊರಗೆ ಬರಲು ಸಾಧ್ಯವಿಲ್ಲದಂತಹ ಕಾಲದಲ್ಲಿ ಇವರು ರಾಜಕೀಯ ಪ್ರವೇಶ ಮಾಡಿ, ಸತತ ವಾಗಿ ಜನಪ್ರತಿನಿಧಿಯಾಗಿ ಆಯ್ಕೆಗೊಂಡು ರಾಜ್ಯರಾಷ್ಟ್ರ ಆಳಿದ ಧೀಮಂತ ಮತ್ತು ಧೀರ ಮಹಿಳೆ ಎಂದರೆ ಅತಿಶಯೋಕ್ತಿಯಾಗಲಾರದು.

ಜನಾನುರಾಗಿಯಾಗಿದ್ದ ಇವರು ಚುನಾವಣಾ ಸಂದರ್ಭದಲ್ಲಿ ಓಟು ಕೇಳಲು ಬರುತ್ತಿದ್ದ ರೀತಿ ಮತ್ತು ಆ ದೃಶ್ಯಗಳು ಈಗಲೂ ನನ್ನ ಕಣ್ಣುಂದೆ ಇದೆ. ಸಾವಿರಾರು ಸಂಖ್ಯೆಯಲ್ಲಿ ಇವರ ಬರುವಿಕೆಗಾಗಿ ಇವರನ್ನ ನೋಡಲು ಜನಾಸೇರ್ತಾ ಇದ್ದರು ಹೆಣ್ಣು ಮಕ್ಕಳ ಹೆಚ್ಚಾಗಿ ಇರುತ್ತಿದ್ದರು ಇವರ ಈ ರೀತಿಯ ಆಕರ್ಷಣೆಗೆ ಎರಡು ಕಾರಣಗಳಿದ್ದವೆಂದು ನನ್ನ ಅನಿಸಿಕೆ ಒಂದನೇಯದು ಸ್ಫುರದ್ರೂಪಿಯಾಗಿದ್ದ ಇವರು ರಾಜಮನೆತನಕ್ಕೆ ಸೇರಿದವರು ಮತ್ತು ಸುರಸಂದರಿಯಾಗಿದ್ದ ಇವರು ಬುರ್ಖಾಧರಿಸಿಕೊಂಡು ಬರುತ್ತಿದ್ದುದು ಎರಡನೇ ಕಾರಣವಿರಬಹುದು.

ಇವರು ಸೆರಗೊಡ್ಡಿ "ಅವ್ವಾರೇ ಸೆರಗೊಡ್ಡಿ ಕೇಳ್ತಿನಿ! ಸೆರಗೊಡ್ಡಿ ಬೇಡ್ತಿನಿ! ನಿಮ್ಮ ಓಟುಗಳಿಂದ ನನ್ನ ಉಡಿತುಂಬಿರಲ್ವಾ........ ನಿಮ್ಮ ಸೇವಾ ಮಾಡ್ತಿನ್ರವ್ವಾ..... ಎಂದವರು ಬೇಡುತ್ತಿದ್ದರೆ ಭಾವಪರವಶರಾದ ಜನಜಂಗುಳಿ ಮಗಳು ತವರು ಮನೆಯಿಂದ ಗಂಡನಮನೆಗೆ ಹೋಗುತ್ತಿದ್ದಾಳೆಯೇ ಅನ್ನೊರೀತಿ " ನಿನಗಲ್ಲದೆ ಇನ್ನಾರಿಗೆ ಕೊಡಬೇಕವ್ವಾ ನಾವು ... ಇನ್ನಾರಿಗೆ ಕೊಡಾನವ್ವ ಓಟು" " ನಮ್ಮದ್ದೋಟೂ ನಿನಗ ಮಗಳಾ" ಅಂತ ಹಿರಿಯರು ಅಂದ್ರ .. ಚಿಕ್ಕವರು "ಯವ್ವಾ ನಿನಗಬೇ ನನ್ನೋಟು " ಎಂದು ಆಣೆ ಮಾಡಿ ಹಣೆ ಮುಟ್ಟಿಕೊಳ್ಳುತ್ತಿದ್ದರು ಈ ರೀತಿ ಜನರ ಪ್ರೀತಿ ಆದರ ಗೌರವಕ್ಕೆ ಪಾತ್ರರಾಗಿದ್ದ ಬಸವರಾಜೇಶ್ವರಿಯವರೂ ಸಹ ಜನರ ಕೆಲಸವನ್ನು ಎಂದೂ ಅಲಕ್ಷಮಾಡಿದವರಲ್ಲ.

ಇದನ್ನ ಕಣಾರೆ ಕಂಡ ನಾನು ಮೂಕ ಪ್ರೇಕ್ಷಕಳಾಗಿ ಇವರ ಆಕರ್ಷಣೆಯ ವ್ಯಕ್ತಿತ್ವಕ್ಕೆ ಮಾರುಹೋದೆ ನಾಲ್ಕು ದಶಕಗಳಿಗಿಂತಲೂ ಹೆಚ್ಚು ಕಾಲ ಅವರು ಮೇಲೆರುತ್ತ ಮೇಲೆರುತ್ತ ಹೋಗಿ ರಾಷ್ಟ್ರ ನಾಯಕಿಯಾಗಿದರು, ತಮ್ಮ ಸ್ವಮತಿಕೆ ಮತ್ತು ತಲೆ ತುಂಬಾ ಸೆರಗೊದ್ದು ರಾಜ್ಯದಲ್ಲಿ, ರಾಷ್ಟ್ರದಲ್ಲಿ ಛಾಪು ಮೂಡಿಸಿದ ಕೆಲವೇ ಕೆಲವು ಮಹಿಳಾ ರಾಜಕಾರಣಿಗಳಲ್ಲಿ ಇವರು ಅಗ್ರಗಣ್ಯರು.

ಮನೆಯಲ್ಲಿ ಮಾತ್ರ ಅಪ್ಪಟ ಗೃಹಣಿಯಾಗಿರುತ್ತಿದ್ದರು. ಮನೆಕೆಲಸ, ಅಡುಗೆ ಎಲ್ಲವನ್ನೂ ತಾವೇ ಮಾಡುತ್ತಿದ್ದರೆಂದರೆ ಅಚ್ಚರಿಸಂಗತಿ ಈಗಿನ ಪೀಳಿಗೆಯವರಿಗೆ, ಒಮ್ಮೆ ನಾನವರ ಮನೆಗೆ ಹೋದಾಗ ಒಂದು ಚೀಲ ಜೋಳವನ್ನು (100 ಕೆ.ಜಿ) ತೊಳೆದು ಒಣಗಾಕೀನಿ ಅಂತಾ ಹೇಳಿದ್ರು ಮತ್ತು ಅದನ್ನ ತೋರಿಸಿದ್ರು ಇಂಥಾ ಗಟ್ಟಿಗಿತ್ತಿ ಮಹಿಳೆಯಾಗಿದ್ರು ನಮ್ಮ ಬಸವರಾಜೇಶ್ವರಿಯವರು. ಅತಿಥಿ ಸತ್ಕಾರದಲ್ಲಿ ಅವರು ತುಂಬಾ ವಿಶಾಲ ಹೃದಯಿಗಳು ಎಂಥ ಕಷ್ಟ ಕಾಲದಲ್ಲೂ ನಗನಗ್ತಾ ನಿಭಾಯಿಸುತ್ತಿದ್ದರು ಅದು ಅವರ ದೊಡ್ಡಗುಣ ಮೊಟ್ಟ ಮೊದಲ "ಮಹಿಳಾ ಕೋಶ"ವನ್ನು ಹುಟ್ಟುಹಾಕಿದ ಕೀರ್ತಿ ಅವರದು ಇಂಥಾ ಅಮೋಘ ವ್ಯಕ್ತಿತ್ವ ಅನುಕರಣೀಯ ಬದುಕು ನೀಡಿದ ಶ್ರೀಮತಿ ಬಸವರಾಜೇಶ್ವರಿಯವರು ನೂರು ಕಾಲ ಬಾಳಲಿ ಎಂದು ಮನತುಂಬಿ ಹಾರೈಸುತ್ತೇನೆ.

## ಬಿ.ಟಿ. ಲಲಿತಾನಾಯಕ್,

ಮಾಜಿ ಸಚಿವರು, ಬೆಂಗಳೂರು

ಉತ್ತರ ಕರ್ನಾಟಕದ ಭಾಗದಲ್ಲಿ ಹೆಣ್ಣುಮಕ್ಕಳು ಕಟ್ಟಕಡೆಯ ಸ್ಥಾನದಲ್ಲಿ ಉಳಿದಿದ್ದಂಥ ಕಾಲದಲ್ಲಿ ಶ್ರೀಮತಿ ಬಸವರಾಜೇಶ್ವರಿಯವರು ಅಚ್ಚರಿಹುಟ್ಟಿಸುವ ರೀತಿಯಲ್ಲಿ ಸಂಸತ್ತಿನ ಕೋಟೆಯನ್ನು ಭೇದಿಸಿ ಅನಭಿಷಿಕ್ತ ಸ್ವಾತಂತ್ರ್ಯವಾದಿಯಾಗಿ ಮೆರೆದಿದ್ದು ಪವಾಡದೃಶ್ಯವಾದದ್ದು ಎಂದು ನನಗನಿಸುತ್ತದೆ.

ರಾಜಕೀಯ ಪಟುತ್ವ ಜನಸಾಮಾನ್ಯರನ್ನು ಸ್ಪಂದಿಸುವ ಸಾಮಾಜಿಕ ಸ್ಪಂದನೆ ಜಾತಿ ಮತ ಲಿಂಗಭೇಧಗಳನ್ನು ಮೀರಿ ಆಲೋಚಿಸುವಂತಹ ಪ್ರೌಢತ್ವವನ್ನು ಬೆಳೆಸಿಕೊಂಡಿದ್ದ ಬಸವರಾಜೇಶ್ವರಿಯವರು ಕೆಲವೇ ಕೆಲವು ಅಪರೂಪದ ಮಹಿಳಾ ರಾಜಕಾರಣಿಗಳಲ್ಲಿ ಒಬ್ಬರು.

ನಾನು ಸಚಿವೆಯಿದ್ದ ಸಂದರ್ಭದಲ್ಲಿ ಬಸವರಾಜೇಶ್ವರಿಯವರೊಡನೆ ದೆಹಲಿಗೆ ರೈಲಿನಲ್ಲಿ ಪ್ರಯಾಣಿಸುವಾಗ ಹಲವಾರು ರಾಜಕೀಯ ವಿಷಯಗಳನ್ನು ಚರ್ಚಿಸಿದ್ದುಂಟು ದೆಹಲಿಯ ಅವರ ನಿವಾಸದಲ್ಲಿಯೂ ಕೂಡ ನನಗೆ ಅವರೊಡನೆ ಕರ್ನಾಟಕದ ಮಹಿಳೆಯರ ಮಕ್ಕಳ ಸ್ಥಿತಿಗತಿಗಳನ್ನು ಕುರಿತು ಅಭಿಪ್ರಾಯವನ್ನು ಹಂಚಿಕೊಳ್ಳುವ ಅವಕಾಶ ಲಭ್ಯವಾಗಿತ್ತು ಆ ಸಂದರ್ಭದಲ್ಲಿ ಬಸವರಾಜೇಶ್ವರಿಯವರ ಅನುಭವದ ಆಳ ವಿಸ್ತಾರವನ್ನು ಸಾಮಾಜಿಕ ಕಳಕಳಿಯನ್ನು ಅರಿಯಲು ನನಗೆ ಸಾಧ್ಯವಾಯಿತು.

ಎಷ್ಟೋ ಜನ ಮಹಿಳೆಯರು ರಾಜಕೀಯಕ್ಕೆ ಬಂದಿದ್ದೇವೆ ಆದರೆ ಬಸವರಾಜೇಶ್ವರಿಯವರಂತೆ ಮೂಲಭೂತ ಉಡುಪು ತೊಡಪು ಊಟ-ಉಪಚಾರ ಸರಳತೆ ಮನೆತನದ ಘನತೆ ಗಾಂಭೀರ್ಯಗಳನ್ನೆಲ್ಲಾ ಉಳಿಸಿಕೊಂಡಿರುವಂಥಹ ವೈಶಿಷ್ಟವಿರುವುದು ನಾನು ಕಂಡಂತೆ ಅವರೊಬ್ಬರಲ್ಲಿ ಮಾತ್ರ.

ಎತ್ತು ನಿಮ್ಮ ದಾನ ಬಿತ್ತು ನಿಮ್ಮ ದಾನ
ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ಹೇಳಾ ರಾಮನಾಥ!

- ಜೇಡರ ದಾಸಿಮಯ್ಯ

ಕುಲಛಲವ ಬಿಟ್ಟು ನಿಮ್ಮನೊಲಿಸಿದ ಶರಣರಿಗೆ
ತಲೆವಾಗುವೆ ನಾನು ಕುಲಜರೆಂದು
ಬೆಬ್ಬನೆ ಬೆರತು ನಿಮ್ಮನೊಲಿಸಿದ ಶರಣರಿಗೆ
ತಲೆವಾಗದವನ ತಲೆ ಶೂಲದ ಮೇಲಣ ತಲೆ ಕಾಣಾ ರಾಮನಾಥ!

- ಜೇಡರ ದಾಸಿಮಯ್ಯ





ಅರ್ಜುನ್‌ಸಿಂಗ್ ಮತ್ತಿತರ ಗಣ್ಯರೊಂದಿಗೆ ಬಸವರಾಜೇಶ್ವರಿ




ಚೈನಾದಲ್ಲಿ ಪ್ರತಿಭಟನೆ





ಪಂಚಾಯತಿ ಸಭೆಯಲ್ಲಿ ಬಸವರಾಜೇಶ್ವರಿ



ಕರಣಸಿಂಗ್ ಮತ್ತಿತರ ಕಾಶ್ಮೀರದ ಗಣ್ಯರೊಂದಿಗೆ ಬಸವರಾಜೇಶ್ವರಿ





ವಿದೇಶಿ ಗಣ್ಯರೊಂದಿಗೆ ಚೈನಾದಲ್ಲಿ ಬಸವರಾಜೇಶ್ವರಿಯವರು




ವಿಜಯಭಾಸ್ಕರರೆಡ್ಡಿಯವರೊಂದಿಗೆ ಬಸವರಾಜೇಶ್ವರಿ





ಮಾಜಿ ಪ್ರಧಾನಿ ರಾಜೀವಗಾಂಧಿಯವರೊಂದಿಗೆ



ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವೆಯಾಗಿ ಬಸವರಾಜೇಶ್ವರಿ





ಮಗ ಯಶವಂತ ಭೂಪಾಲಕರೊಂದಿಗೆ




ಬಳ್ಳಾರಿ ಜಿಲ್ಲಾ ಕಾಂಗ್ರೆಸ್ ಸಭೆ





ತಾಯಿಯೊಂದಿಗೆ



ಸಾಮಾನ್ಯ ಮಹಿಳೆಯಿಂದ ಅಸಾಮಾನ್ಯ ಮಹಿಳೆಗೆ ಸನ್ಮಾನ






ಬಾಲವಿಕಾಸ ವಿದ್ಯಾಲಯದ ಕಾರ್ಯಕ್ರಮದಲ್ಲಿ



ರಾಷ್ಟ್ರಪತಿ ಶಂಕರದಯಾಳ್ ಶರ್ಮಾ ದಂಪತಿಗಳೊಂದಿಗೆ





ರಾಷ್ಟ್ರೀಯ ಕಾರ್ಯಕ್ರಮದಲ್ಲಿ



ಮಹೇಶ್ ದೇಸಿಕಾ ಸ್ನೇಹಿತರೊಂದಿಗೆ





ವಿದೇಶಿ ಗಣ್ಯರೊಂದಿಗೆ




ಕೆ.ಡಿ.ಎಸ್. ದಿನ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಾಗಲೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ॥ ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ॥ ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ಪಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ|| ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | |

ಬಸವರಾಜೇಶ್ವರಿ

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |



ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು-58

0126